ಹಂಸ ಸಾಹಿತ್ಯ ಮಾಲೆ—೧೧

# ಪರೀಕ್ಷೆ

ವೈ. ವಿ. ಇಂದಿರಾಬಾಯಿ

ಡಿ. ವಿ. ಕೆ. ಮೂರ್ತಿ — ಪ್ರಕಾಶಕರು — ಮೈಸೂರು

# ಪರೀಕ್ಷೆ

"ಲಲಿತಾ, ಲಲಿತಾ" ಮಾಲತಿ ಕೂಗಿದಳು.

ನಾರಾಯಣ ಅಡಿಗೆ ಮನೆಯಿಂದ ಬರುತ್ತಿದ್ದವನು, ಮಾಲತಿ ಕೂಗಿದ್ದನ್ನು ಕೇಳಿ ಅಲ್ಲಿಯೇ ನಿಂತು ತಂಗಿಗೆ ಗಟ್ಟಿಯಾಗಿ ಹೇಳಿದ,

"ಲಲಿತಾ ಯಾರೋ ಬಂದಿದ್ದಾರೆ, ನೋಡು"

"ಬಂದೇ ಅಣ್ಣಾ, ಅವಳನ್ನು ಒಳಗಡೆ ಬಂದು ಕುಳಿತುಕೊ ಎಂದು ಹೇಳುತ್ತೀಯಾ? ಈಗ ಬಂದುಬಿಡುತ್ತೇನೆ"

"ಬನ್ನಿ, ಒಳಗಡೆ ಕುಳಿತಿರಿ. ಲಲಿತಾ ಈಗ ಬರುತ್ತಾಳೆ" ಮಾಲತಿಗೆ ನಾರಾಯಣ ಹೇಳಿದ. ಮಾಲತಿ ಸುಮ್ಮನೆ ಅಲ್ಲಿಯೇ ನಿಂತಿದ್ದಳು. ನಾರಾಯಣ ಅವಳ ಕಡೆಗೆ ಒಂದು ಬಾರಿ ನೋಡಿ ತನ್ನ ಕೊಠಡಿಗೆ ಹೋದ.

ಲಲಿತೆ ಈಚೆಗೆ ಬರಲು ಎರಡು ನಿಮಿಷಗಳು ಬೇಕಾದುವು. ಬಳಿಕ ಹಜಾರದಿಂದಲೇ "ಕ್ಷಮಿಸು ಮಾಲಾ, ತುಂಬಾ ಕಾಯಿಸಿಬಿಟ್ಟೆ" ಎನ್ನುತ್ತ ಸರಸರನೆ ಬಂದಳು.

"ಓಹೋ ಮಾಲಾ! ಎಂಥ ಹೆಸರು! ಯಾರೋ ಹೊಸ ಗೆಳತಿಯಿರಬೇಕು" ಎಂದುಕೊಂಡ ನಾರಾಯಣ.

ಅವರಾಡುತ್ತಿದ್ದ ಮಾತುಗಳು ಸ್ಪಷ್ಟವಾಗಿ ಅವನ ಕಿವಿಗೆ ಬೀಳುತ್ತಿದ್ದುವು.

"ಈಗ ತಾನೇ ಬಂದೆ ಲಲಿತ. ಏನು ಮಹಾ ಕಾಯಿಸಿರಬಹುದು ನೀನು?" ಎಂದು ಮಾಲತಿ ಕೇಳಿದಳು, "ಇವತ್ತು ಪರೀಕ್ಷೆಯ ಪ್ರವೇಶ ಪತ್ರಿಕೆಯನ್ನು ಕೊಡುತ್ತಾರಂತೆ. ಲಕ್ಷ್ಮಿ ಹೇಳಿಕಳುಹಿಸಿದ್ದಳು. ಊಟವಾಯ್ತೆ ನಿನ್ನದು? ಆಗಿದ್ದರೆ ಈಗಲೇ ಹೋಗಿ ತಂದುಬಿಡಬಹುದು."

"ಆಗಲೇ ಅದೂ ಬಂದುಬಿಟ್ಟಿತೆ! ನಿನಗೆ ಸಂತೋಷ, ಅಲ್ಲವೇ ಮಾಲಾ? ಪರೀಕ್ಷೆಗೆ ನೀನು ಪೂರ್ತಿ ಸಿದ್ಧಳಾಗಿ ಆಗಲೇ ಒಂದು ವಾರ

ವಾದರೂ ಆಗಿರಬೇಕು. ಅದಕ್ಕೇ ನಿನ್ನ ಮುಖದಲ್ಲಿ ಹುಡುಕಿದರೂ ಚಿಂತೆಯ ಸುಳಿವಿಲ್ಲ"

ತಂಗಿಯ ಮಾತುಗಳನ್ನು ಕೇಳುತ್ತ ನಾರಾಯಣ ಅಂದುಕೊಂಡ:

"ಎಷ್ಟು ಹುಚ್ಚು ಹುಚ್ಚಾಗಿ ಮಾತನಾಡುತ್ತಾಳೆ ಲಲಿತ!"

ಮಾಲತಿಯೂ ಮಾತಿನಲ್ಲಿ ಲಲಿತೆಯಂತೆಯೇ.

"ಒಂದೇ ವಾರವೆಂದು ಹೇಳುತ್ತೀಯಲ್ಲ ಲಲಿತಾ? ನಾನು ಓದು ವುದನ್ನು ನಿಲ್ಲಿಸಿ ಒಂದು ವರ್ಷಕ್ಕೆ ಬಂದಿತು. ಇನ್ನು ಚಿಂತೆ ಮಾಡಿ ಫಲವೇನು ಹೇಳು. ಪರೀಕ್ಷೆಗೆ ಕಟ್ಟಿದ್ದಕ್ಕೆ ನನಗೆ ಸಿಗುವ ಫಲ ಈ ಪ್ರವೇಶ ಪತ್ರಿಕೆ ಅಷ್ಟೆ"

"ಅಲ್ಲವೇ ಮತ್ತೆ? ಮಾಲಾ, ಯಾರಿಗೆ ಹೇಳಿಕೊಡುತ್ತೀ ಇದನ್ನು ನೀನು? ಒಂದು ಮಾತು—ನೀನು ಹೇಳಿದ್ದು ನಿಜವಿರಬಹುದು ಅನ್ನು. ನೀನು ಓದುವಿಯೇಕೆ ಮಾಲಾ? ಕಾಲೇಜಿನಲ್ಲಿ ಪಾಠ ನಡೆಯುವಾಗಲೇ ನಿನ್ನ ಮೆದುಳು ಎಲ್ಲವನ್ನೂ ಸಂಪೂರ್ಣವಾಗಿ ಗ್ರಹಿಸಿಬಿಟ್ಟಿದೆ.... ನಮ್ಮಂಥಾ ದಡ್ಡರಿಗೆ ತಾನೇ ಕಷ್ಟ! ಪರೀಕ್ಷೆ ಹತ್ತಿರ ಬರುತ್ತಿದೆ ಎಂಬ ಹೆದರಿಕೆಯಲ್ಲಿ ಯಾವುದನ್ನು ಓದಲು ಹೋದರೂ ಅದು ಅರ್ಥವೇ ಆಗು ವುದಿಲ್ಲ. ಏನೂ ಬರುವುದಿಲ್ಲವಲ್ಲ ಎನ್ನುವ ಚಿಂತೆಯಲ್ಲಿ ರಾತ್ರೆ ನಿದ್ದೆ ಬರುವುದಿಲ್ಲ ಸರಿಯಾಗಿ; ಊಟವೂ ಬೇಕಾಗುವುದಿಲ್ಲ. ಒಟ್ಟಿನಲ್ಲಿ ಇಲ್ಲಿ ಓದೂ ಇಲ್ಲ, ಅಲ್ಲಿ ಇದ್ದ ಆರೋಗ್ಯವೂ ಕೆಡುತ್ತದೆ........"

"ಸಾಕು ಲಲಿತ. ಹೀಗೆ ಹೇಳುವವರೇ ಚೆನ್ನಾಗಿ ಪ್ರಥಮ ಶ್ರೇಣಿ ಯಲ್ಲಿ ತೇರ್ಗಡೆಯಾಗುವವರು. ನಿನಗಂತೂ ಪ್ರಥಮ ಶ್ರೇಣಿಯಲ್ಲಿ ಪ್ರಥಮ ಸ್ಥಾನ ದೊರಕಿದರೂ ನನಗೆ ಆಶ್ಚರ್ಯವಾಗುವುದಿಲ್ಲ........"

"ಆಹಾ, ಮಾಲತಿ! ಪರವಾ ಇಲ್ಲ ನೀನು, ಏನೋ ಅಂತಿದ್ದೆ! ಪ್ರತಿವರ್ಷ ತರಗತಿಯಲ್ಲಿ ಮೊದಲನೆಯವಳಾಗಿ ನಿಂತು, ಎಷ್ಟೋ ಪತ್ರಿಕೆಗಳಲ್ಲಿ ನೂರಕ್ಕೆ ನೂರು ಅಂಕಗಳನ್ನು ಪಡೆಯುವ ನೀನು, ಎಲ್ಲೋ ಕೊನೆಯಲ್ಲಿ ಬರುವ ನನ್ನನ್ನು ಹಾಸ್ಯ ಮಾಡುತ್ತೀಯಾ?

ಹಾಗಾದರೆ ಹೋಗು, ನಾನು ಪ್ರವೇಶ ಪತ್ರಿಕೆಯನ್ನೇ ತೆಗೆದುಕೊಳ್ಳು ವುದಿಲ್ಲ."

"ಬೇಡ, ಬಿಡು. ನಾನೂ ತೆಗೆದುಕೊಳ್ಳುವುದಿಲ್ಲ"

"ಛೀ!, ಈ ಹುಡಿಗೆಯರು ಪದವೀಧರರಾಗುವ ಸ್ಥಿತಿಗೆ ಬಂದರೂ ಎಳೆಯ ಮಕ್ಕಳಂತೆ ಜಗಳವಾಡುತ್ತಾರಲ್ಲ, ಅದೂ ಬೀದಿಯ ಬಾಗಿಲಿನಲ್ಲಿ!" ಎಂದುಕೊಂಡು ನಾರಾಯಣ ತಂಗಿಯನ್ನು ಕೂಗಿದ: "ಲಲಿತಾ, ಇಲ್ಲೆ ಸ್ವಲ್ಪ ಬಾ"

"ಏನಣ್ಣಾ, ಬಂದೆ," ಎಂದು ಅವನಿಗೆ ಹೇಳಿ ಲಲಿತೆ ಮಾಲತಿಗೆ ಹೇಳಿದಳು, "ಒಂದು ನಿಮಿಷ ಮಾಲಾ, ನಮ್ಮಣ್ಣ ಏಕೋ ಕೂಗುತ್ತಾರೆ, ಅದೇನೊ ಕೇಳಿ ಬರುತ್ತೇನೆ"

"ಎಲ್ಲೋ ಗುಗ್ಗು" ಎಂದು ನಾರಾಯಣ ಲಲಿತೆಯ ಕಡೆಗೆ ತಿರುಗಿದ, "ಲಲಿತಾ ಬಂದವರನ್ನು ಎಷ್ಟು ಹೊತ್ತು ಬೀದಿಯ ಬಾಗ್ಲಿನಲ್ಲಿ ನಿಲ್ಲಿಸಿ ಮಾತನಾಡಿಸುವುದು? ಇಷ್ಟು ದೊಡ್ಡ ಹುಡುಗಿ, ಇನ್ನೂ ನಡತೆ ತಿಳಿಯದಲ್ಲಮ್ಮ ನಿನಗೆ?"

"ಓ! ತಪ್ಪಾಯಿತು ಅಣ್ಣಾ ತಪ್ಪಾಯಿತು. ಆದರೆ ಈ ಪುಣ್ಯಾತ್ಮಗಿತ್ತಿ ಮಾಲತಿಗೆ ಒಳಗೆ ಬರುವುದಕ್ಕೇ ಇವತ್ತು ಏನೋ ನಾಚಿಕೆ. ನೀನು ಇದ್ದೀಯೆ ಅಂತಲೋ ಏನೋ" ಎಂದು ಹೇಳಿ ಲಲಿತ ಓಡಿಹೋದಳು ಹಿಂದಿರುಗಿ.

ಇವರಿಬ್ಬರ ಮಾತುಗಳು ಮಾಲತಿಗೆ ಕೇಳಿಸಿತ್ತು. ಅವಳು ಆಗಲೇ ಒಳಕ್ಕೆ ಕಾಲಿರಿಸುತ್ತಿದ್ದಳು. ಲಲಿತ ನಗುತ್ತ,

"ಬಾ ಒಳಕ್ಕೆ ಹೋಗಿ ಊಟದ ಮನೆಯಲ್ಲೇ ಕುಳಿತು ಬಿಡೋಣ. ಇನ್ನು ಹತ್ತು ನಿಮಿಷಗಳು ಬೇಕಾದೀತು ನಾನು ಹೆರಳು ಹಾಕಿಕೊಂಡು ಹೊರಡಲು ಸಿದ್ಧಳಾಗುವುದಕ್ಕೆ" ಎಂದು ಅವಳನ್ನು ಒಳಕ್ಕೆ ಕರೆದೊಯ್ದಳು.

"ಓಹೋ! ಮಾಲತಿಯೆ ಈ ಹುಡುಗಿ!" ಎಂದು ಚಕಿತನಾದ ನಾರಾಯಣ. ಅವರ ಮಾತುಗಳು ಈಗ ಅಸ್ಪಷ್ಟವಾಗಿ ಕೇಳಿಸುತ್ತಿದ್ದುವು

ಕೊರಡಿಯಲ್ಲಿ. ಬಹಶಃ ಅಮ್ಮ ಕೂಡ ಅವರೊಂದಿಗೆ ಹರಟೆಗೆ ಸೇರಿರಬೇಕು." ಎಂದುಕೊಂಡ ಅವನು.

ಮಾಲತಿ ನಾರಾಯಣನಿಗೆ ಹೊಸಬಳಲ್ಲ. ಎರಡು ವರ್ಷಗಳ ಹಿಂದೆ ಅವನಿಲ್ಲಿಯೇ ಓದುತ್ತಿದ್ದಾಗ ಅವಳನ್ನು ನಿತ್ಯ ತಂಗಿಯೊಡನೆ ನೋಡುತ್ತಿದ್ದ. ಆದರೂ ಇವತ್ತು ಅವನಿಗೆ ಅವಳ ಗುರುತು ಸಿಕ್ಕಲಿಲ್ಲ. ಅದು ಹೇಗೆ ತಾನೇ ಸಿಕ್ಕೀತು? ಆಗ ಅವಳು ಇದ್ದುದೇ ಬೇರೆಯ ತರಹ, ಶುದ್ಧ ಹರಕು ಮುರುಕು, ತಲೆಗೆದರಿದ ಹುಡುಗಿ, ಅದರಿಂದ ಅವನು ಅವಳ ಕಡೆಗೆ ಸರಿಯಾಗಿ ನೋಡ ಸಹ ಇರಲಿಲ್ಲ. ಆದರೆ ಇವತ್ತು ಅವಳು, ಉಟ್ಟಿದ್ದುದು ಮಿಲ್ಲಿನ ಸೀರೆಯಾದರೂ,........

"ಪರವಾ ಇಲ್ಲ ಲಲಿತ! ಒಳ್ಳೇ ಗೆಳತಿಯರನ್ನೇ ಆರಿಸಿಕೊಂಡಿದ್ದಾಳೆ." ಎಂದುಕೊಂಡ.

ಪ್ರವೇಶ ಪತ್ರಿಕೆಯನ್ನು ತಂದ ಮೇಲೆ ಲಲಿತ ಸದಾ ಓದುವುದಕ್ಕೆ ಪ್ರಾರಂಭಿಸಿಬಿಟ್ಟಳು. ತನ್ನ ಓದನ್ನು ಅದೇ ತಾನೇ ಮುಗಿಸಿ ಬಂದಿದ್ದ ನಾರಾಯಣನಿಗೆ ಇದು ವಿನೋದವಾಗಿ ಕಂಡಿತು.

"ಲಲಿತಾ, ಸದಾ ಓದಬೇಡ, ಪರೀಕ್ಷೆ ಹೊತ್ತಿಗೆ ಹುಚ್ಚುಗಿಚ್ಚು ಹಿಡಿದೀತು ಇಲ್ಲದಿದ್ದರೆ" ಎಂದ ಒಂದು ಸಲ.

"ಹಾಗಾದರೂ ಆಗಲಿ ಅಣ್ಣ. ಆಗ ಯಾರೂ ನನ್ನನ್ನು ಹಾಸ್ಯ ಮಾಡಿದರೂ ತಿಳಿಯುವುದಿಲ್ಲ. ಅಪಮಾನದ ಅನುಭವವಾಗುವುದಿಲ್ಲ" ಎಂದುತ್ತರ ಕೊಟ್ಟಳು ಲಲಿತ.

"ಅರೇ! ನಿಜ ಲಲಿತಾ, ನನಗೆ ಇದು ಹೊಳೆಯಲಿಲ್ಲ" ಎಂದು ನಕ್ಕ ನಾರಾಯಣ, "ನಿನ್ನ ಗೆಳತಿಯೂ ಹೀಗೆಯೇ ಓದುತ್ತಾಳೆಯೋ?"

"ನನಗೆ ಗೊತ್ತಿಲ್ಲ ಅಣ್ಣ. ಬಹುಶಃ ಇಲ್ಲ ಅಂತ ತೋರುತ್ತೆ. ಎಲ್ಲರಿಗೂ ಒಂದೇ ತರಹ ಅವಕಾಶ, ಅನುಕೂಲಗಳು ಇರುತ್ತದೆಯೆ?"

"ನಿನ್ನ ಸ್ನೇಹಿತೆಯೇನೋ ಅನುಕೂಲಸ್ಥಳಂತೆಯೇ ಇದ್ದಾಳೆ"

"ಆಹಾ, ಅದೇ ನಿನಗೆ ಗೊತ್ತಾಗುವುದು" ಎಂದಳು ಲಲಿತ, "ಪಾಪ! ಅವಳು ಮನೆಯಲ್ಲಿ ಅಡಿಗೆ ಮಾಡಿ, ಕಸಮುಸರೆ ಮಾಡಿ

ಕೊಂಡು ಕಾಲೇಜಿಗೆ ಬರಬೇಕು ನಿತ್ಯ, ಗೊತ್ತೇ ಅಣ್ಣ? ಜೊತೆಗೆ ಮನೆಯಲ್ಲಿ ಎಷ್ಟು ತರಕಾರಿ ಬೆಳೆಯುತ್ತಾಳೆ! ಅವಳ ಸ್ಥಳದಲ್ಲಿ ನಾನು ಇದ್ದಿದ್ದರೆ ಎಂದೋ ಓದು ಬಿಟ್ಟುಬಿಡುತ್ತಿದ್ದೆ"

"ಏಕೆ ಲಲಿತ, ಮಾಲತಿಗೆ ತಾಯಿ ಇಲ್ಲವೇ?"

"ಇದ್ದಾರಣ್ಣಾ. ಅವಳಿಗೆ ಅವರೊಬ್ಬರೇ ಇರುವುದು. ಅವರು ಆಸ್ಪತ್ರೆಯಲ್ಲಿ ದಾದಿಯ ಕೆಲಸ ಮಾಡುತ್ತಾರೆ. ಬೆಳಿಗ್ಗೆ ಏಳು ಗಂಟೆಗೆ ಹೊರಟರೆ ಮನೆಯಿಂದ ಸಂಜೆಗೇ ಬರುವುದು ಹಿಂದಿರುಗಿ."

"ತುಂಬಾ ಬಡವರೇ ಅವರು ಲಲಿತ?" ಸಿರಿವಂತರ ಮರುಕದಿಂದ ನಾರಾಯಣ ಕೇಳಿದ.

"ಏನೋ? ನಮ್ಮಂತೆಯೇ ಊಟಮಾಡುತ್ತಾರೆ, ಶುಭ್ರವಸ್ತ್ರ ಗಳನ್ನು ಹಾಕಿಕೊಳ್ಳುತ್ತಾರೆ." ಲಲಿತೆ ನಗುತ್ತ ಹೇಳಿದಳು, "ಮಾಲತಿ ಬಹಳ ಅಭಿಮಾನಿನಿ ಅಣ್ಣಾ. ತನ್ನ ಕಷ್ಟಗಳನ್ನು ಇನ್ನೊಬ್ಬರಿಗೆ ಹೇಳಿ ಕೊಂಡು ಅಳಬೇಕು ಎನ್ನುವ ಬುದ್ಧಿ ಅವಳಲ್ಲಿ ಇಲ್ಲ, ನನಗಿಂತ ಖುಷಿ ಯಾಗಿ ಇರುತ್ತಾಳೆ ಯಾವಾಗಲೂ"

"ಹುಂ!" ಎಂದ ನಾರಾಯಣ.

ನಾರಾಯಣ ಲಲಿತೆಯನ್ನು ಹಾಸ್ಯಮಾಡಿದರೂ, ಅವಳು ಪರೀಕ್ಷೆ ಯಲ್ಲಿ ಚೆನ್ನಾಗಿ ಮಾಡಬೇಕೆಂದು ಅವನಿಗೂ ಅಭಿಲಾಷೆಯಿದ್ದಿತು. ಅವಳು ಕೇಳಿದಾಗಲೆಲ್ಲ, ಬೇಸರ ತೋರಿಸದೆ ಪಾಠ ಹೇಳಿಕೊಡುತ್ತಿದ್ದ.

ಪರೀಕ್ಷೆಯ ದಿನ ಬಂದಿತು. ತಂಗಿಯನ್ನು ಪರೀಕ್ಷೆಗೆ ಕಳುಹಿಸು ವುದಕ್ಕೆ ಮುಂಚೆ ಅವಳಿಗೆ ಅವನು ಬೇಕಾದಷ್ಟು ಸಲಹೆ, ಧೈರ್ಯಗಳನ್ನು ಕೊಟ್ಟ,

"ಮುಂಚೆ, ಎಲ್ಲ ಪ್ರಶ್ನೆಗಳನ್ನೂ ಓದಿ, ಎಷ್ಟಕ್ಕೆ ಉತ್ತರ ಬರೆಯ ಬೇಕು ಅಂತ ನೋಡಿಕೊಂಡು, ಯಾವ ಯಾವ ಪ್ರಶ್ನೆಗಳಿಗೆ ಉತ್ತರ ಬರೆಯಬೇಕು ಅಂತ ಇರುತ್ತೀಯೋ ಅದನ್ನು ಗುರುತು ಹಾಕಿಕೋ. ಆಮೇಲೆ ಅವುಗಳಲ್ಲಿ ಅತ್ಯಂತ ಸುಲಭವಾದ ಪ್ರಶ್ನೆಯಿಂದ ಉತ್ತರ ಬರೆಯಲು ಪ್ರಾರಂಭ ಮಾಡು........"

ಅವಳೂ ಧಾರಾಳವಾಗಿ ಅಣ್ಣನ ಸಹಾನುಭೂತಿಯನ್ನು ಸೂರೆ ಮಾಡಿದಳು,

"ಅಣ್ಣಾ, ನಿನ್ನ ಪೆನ್ನನ್ನೂ ತೆಗೆದುಕೊಂಡು ಹೋಗ್ತೀನಣ್ಣ ಪರೀಕ್ಷೆಗೆ. ಅದಕ್ಕೆ ಶಾಯಿ ತುಂಬಿಕೊಡುತ್ತೀಯಾ ?"

ನಾರಾಯಣನಿಗೆ ಬಹುಮಾನ ಬಂದಿದ್ದ ಪೆನ್ನು ಅದು. ಅವನು ಸ್ವಲ್ಪ ಹಿಂದು ಮುಂದು ನೋಡಿ ಬಳಿಕ, "ಆಗಲಿ, ನಿನ್ನ ಪೆನ್ನನ್ನೂ ಕೊಡು, ಅದನ್ನೂ ತೊಳೆದು, ಶಾಯಿ ತುಂಬಿಕೊಡುತ್ತೇನೆ" ಎಂದೇ ಬಿಟ್ಟ.

ಲಲಿತೆಯ ಪರೀಕ್ಷೆ ಪ್ರಾರಂಭವಾದಮೇಲೆ ಅವನು ಅವಳ ವಿಷಯ ದಲ್ಲಿ ಮತ್ತೂ ಆಸಕ್ತಿ ವಹಿಸಿದ. ನಿತ್ಯ ಮಧ್ಯಾಹ್ನ ಹಾಗೇ ಸೈಕಲ್ ಹಾಕಿಕೊಂಡು ಪರೀಕ್ಷಾ ಕೇಂದ್ರಕ್ಕೆ ಹೋಗಿ, ಬೆಳಗಿನ ಪತ್ರಿಕೆಯಲ್ಲಿ ಅವಳು ಹೇಗೆ ಮಾಡಿದ್ದಾಳೆ ಎಂದು ವಿಚಾರಿಸಿ, ಮನೆಗೆ ಬಂದು ತಂದೆ ತಾಯಿಗಳಿಗೆ ಹೇಳುವುದೂ ಅವನ ಕೆಲಸವಾಯಿತು.

ಮಾಲತಿಯೂ ಸ್ವಲ್ಪ ದೂರದಲ್ಲಿ ಉಳಿದ ಹುಡುಗಿಯರೊಡನೆ ಇರುತ್ತಿದ್ದಳು. ಅವಳು ಹೇಗೆ ಮಾಡಿದ್ದಾಳೆ ಎಂದು ತಿಳಿಯಲು ಇವನಿಗೆ ಕುತೂಹಲವಾಗುತ್ತಿತ್ತು.

"ನಿನ್ನ ಸ್ನೇಹಿತೆ ಹೇಗೆ ಮಾಡಿದ್ದಾಳೆ ಲಲಿತ ?" ಎಂದು ಕೇಳಿದ ಒಂದು ದಿನ.

"ಓ, ಅವಳಿಗೇನಣ್ಣ. ಸೊಗಸಾಗಿಮಾಡಿದ್ದಾಳೆ" ಎಂದಳು ಲಲಿತ.

ಮರು ದಿವಸದಿಂದ ಲಲಿತೆ ಮಾಲತಿಯನ್ನೂ ಕರೆಯುತ್ತಿದ್ದಳು. ಮಾಲತಿ ಬರುತ್ತಿದ್ದಳು, ಆದರೆ ಸರಿಯಾಗಿ ಉತ್ತರ ಕೊಡುತ್ತಿರಲಿಲ್ಲ.

"ಸುಮಾರಾಗಿ ಮಾಡಿದ್ದೇನೆ. ಆರು ಪ್ರಶ್ನೆಗಳಿಗೆ ಉತ್ತರ ಹೇಗೋ ಬರೆದಿದ್ದೇನೆ, ಅದರಲ್ಲಿ ಎಷ್ಟು ಸರಿಯೋ ಎಷ್ಟು ತಪ್ಪೋ ?"

"ಹೋಗಲಿ, ಇಬ್ಬರೂ ಏನೇನುತ್ತರ ಬರೆದಿದ್ದೀರಿ ಹೇಳಿ. ಸರಿ ಯೆಷ್ಟು, ಅಂತ ನಾನು ಹೇಳುತ್ತೇನೆ"

"ಹೂಂ....? ಅಲ್ಲಿ ಮೂರು ಗಂಟೆ ಕುಳಿತು ತಲೆ ಕೆಡಿಸಿ

ಕೊಂಡಿದ್ದೇ ಸಾಕಾಗಿದೆ ಮತ್ತೆ ಅದರ ಮಾತೇತಕ್ಕೆ? ಬರೆದುದನ್ನು ಬರೆದುದಾಯ್ತು" ಎನ್ನುವಳು ಮಾಲತಿ.

ನಾರಾಯಣನಿಗೆ ಇನ್ನೇನಿಲ್ಲ ಒಬ್ಬಳೇ ತಂಗಿಯು ನೆಚ್ಚಿನ ಗೆಳತಿ, ಅದೂ ಅಲ್ಲದೆ ಎಷ್ಟು ಕಷ್ಟದಲ್ಲಿದ್ದು ಓದಿದರೂ ತರಗತಿಯಲ್ಲಿ ಚೆನ್ನಾಗಿದ್ದಾಳೆ ಎಂದು ಒಂದು ತರಹ ಅಭಿಮಾನ. ಈ ಅಭಿಮಾನಕ್ಕೆ ಬೇರೆಯ ರೂಪವನ್ನು ಕೊಟ್ಟವನು ಅನಂತ.

ಒಂದು ದಿನ ಮಧ್ಯಾಹ್ನ ಪರೀಕ್ಷಾ ಕೇಂದ್ರಕ್ಕೆ ನಾರಾಯಣ ಹೊರಟಿದ್ದಾಗ ದಾರಿಯಲ್ಲಿ ಅನಂತ ಸಿಕ್ಕಿದ.

"ಏನೋ ಇದು? ಬಿಸಲಿನಲ್ಲಿ ಯಾತ್ರೆ ಹೊರಟಿದ್ದೀ?"

"ನನ್ನ ತಂಗಿ ಪರೀಕ್ಷೆಯಲ್ಲಿ ಹೇಗೆ ಮಾಡಿದ್ದಾಳೆಯೋ ನೋಡಿಕೊಂಡು ಬರುವುದಕ್ಕೆ ಹೋಗುತ್ತಿದ್ದೇನೆ ಕಣೋ. ಬರುತ್ತೀಯೇನು ನೀನೂ? ಇವತ್ತು ರಸಾಯನ ಶಾಸ್ತ್ರದ ಪತ್ರಿಕೆ. ಯಾವಾಗಲೂ ಇದು ಸ್ವಲ್ಪ ಕಠಿಣ ಅನ್ನುತ್ತಾರೆ"

"ಏನೋ ನಾರಾಯಣ, ನೀನೂ ಹೀಗಾಗಿಬಿಟ್ಟೆ? ಹುಡಿಗಿಯರು ತಮಾಷೆಗೆ ಓದುತ್ತಾರೆ ಕಣೋ. ಅವರು ತೇರ್ಗಡೆಯಾದರೆಷ್ಟೋ ಇಲ್ಲದಿದ್ದರೂ ಅಷ್ಟೆ. ಯಾವ ಹುಡುಗೀನ ಬೇಕಾದರೆ ಕೇಳು. ಯಾವನಾದರೂ ತಲೆಮಾಸಿದವನನ್ನು ಹಿಡಿದು, ಪುಸಲಾಯಿಸಿ ಇವರ ಕೈಯಲ್ಲಿಟ್ಟುಬಿಟ್ಟರೆ, ಅವನನ್ನು ಆಳಿಕೊಂಡು ರಾಣಿ ಹಾಗೆ ಇರಬೇಕು ಅನ್ನೋದು ಅವರ ಧ್ಯೇಯ, ನಾರಾಯಣ. ಈ ಪರೀಕ್ಷೆ ಹೆದರಿಕೆ ನಾಳೆ ಸಂಸಾರ ರಥಾನ ಎಳೆಯಬೇಕಾದ ನಮಗೆ ಮಾತ್ರ ಕಣೋ ಇರೋದು"

"ಸರಿ, ಹಾಗಾದರೆ ನೀನು ರಥ ಎಳೆಯಲು ಹೋಗು. ನಾನು ಹೊರಟೆ"

"ಓಹೋ, ಕೋಪ ಬಂದು ಬಿಟ್ಟಿತೇನಯ್ಯ? ನಡೆಯಪ್ಪಾ ಬರುತ್ತೇನೆ ನಾನೂ" ಎಂದು ಅನಂತ ನಾರಾಯಣನ ಜೊತೆಯಲ್ಲೇ ಹೊರಟ.

ಇವರು ಪರೀಕ್ಷಾ ಕೇಂದ್ರಕ್ಕೆ ಹೋದಾಗ ಮೊದಲನೆ ಪತ್ರಿಕೆ

ಮುಗಿದು ಸ್ವಲ್ಪ ಹೊತ್ತಾಗಿದ್ದಿತು. ಲಲಿತೆ, ಮಾಲತಿ ಇವರ ಕಣ್ಣಿಗೆ ಬೀಳಲಿಲ್ಲ. ನಾರಾಯಣ ಅಲ್ಲಿಯೇ ಇದ್ದ ಆಳನ್ನು ಕರೆದು ಹೇಳಿದ,

"ಲಲಿತಮ್ಮನವರನ್ನು ಸ್ವಲ್ಪ ಕರೆಯಪ್ಪ"

ಆ ಆಳಿಗೆ ನಿತ್ಯ ನಾರಾಯಣನನ್ನು ನೋಡಿ ಇವನು ಯಾರಿಗಾಗಿ ಬರುತ್ತಾನೆಂದು ಗೊತ್ತಿತ್ತು, ಆದರಿಂದ ತಟ್ಟನೆ ಹೊರಟ. ಆದರೆ ಅನಂತ ಅಂದೇ ಅಂದ,

"ಲೋ ಹುಡುಗಿಯರ ಕಾಲೇಜಿನಲ್ಲಿ ಲಲಿತಮ್ಮ ಎನ್ನುವವರು ಎಷ್ಟು ಜನವೋ, ಸರಿಯಾಗಿ ಹೇಳಿ ಕಳುಹಿಸುವುದಕ್ಕೆ ಕೂಡ ಬರುವುದಿಲ್ಲ ನಿನಗೆ"

"ಸುಮ್ಮನಿರೋ ನೀನು, ಅವನಿಗೆ ಗೊತ್ತಾಗದಿದ್ದರೆ ಆವನೇ ಕೇಳುತ್ತಿದ್ದ" ಎಂದು ದಬಾಯಿಸಿದ ನಾರಾಯಣ.

ಆಳು ಎರಡು ನಿಮಿಷದಲ್ಲಿ ಬಂದ ಹಿಂದಿರುಗಿ,

"ಹೇಳಿದೆ ಬುದ್ಧಿ. ಮುಖ ತೊಳೆದುಕೊಂಡು ಬರುತ್ತಾರೆ"

"ಮುಖ ತೊಳೆದುಕೊಂಡು! ಯಾಕೋ ಕಾಣೆ"

"ಅಳುತ್ತಿದ್ದರು ಸ್ವಾಮಿ, ಪರೀಕ್ಷೇಲಿ ಚೆನ್ನಾಗಿ ಮಾಡಿಲ್ಲ ಅಂತ, ಅದರಿಂದ........" ಎಂದು ನಕ್ಕ ಆಳು

ಲಲಿತೆ ಮುಂಚೆ ಬಂದಳು,

"ಚೆನ್ನಾಗಿ ಮಾಡದಿದ್ದರೆ ಅಷ್ಟೇ ಹೋಯಿತು ಬಿಡೀಮ್ಮ" ಎಂದ ಅನಂತ, "ಇದರಿಂದ ನಿಮಗೆ ಮುಂದೆ ಉಪಯೋಗ ಆಗುವುದು ಅಷ್ಟರಲ್ಲಿಯೇ ಇದೆ"

"ಎಷ್ಟು ಪ್ರಶ್ನೆಗಳಿಗೆ ಉತ್ತರ ಬರೆದೆ ಲಲಿತಾ?" ಎಂದ ನಾರಾಯಣ.

"ನಾನು ಚೆನ್ನಾಗಿ ಮಾಡಿದ್ದೇನಣ್ಣ" ಎಂದಳು ಲಲಿತ ಅರ್ಧ ನಗು, ಅರ್ಧ ದುಃಖದಿಂದ, "ಆದರೆ ಮಾಲತಿಗೆ ತುಂಬ ಕಷ್ಟವಾಗಿತ್ತೂಂತ ತೋರುತ್ತೆ ಪ್ರಶ್ನಪತ್ರಿಕೆ"

"ಅವರು ಸುಮಾರಾಗೂ ಮಾಡಿಲ್ಲವೆ?"

"ಇಲ್ಲ ಅಂತ ತೋರುತ್ತೆ. ತುಂಬ ಅಳುತ್ತಿದ್ದಳು. ಅಣ್ಣಾ, ನೀನು ಅವಳನ್ನು ನೋಯಿಸಬೇಡ ಪ್ರಶ್ನೆಮಾಡಿ, ತಿಳಿಯಿತೇ ?"

ಲಲಿತೆ ಮಾತನಾಡುತ್ತಿದ್ದಂತೆಯೇ ಮಾಲತಿ ಈಚೆಗೆ ಬಂದಳು.

"ಬಾ ಮಾಲಾ"

"ಬನ್ನಿ, ಇವತ್ತು ಪಶ್ನೆ ಪತ್ರಿಕೆ ಸ್ವಲ್ಪವೂ ಚೆನ್ನಾಗಿರಲಿಲ್ಲವಂತೆ. ಹುಡುಗರು, ಅರ್ಧ ಗಂಟೆಯಾಗುತ್ತಲೇ ಎದ್ದು ಎದ್ದು ಹೋಗುತ್ತಿದ್ದ ......." ನಾರಾಯಣ ಸುಳ್ಳು ಹೇಳಲು ಪ್ರಾರಂಭಮಾಡಿದ.

"ಅದೇನೋ ಸರಿ, ಆದರೆ ಲಲಿತಾ, ಇವತ್ತು ಬಂದ ಪ್ರಶ್ನೆಗಳು ನಾನು ನಿನಗೆ ಕಳುಹಿಸಿದ ಚಿಕ್ಕ ಪ್ರಶ್ನೋತ್ತರದ ಪುಸ್ತಕದಲ್ಲಿವೆ. ನೀನು ಅದನ್ನು ಅಭ್ಯಾಸಮಾಡದೆ ಹೇಗೆ ಬಿಟ್ಟೆ ?" ಮಾಲತಿ ಲಲಿತೆಯನ್ನು ಕೇಳಿದಳು.

"ಲಲಿತ ನಿನ್ನ ಗುಟ್ಟು ಬಿತ್ತು ಹೊರಗೆ. ಆದರಿಂದಲೇ ನಿನಗೆ ಈ ಪತ್ರಿಕೆಯಲ್ಲಿ ಚೆನ್ನಾಗಿ ಮಾಡಲು ಆಯಿತು......." ಎಂದು ನಾರಾಯಣ ಪ್ರಾರಂಭಿಸಿದ, ಮಧ್ಯೆ ಬಾಯಿಹಾಕಿ ಮಾಲತಿ ಲಲಿತೆಯನ್ನು ಕೇಳಿದಳು,

"ಚೆನ್ನಾಗಿ ಮಾಡಿದ್ದೀಯಾ ನೀನು, ಲಲಿತ ?"

"ಮಾಡಿದೆ ಅಂತ ಸಂತೋಷ ಕೂಡ ನನಗೆ ಇಲ್ಲ, ಮಾಲಾ. ನೀನು ದುಃಖಪಡುವುದನ್ನು ನಾನು ನೋಡಲೇ ಆರೆ" ಎಂದಳು ಲಲಿತೆ.

ಅದನ್ನು ಕೇಳಿ ಮಾಲತಿ ಗಟ್ಟಿಯಾಗಿ ನಗತೊಡಗಿದಳು. ನಾರಾಯಣ, ಅನಂತರಿಗೂ ನಗುಬಂತು.

"ಏಕೆ, ಏನು ತಮಾಷೆ ನಡೆದಿದೆ ಇಲ್ಲಿ ?" ಅನಂತ ಕೇಳಿದ.

"ನೀನು ಚೆನ್ನಾಗಿ ಮಾಡಿಲ್ಲ ಅಂತ ಅಂದುಕೊಂಡೆ ಲಲಿತಾ. ಅದಕ್ಕೇ ನಾನೂ ಚೆನ್ನಾಗಿ ಮಾಡಲಿಲ್ಲ ಅಂತ ಹೇಳಿದೆ" ಎಂದು ಮಾಲತಿ ಕೇಳಿದಳು, "ಹಾಗಾದರೆ ನಾನು ಪರೀಕ್ಷಾ ಕೊಠಡಿಯಿಂದ ಹೊರಗಡೆ ಬಂದಾಗ ನೀನೇತಕ್ಕೆ ಅಷ್ಟು ಪೆಚ್ಚಾಗಿ ನಿಂತಿದ್ದೀ ?"

"ಓ ಅದೇ......." ಎಂದು ಲಲಿತೆ ನಕ್ಕಳು.

ಅಂತೂ ಐದು ನಿಮಿಷಗಳು ಬೇಕಾಯಿತು ನಾರಾಯಣನಿಗೆ ಸರಿಯಾದ ವಿದ್ಯಮಾನಗಳು ತಿಳಿಯಲು.

ಇಬ್ಬರೂ ತಾವು ಉತ್ತರ ಬರೆದಿದ್ದ ವಿಷಯಗಳಲ್ಲಿ ತೃಪ್ತರಾಗಿದ್ದರು, ಪರೀಕ್ಷೆಯ ಕೊಠಡಿಗಳಿಂದ ಬಂದಾಗ. ಲಲಿತೆ ಮೊದಲು ಬಂದಳು. ಹೊರಗಡೆ ಕೆಲವು ಹುಡುಗಿಯರು ಸ್ವಲ್ಪವೂ ಬರೆಯಲಾಗಲಿಲ್ಲ ಅಂತ ಅಳುತ್ತಿದ್ದರು. ಲಲಿತೆಗೆ ಅವರ ಮಾತುಗಳನ್ನು ಕೇಳುತ್ತ ಕೇಳುತ್ತ ತಾನು ಬರೆದುದೆಲ್ಲ ತಪ್ಪು ಎಂದೇ ಅನ್ನಿಸತೊಡಗಿತು. ಏಕೋ ಅಳು ಬರುವಂತೆಯೇ ಆಯಿತು. ಅಷ್ಟು ಹೊತ್ತಿಗೆ ಮಾಲತಿ ಬಂದವಳು, ಲಲಿತೆಯನ್ನು ನೋಡಿದಳು. "ಓಹೋ ಇವಳು ಸರಿಯಾಗಿ ಮಾಡಿರಲಾರಳು" ಎಂದುಕೊಂಡಳು, ಅವಳಿಗೆ ಕಸಿವಿಸಿಯಾಯಿತು; ಲಲಿತೆಯ ಹತ್ತಿರ ಹೋದಳು. ಇಬ್ಬರೂ ಒಬ್ಬರನ್ನೊಬ್ಬರು ನೋಡುತ್ತಲೇ, ಲಲಿತೆಗೆ ಅಳು ಬಂದೇ ಬಿಟ್ಟಿತು. ಮಾಲತಿಯೂ ಅತ್ತಳು. ಬಳಿಕ ರಸಾಯನ ಶಾಸ್ತ್ರದ ಅಧ್ಯಾಪಕರು ಬಂದರು. ಪ್ರಶ್ನೆಗಳಿಗೆ ಸರಿಯಾಗಿ ಉತ್ತರ ಹೇಳಿದರು. ಆಗ ಲಲಿತೆಗೆ ತಾನೇನೋ ಚೆನ್ನಾಗಿಯೇ ಮಾಡಿದ್ದೇನೆ ಅಂತ ಗೊತ್ತಾಯಿತು. ಆದರೆ ಮಾಲತಿ? ಮಾಲತಿಯೂ ಅಷ್ಟೆ. ಗೆಳತಿಗೆ ತನ್ನ ಸಂತೋಷದಿಂದ ನೋವಾಗ ಕೂಡದು ಅಂತ ಮನಸ್ಸು ಮಾಡಿದಳು. ಸರಿ, ಇಬ್ಬರೂ ಅತ್ತಿದ್ದೂ ಅತ್ತಿದ್ದೇ ಆಳು ಹೋಗಿ ಕರೆಯುವವರೆಗೆ.

ಅಲ್ಲಿಂದ ಹಿಂದಿರುಗಿ ಬರುವಾಗ ಅನಂತ ಹೇಳಿದ,

"ಅಬ್ಬಾ, ಈ ಹುಡಿಗೆಯರು, ಏನೂ ಇಲ್ಲದೆಯೇ ಎಷ್ಟು ಗಲಾಟೆ ಮಾಡುತ್ತಾರೆ!"

"ಹಾಗೆ ಹೇಳಬೇಡ, ಅವರಿಬ್ಬರಿಗೂ ಸ್ನೇಹಬಂಧನ ಅಷ್ಟು ಬಿಗಿಯಾಗಿದೆ"

"ಹೌದ್ಹಾದು, ಸಹಾನುಭೂತಿಯ ಗಣಿಗಳು ಇಬ್ಬರೂ," ಎಂದ ಅನಂತ, "ಅದಿರಲಿ, ನಿನಗೆ ಇಷ್ಟು ರಸಿಕತೆ ಎಲ್ಲಿಂದ ಬಂದಿತು? ಇಷ್ಟು ದಿವಸಗಳೂ ನನಗೆ ಅದರ ಸುಳಿವೇ ಸಿಕ್ಕಿರಲಿಲ್ಲ!"

"ರಸಿಕತೆ! ಏನೋ ಅದು?"

"ಅದೇ ಕಣೋ........ಆ ಕನ್ಯಾಕುಮಾರಿ ಮಾತನಾಡುತ್ತಿದ್ದಾಗ ನಾನು ನೋಡಿಬಿಟ್ಟೆ ನಿನ್ನ ಮುಖವನ್ನು, ಕ್ಷಣಕ್ಷಣಕ್ಕೆ ಅರಳೀ ಅರಳೀ ಗುರುತೇ ಸಿಕ್ಕದಂತೆ ಆಗಿಬಿಟ್ಟಿತ್ತು. ನಾಟಕದ ದುಶ್ಯಂತನ ಹಾಗೇ ಕಾಣುತ್ತಿದೆ......."

"ಲೋ ಅನಂತ. ಬಾಯಿಗೆ ಬಂದಂತೆ ಮಾತನಾಡಬೇಡ. ಮಾಲತಿ ಅಂದರೆ ಏನು ಅಂತ ಇದ್ದೀ? ನಿನಗೆ ಯಾರ ವಿಷಯ........"

"ಸಾಕು ಸುಮ್ಮನಿರೋ ನಾರಾಯಣ. ನನ್ನ ಹತ್ತಿರ ನಿನಗೆ ಬಿಗುಮಾನ ಯಾಕೋ? ನನಗೆ ಆ ಹುಡುಗಿ ತಂಗಿಯ ಸಮಾನ, ಸರಿಯೇ? ಇನ್ನು ಹೇಳು, ಹೇಳೋದೇನು ನನಗೆ ಇವತ್ತಲ್ಲಾ ನಾಳೆ ಗೊತ್ತಾಗಿಯೇ ಆಗುತ್ತೆ. ಇವನ್ನೆಲ್ಲಾ ಗುಟ್ಟಾಗಿ ಇಡಲು ಆಗು ತ್ತದೆಯೇ?"

"ಹಾಳಾಗಿ ಹೋಗು ನೀನು," ಎಂದ ನಾರಾಯಣ.

"ಕಲ್ಯಾಣವಾಗಲಿ ನಿನಗೆ" ಎಂದು ನಗುತ್ತಾ ಸೈಕಲ್ಲನ್ನು ಮನೆಯ ಕಡೆಗೆ ತಿರುಗಿಸಿದ ಅನಂತ.

ಅನಂತ ಸರಸಿ. ಅವನ ಮಾತಿಗೆ ಪ್ರಾಧಾನ್ಯವನ್ನು ಕೊಡಬೇಕಾ ಗಿಲ್ಲವೆಂದು ನಾರಾಯಣನೇನೋ ನಿರ್ಧಾರ ಮಾಡಿದ. ಆದರೆ ಆಗಾಗ ಅವನಿಗೆ ಅನ್ನಿಸಲು ಆರಂಭವಾಯಿತು,

"ಮಾಲಾ ಸುಂದರಿ, ಬುದ್ಧಿಶಾಲಿನಿ, ಹಾಗೂ ಸಂತೋಷ ಪ್ರಕೃತಿ ಯುವಳು."

ಮಾಲತಿ ನಾರಾಯಣನ ಎದುರಿಗೆ ಲಲಿತೆಯೊಂದಿಗೆ ಮಾತನಾಡು ತ್ತಿದ್ದರೂ, ಎಂದೂ ಅವನೊಡನೆಯೇ ಮಾತನಾಡಿರಲಿಲ್ಲ, ಸ್ವಲ್ಪ ದೂರ ದೂರದಲ್ಲಿಯೇ ಇರುತ್ತಿದ್ದಳು ಕೂಡ, ಇದು ನಾರಾಯಣನಿಗೆ ಸರಿಬೀಳು ತ್ತಿರಲಿಲ್ಲ,

"ಈ ಹುಡುಗಿಯರಿಗೆ ಈ ಶಿಕ್ಷಣವಾದರೂ ಏತಕ್ಕೋ? ಹುಚ್ಚು ಹುಚ್ಚು ನಾಚಿಕೆ, ಬಿನ್ನಾಣಗಳು. ಇದರಿಂದಲೇ ಅನಂತ ಏನಾದರೂ ಅರ್ಥ ಕಲ್ಪಿಸುವುದು" ಎಂದುಕೊಳ್ಳುತ್ತಿದ್ದ ಅಸಮಾಧಾನದಿಂದ,

"ಏಕೆ ನಿನ್ನ ಗೆಳತಿಗೆ ಇಷ್ಟು ನಾಚಿಕೆ? ನನ್ನ ಜೊತೆಯಲ್ಲಿ ಮಾತ ನಾಡಕೂಡದೆ?" ಎಂದು ಅವನು ತಂಗಿಯನ್ನೊ ಒಂದು ಬಾರಿ ಕೇಳಿದ.

ಅವಳು ಹೇಳಿದಳು,

"ಅವಳಿಗೆ ಅಂಥಾ ನಾಚಿಕೆಯೇನೂ ಇಲ್ಲಣ್ಣ. ಏತಕ್ಕೆ ಎಲ್ಲ ಗಂಡಸರೊಡನೆಯೂ ಮಾತನಾಡುವುದು ಅಂತ ಹಾಗೆ ಇರುತ್ತಾಳೆ ಅಷ್ಟೆ"

"ಎಲ್ಲರೊಡನೆ ಹರಟುವುದು ಸರಿಯಲ್ಲ, ಅದನ್ನು ನಾನೂ ಒಪ್ಪು ತ್ತೇನೆ. ಆದರೆ ನನ್ನ ಬಳಿಯಲ್ಲಿ ಮಾತನಾಡಬಹುದು...."

"ಅದು ಹೇಗಣ್ಣ? ನೀನು ಮಾತ್ರ ಮೇಲಿನಿಂದ ಇಳಿದು ಬಂದೆಯಾ?"

"ಗುಗ್ಗು ನೀನು ಲಲಿತ!" ಎಂದೇನೋ ಅಂದ ಆದರೆ ತನ್ನೊಡನೆ ಮಾತ್ರ ಏತಕ್ಕೆ ಮಾತನಾಡಬಹುದು ಎಂದು ವಿವರಿಸಲು ತೋಚಲಿಲ್ಲ ನಾರಾಯಣನಿಗೆ.

ಲಲಿತೆಯ ಪರೀಕ್ಷೆ ಮುಗಿದ ಮೇಲೆ ಮಾಲತಿ ಇವರ ಮನೆಗೆ ಬರುವುದು ಬಹಳ ಅಪರೂಪವಾಗತೊಡಗಿತು. ಲಲಿತೆಯೇ ಆಗಾಗ ಅವರ ಮನೆಗೆ ಹೋಗಿ ಬರುತ್ತಿದ್ದಳು.

ಮನೆಯಲ್ಲಿ ಆಗಾಗ ನಾರಾಯಣನ ಭವಿಷ್ಯದ ವಿಚಾರದಲ್ಲಿ ಚರ್ಚೆ ನಡೆಯುತ್ತಿದ್ದಿತು.

"ಇನ್ನೊಂದು ವರ್ಷ ಯಾವುದಾದರೂ ಕಾರ್ಖಾನೆಯಲ್ಲಿ ಶಿಕ್ಷಣ ತೆಗೆದುಕೊಂಡರೇ ನನ್ನ ಓದು ಮುಗಿದಂತಾಗುವುದು" ಎಂದು ನಾರಾಯಣ ಅನ್ನುತ್ತಿದ್ದ.

"ಏನಪ್ಪಾ, ಇನ್ನೊಂದು ವರ್ಷ, ಇನ್ನೆರಡು ವರ್ಷ ಅನ್ನುತ್ತಲೇ ಇದ್ದೀಯೇ. ನೀನು ಎಂದಿಗೆ ಎಲ್ಲರಂತೆ ಸಂಸಾರಿಯಾಗಿ ಬಾಳುವುದು?" ಎಂದು ಯಶೋದಮ್ಮ.

ಗೋವಿಂದಪ್ಪನವರ ಯೋಚನೆಯೇ ಬೇರೆ. ಅವರು,

"ಶಿಕ್ಷಣ ಗಿಕ್ಷಣ ಹಾಗೆ ಇರಲಿ ನಾರಾಯಣ. ಈಗ ನಾಲ್ಕು ದಿವಸ ನೀನು ಆರಾಮವಾಗಿ ಇರು." ಎನ್ನುತ್ತಿದ್ದರು, "ಈಗ ಕೆಲಸಕ್ಕೆ ಬಾರದ

ವರೆಲ್ಲರೂ ಆ ದೇಶ ಈ ದೇಶ ಅಂತ ಹೊರಗೆ ಹೋಗಿ ಬಂದು ದೊಡ್ಡ ಹುದ್ದೆಗಳನ್ನು ಸೇರುತ್ತಾರೆ. ನಿನಗೂ ಈ ತರಹ ಒಂದು ಅವಕಾಶ ಸಿಕ್ಕೀತೇನೋ ನೋಡುತ್ತೇನೆ."

"ಹಾಗಾದರೆ ಅದಕ್ಕಾದರೂ ಪ್ರಯತ್ನ ಪಡಿ ಅಥವಾ ನೋಡುವು ದೇನು, ನೀವೇ ಕಳುಹಿಸಿ. ಇರುವ ದುಡ್ಡನ್ನೆಲ್ಲಾ ಮಕ್ಕಳಿಗಲ್ಲದೆ ಯಾರಿಗೆ ಮಾಡಬೇಕು?"

"ಏನು, ನಾನು ಕಳುಹಿಸಬೇಕೇ? ಆಗಲಿ ನಾನೇ ಕಳುಹಿಸು ತ್ತೇನೆ" ಎಂದು ನಗುತ್ತಿದ್ದರು, ಗೋವಿಂದಪ್ಪ.

ಒಂದು ದಿನ ನಾರಾಯಣ ಊರಿಗೆ ಬಂದು ಒಂದು ತಿಂಗಳಾದ ಮೇಲೆ ಅವರು ತಮ್ಮ ಯೋಜನೆಯನ್ನು ಯಶೋದಮ್ಮನವರಿಗೆ ಹೇಳಿದರು,

"ಎಂಥಾ ಬೀಗರನ್ನು ಹುಡುಕಿದ್ದೇನೆ ಬಲ್ಲೆಯಾ ಯಶೋದ? ಎರಡು ಉಪ್ಪರಿಗೆಯ ಮನೆಗಳು, ಮೂವತ್ತು ಎಕರೆ ಜಮೀನು, ಮೂರು ತೋಟಗಳು ಇನ್ನು ಚಿಲ್ಲರೆಪಲ್ಲರೆ ಆಸ್ತಿ ಪಾಸ್ತಿ ಎಷ್ಟೋ ನಿನ್ನ ಮಗನ ದಾಗುತ್ತದೆ. ಅವರಾಗಿಯೇ ತಮ್ಮ ಮಗಳು ಅಳಿಯ ಇಬ್ಬರನ್ನೂ ಹೊರದೇಶಕ್ಕೆ ಕಳುಹಿಸುವುದಾಗಿ ಹೇಳಿದರು........"

"ಯಾರು, ಅಂತಹವರು?"

"ನಾವು ಬೊಂಬಾಯಿಗೆ ಹೋಗಿದ್ದಾಗ ಸಿಕ್ಕಿದ್ದರಲ್ಲ, ಲಕ್ಷ್ಮೀ ನಾರಾಯಣಪ್ಪ, ಅವರು"

"ಸರಿ," ಎಂದರು ಯಶೋದಮ್ಮ "ಸಂತೋಷ, ಆದರೆ ಸ್ವಲ್ಪ ನಿಮ್ಮ ಸಂತೋಷವನ್ನು ಬಿಗಿ ಹಿಡಿಯಿರಿ, ಈಗ ಕಾಲ ಬದಲಾಯಿಸಿದೆ; ಹುಡುಗ ಹುಡುಗಿಯನ್ನು ಒಪ್ಪಬೇಕು, ಹುಡುಗಿ ಹುಡುಗನನ್ನು ಒಪ್ಪಬೇಕು........"

"ನೀನು ಇಲ್ಲದ ಶಕುನ ನುಡಿಯಬೇಡ. ನನ್ನ ಮಗ ನನಗೆ ವಿಧೇಯನಾಗಿರುತ್ತಾನೆ"

ಹುಡುಗಿಯೇನೋ ಹುಡುಗನ ಭಾವಚಿತ್ರವನ್ನು ನೋಡಿಯೇ

ಒಪ್ಪಿಬಿಟ್ಟಿದ್ದಳು. ಆದುದರಿಂದ ಅವರ ಕಡೆಯವರು ಮೇಲಿಂದ ಮೇಲೆ ಬಂದು ಗೋವಿಂದಪ್ಪನವರನ್ನು ಕಾಣುತ್ತಿದ್ದರು.

"ಶುಭ ಕೆಲಸ, ಬೇಗನೇ ನಡೆದು ಹೋದರೆ ಒಳ್ಳೆಯದು"

ಗೋವಿಂದಪ್ಪ ಮಗನ ಹಾಗೂ ಕುಟುಂಬದ ವಿಧೇಯತ್ವದ ಮೇಲೆ ಸಂಪೂರ್ಣ ನಂಬುಗೆಯಿಟ್ಟಿದ್ದರಿಂದ, ಧೈರ್ಯವಾಗಿ ಮಾತು ಕಥೆ ನಡೆಯಿಸತೊಡಗಿದರು. ಕೊಡುವುದು ಬಿಡುವುದರಲ್ಲಿ ಹೆಚ್ಚು ಎಳೆ ದಾಟವಾಗಲಿಲ್ಲ, ಬೀಗರು ಸಂತೋಷದಿಂದ ಗೋವಿಂದಪ್ಪನವರ ಹೇಳಿಕೆ ಗಳಿಗೆ ಒಪ್ಪಿದರು,

"ಆಗಲಿ, ಸಾಲಂಕೃತ ಕನ್ಯಾದಾನವನ್ನು ಮಾಡುತ್ತೇವೆ. ನಾಲ್ಕು ಸೇರು ಭಂಗಾರ, ವಜ್ರದ ಅಡ್ಡಿಗೆ, ಬೆಂಡೋಲೆ........ ಹೊರದೇಶಕ್ಕೆ ಅವರಿಬ್ಬರೂ ಹೋಗಿಬರುವ ಖರ್ಚು ನಮ್ಮದಿರಲಿ........ನಮಗೆ ಇರು ವವಳು ಇವಳೊಬ್ಬಳು ಮಗಳು. ತರುವಾಯ ಈ ಆಸ್ತಿಯೆಲ್ಲ ಅವಳಿಗೇ" ಎಂದು ಕೊನೆಯ ಮಾತನ್ನೂ ಆಡಿದರು. ಯಶೋದಮ್ಮ ಮತ್ತೆ ಮತ್ತೆ ಹೇಳಿದರು,

"ನಾರಾಯಣ ಹುಡುಗಿಯನ್ನು ನೋಡಬೇಕು. ಆಮೇಲೆ ಮಾತು ನಡೆಯಲಿ" ಆದರೆ ಗೋವಿಂದಪ್ಪ ಆ ಮಾತನ್ನು ಕಿವಿಯಮೇಲೆ ಹಾಕಿಕೊಳ್ಳಲಿಲ್ಲ.

"ಸ್ವಲ್ಪ ತಡೆ, ಈಗ ನನ್ನನ್ನು ಗೋಳು ಹುಯ್ಕೋಬೇಡ. ಆಮೇಲೆ ಎಲ್ಲವೂ ನಿನ್ನಿಷ್ಟದಂತೆಯೇ ಆಗುತ್ತದೆ" ಎಂದುಬಿಟ್ಟರು.

ಕೊನೆಗೆ ಒಂದು ದಿವಸ, ಲಗ್ನದ ದಿನವನ್ನೂ ನಿಷ್ಕರ್ಷೆ ಮಾಡಿ ಮನೆಗೆ ಬಂದರು.

"ಯಶೋದ, ಇನ್ನು ನಿನಗೇನು ಮಾಡಬೇಕೆನ್ನಿಸುತ್ತದೆಯೋ ಹೇಳು. ಹುಡುಗಿಯನ್ನು ನೋಡಲು ನಾರಾಯಣ ಅವರ ಮನೆಗೆ ಹೋಗಲೋ ಅಥವಾ ಅವಳನ್ನು ಇಲ್ಲಿಗೇ ಕರೆದು ತನ್ನಿರೆಂದು ಬೀಗರಿಗೆ ಹೇಳಲೋ ?"

"ನಿಮ್ಮಿಷ್ಟ, ಹೇಗಾದರೇನು? ಅವನು ಅವಳನ್ನು ನೋಡಲಿ ಎಂದಷ್ಟೇ ನಾನು ಹೇಳುವುದು"

"ಹಾಗೋ? ಹಾಗಾದರೆ ಹುಡುಗಿ ಇಲ್ಲಿಗೇ ಬರಲಿ. ಲಲಿತೆ, ನೀನು, ನಾನು ಎಲ್ಲರೂ ಕೂಡ ನೋಡುವುದಕ್ಕೆ ಅನುಕೂಲವಾಗಿರುತ್ತದೆ."

ಅವತ್ತು ಮೊದಲನೆ ಬಾರಿಗೆ ನಾರಾಯಣನಿಗೆ ಸಮಾಚಾರ ಮುಟ್ಟಿತು. ಗೋವಿಂದಪ್ಪನವರೇ ಹೇಳಿದರು,

"ಒಳ್ಳೆಯ ಗೌರವಸ್ಥರ ಮನೆಯ ಹುಡುಗಿಯನ್ನು ಹುಡುಕಿದ್ದೇನೆ ಮಗು, ಎಲ್ಲಾ ಮಾತು ಕಥೆಯಾಗಿದೆ, ನೀನು ಹುಡುಗಿಯನ್ನು ನೋಡಿ ಒಪ್ಪಿಬಿಡು. ಈ ತಿಂಗಳಲ್ಲಿಯೇ ಮದುವೆ ಮಾಡಿಬಿಡುತ್ತೇವೆ. ಬಳಿಕ ಜ್ಯೇಷ್ಠಮಾಸದಲ್ಲಿ ನೀನು ಇಂಗ್ಲೆಂಡಿಗೆ ಹೋಗುತ್ತೀಯೋ, ಅಮೆರಿಕಾಕಿಗೋ ನಿಶ್ಚಯಿಸಿ ಹೋಗಬಹುದು."

ತಂದೆ ಮಾತನಾಡಿದ ರೀತಿಯಲ್ಲಿ ನಾರಾಯಣನಿಗೆ ಸರಿಯಾದ ವಿಷಯ ಗೊತ್ತಾಗಲಿಲ್ಲ. ಒಂದು ಹುಡುಗಿಯನ್ನು ನೋಡಬೇಕಾಗುವುದು ಎಂದೇನೋ ತಿಳಿಯಿತು. ಅದೇನೂ ಅತಿಶಯವೆನ್ನಿಸಲಿಲ್ಲ. ಆದರಿಂದಲೇ,

"ನಾಳೆಯ ದಿನ ಮಧ್ಯಾಹ್ನ ಹುಡುಗಿಯನ್ನು ಕರೆತರುತ್ತಾರೆ. ಮನೆಯಲ್ಲಿಯೇ ಇರಪ್ಪ ಅವರು ಹೊರಡುವವರೆಗೂ" ಎಂದು ತಾಯಿ ಹೇಳಿದಾಗ, ಆಗಲೆಂದು ಬಿಟ್ಟಿದ್ದ. ಬಳಿಕ ಅವನಿಗೆ, 'ಹುಡುಗಿಯನ್ನು ನೋಡುವುದು' ಸಾಧಾರಣ ಕೆಲಸವಲ್ಲವೆನ್ನಿಸಿತು. "ಅನಂತನಿಗೆ ಬರ ಹೇಳಿದರೆ ಒಳ್ಳೆಯದು" ಎನ್ನಿಸಿತು. ಸಂಜೆ ಹೋಗಿ ಅನಂತನನ್ನು ನೋಡಿದ, ಅನಂತ ನಾರಾಯಣ ಹೇಳಿದುದನ್ನು ಕೇಳಿ ಆಶ್ಚರ್ಯಪಟ್ಟ,

"ಯಾಕೋ, ಆ ಹುಡುಗಿ ಮಾಲತಿ—ಅವಳ ಜೊತೆಯಲ್ಲಿ ಜಗಳ ವಾಡಿಬಿಟ್ಟಿದ್ದೀಯೇನು?"

"ಥತ್! ಮತ್ತೆ ತೆಗೆಯಬೇಡವೋ ಆ ಮಾತನ್ನು"

"ಓಹೋ ತಪ್ಪಾಯಿತು, ಈ ಹುಡುಗಿ ಅವಳಿಗಿಂತಲೂ ಚೆಲುವೆ ಅನ್ನಬಾರದಿತ್ತೆ?"

"ಅಲ್ಲವೋ ಅನಂತ, ಮಾಲತಿಯ ಮಾತು ಯಾರೂ ಆಡಿಲ್ಲ, ಯೋಚಿಸಿಲ್ಲ ಕೂಡ. ನೀನೇ ಇಲ್ಲದ್ದೊಂದು ಹೇಳುತ್ತಿದ್ದಿ. ಇದು ನಾನು ಈಗ ಹೇಳುತ್ತಿರುವುದು" ನಮ್ಮ ತಂದೆ ಇವತ್ತು ನನಗೆ ಹೇಳಿದ ಸಮಾಚಾರ, ಇಂದಿನ ವರೆಗೆ ನನ್ನ ವಿವಾಹದ ಯೋಚನೆ ನನ್ನ ಮನಸ್ಸಿನಲ್ಲಿಯಂತೂ ಇರಲಿಲ್ಲ........"

ಅರ್ಧ ಗಂಟೆ ವಿವರಿಸಿ ಹೇಳಿದ ಮೇಲೆ ಅನಂತ ಹೇಳಿದ,

"ಆಗಲಿ, ನಾಳೆಯ ದಿನ ಊಟ ಮಾಡಿಕೊಂಡು ಬಂದುಬಿಡುತ್ತೇನೆ"

ಲಲಿತೆಗೂ ತುಂಬ ಉತ್ಸಾಹ. "ನಾಳೆಯ ದಿನ ಇಲ್ಲಿಗೇ ಊಟಕ್ಕೆ ಬಂದುಬಿಡು" ಎಂದು ಮಾಲತಿಯನ್ನು ಆಹ್ವಾನಿಸಿದಳು, "ನನ್ನ ಅತ್ತಿಗೆಯಾಗುವ ಹುಡುಗಿಯನ್ನು ಮನೆಗೆ ಕರೆದುಕೊಂಡು ಬರುತ್ತಾರಂತೆ ನಮಗೆ ತೋರಿಸಲೋಸುಗ. ಬಹಳ ಕೆಲಸಗಳಿರಬಹುದು"

ಮರು ದಿವಸ ಮಧ್ಯಾಹ್ನ ದೊಡ್ಡ ಮೋಟರು ಕಾರಿನಲ್ಲಿ ಗೋವಿಂದಪ್ಪನವರ "ಭಾವೀ" ಬೀಗರು ಬಂದು ಇಳಿದರು.

ಮಹಡಿಯ ಮೇಲಿನ ಕೊಠಡಿಯಿಂದ ಲಲಿತೆ—ಮಾಲತಿಯರು ನೋಡಿದರು. ಬಂದವರಲ್ಲಿ ಇಬ್ಬರು ಗಂಡಸರು, ಇಬ್ಬರು ಹೆಂಗಸರು. ಅವರಲ್ಲಿ ಹುಡುಗಿ ಯಾರು, ಎಂದು ತಿಳಿಯಲಾಗಲಿಲ್ಲ ಇಬ್ಬರಿಗೂ.

ನಡುಮನೆಯಲ್ಲಿ ಬಂದವರನ್ನು ಕೂಡಿಸಿದರು, ಯಶೋದಮ್ಮ. ಅವರಿಗೂ ಅನ್ನಿಸಿತು, "ಹುಡುಗಿಯನ್ನು ಕರತರಲಾಗಲಿಲ್ಲವೇನೋ, ಅಥವಾ ಅವಳನ್ನು ಬೇರೆಯಾಗಿ ಕರೆಸುತ್ತಾರೆಯೇನೋ" ಎಂದು.

ಮರುಕ್ಷಣದಲ್ಲಿ ಆ ಅನುಮಾನ ಬಯಲಾಯಿತು,

"ಮಗು, ನಿಮ್ಮ ಅತ್ತೆ ಮಾವನವರಿಗೆ ನಮಸ್ಕಾರ ಮಾಡಮ್ಮ" ಎಂದು ಹಿರಿಯ ಗಂಡಸರು ಹೇಳುತ್ತಲೇ ಹುಡುಗಿ ಎದ್ದಳು.

ಯಶೋದಮ್ಮನವರಿಗೆ ಒಂದು ಕ್ಷಣ ಏನು ಮಾಡುವುದೆಂದು ತಿಳಿಯಲಿಲ್ಲ. ಸೀರೆಯುಟ್ಟ ಕರಿಯ ಗುಡಾಣದಂತಿದ್ದ ಆ ಹುಡುಗಿ ಏಳುತ್ತಿದ್ದ ಹಾಗೆಯೇ ಅವರು ಅಲ್ಲಿಯೇ ಕುಳಿತರು.

ಗೋವಿಂದಪ್ಪನವರು ನಗುನಗುತ್ತಲೇ ಮಾತನಾಡುತ್ತಿದ್ದರು,

"ಕುಳಿತುಕೋ ತಾಯಿ, ಈ ನಮಸ್ಕಾರಗಳೆಲ್ಲಾ ಆಮೇಲಾಗಲಿ. ಯಶೋದಾ, ಲಲಿತೆಯೆಲ್ಲಿ? ಮಾಲತಿಯೂ ಬಂದಂತಿತ್ತು. ಅವರಿಬ್ಬರನ್ನೂ ಕರಿಯಬಾರದೆ? ಪ್ರಮದಾಗೆ ಜೊತೆಯ ಹುಡುಗಿಯರಿದ್ದರೇ ಸರಿ. ನಾವು ಮುದುಕರು........ನಮ್ಮ ಕೆಲಸ ಈ ಚಿಕ್ಕಚಿಕ್ಕವರನ್ನು ಜೊತೆಗೆ ಹಾಕಿ ಕಟ್ಟುವುದು ಅಷ್ಟೆ. ಅಲ್ಲವೇ ಸ್ವಾಮಿ?"

"ಆಹಾ! ನಿಜ, ನಿಜ" ಎಂದರು. ಅವರು, "ತಮ್ಮ ಚಿರಂಜೀವಿಯನ್ನೂ ಹಾಗೆಯೇ ಕರೆಯಬಹುದು."

ಯಶೋದಮ್ಮ ಸುಮ್ಮನೆ ಕುಳಿತಿದ್ದವರು ಈಗ ಎದ್ದರು,

"ಆಗಲಿ ಕರೆಯುತ್ತೇನೆ."

ಒಳಗಡೆ ಲಲಿತ-ಮಾಲತಿ "ಕರೆದಾರೇ, ಹೋದೇವೇ?" ಎಂದು ಕಾದು ಕುಳಿತಿದ್ದರು.

"ನೀವಿಬ್ಬರೂ ಹೋಗಿ ಅಲ್ಲಿ ಅವರಿಬ್ಬರೊಡನೆ ಕುಳಿತಿರಿ. ಲಲಿತಾ ನೀನು ಬಾಯಿಬಿಟ್ಟೀಯೆ! ಒಂದು ಮಾತನ್ನೂ ನೀವಾಗಿ ಆಡಕೂಡದು. ನಾನು ಹುಡುಗರನ್ನು ಕರೆದುಕೊಂಡು ಈಗ ಬರುತ್ತೇನೆ" ಎಂದು ಯಶೋದಮ್ಮ ನಾರಾಯಣನ ಕೊಠಡಿಯ ಕಡೆಗೆ ಹೋದರು.

ಲಲಿತ ಮತ್ತು ಮಾಲತಿ ನಡುಮನೆಗೆ ಹೋಗಿ ಅವರಿಬ್ಬರು ಹೆಂಗಸರ ಬಳಿಯಲ್ಲಿ ಕುಳಿತರು. ಇಬ್ಬರಿಗೂ ಮೈಯೆಲ್ಲ ಕುತೂಹಲ, "ಹುಡುಗಿ ಯಾವಾಗ ಬರುತ್ತಾಳೆ?" ಎಂದು ಕೇಳಬೇಕು ಎಂದು. ಆದರೆ ಯಶೋದಮ್ಮ ಹೇಳಿದ ಮಾತು ನೆನಪಿನಲ್ಲಿತ್ತು. ಮಾತಿಗೆ ಬೆಲೆ ಕೊಟ್ಟು ಸುಮ್ಮನೆ ಕುಳಿತರು.

ಹತ್ತು ನಿಮಿಷಗಳಲ್ಲಿಯೇ ಯಶೋದಮ್ಮ, ನಾರಾಯಣ, ಅನಂತ ಇಬ್ಬರನ್ನೂ ಕರೆದುಕೊಂಡು ಬಂದರು.

"ಇವರು ಯಾರು?" ಎಂದು ಕೇಳಿದರು ಲಕ್ಷ್ಮೀನಾರಣಪ್ಪ, ಅನಂತನನ್ನು ನಿರ್ದೇಶಿಸಿ,

"ಅವರು ನಮ್ಮ ಹುಡುಗನ ಸಹಪಾಠಿಯಾಗಿದ್ದವರು. ಇಲ್ಲಿ ಸ್ವಂತ ವ್ಯವಹಾರವನ್ನು ಇಟ್ಟುಕೊಂಡಿದ್ದಾರೆ ಅವರ ತಂದೆ. ಅಲ್ಲೇ ಇವರೂ ಕೆಲಸ ಮಾಡುತ್ತಾರೆ''

"ಇನ್ನೂ ಲಗ್ನವಾಗಿಲ್ಲ"

"ಇಲ್ಲ"

''ಸರಿ, ಹಾಗಾದರೆ ಏನಪ್ಪಾ, ನಿಮಗೂ ಒಂದು ಹುಡುಗಿಯನ್ನು ಹುಡುಕಿಕೊಡುತ್ತೇನೆ. ನಿಮ್ಮ ಗೆಳೆಯನ ಮದುವೆಯೊಂದಿಗೇ ನಿಮ್ಮದೂ ಆಗಿಹೋಗಲಿ. ಏನು ಗೋವಿಂದಪ್ಪನವರೇ, ಏನನ್ನುತ್ತೀರಿ ನನ್ನ ಮಾತಿಗೆ ?"

"ಆಗಲಿ ಸ್ವಾಮಿ, ಅದಕ್ಕಿಂತ ಇನ್ನೇನು ಬೇಕು ನಮ್ಮ ಹುಡುಗರಿಗೆ ?''

ಅನಂತ ವಿನಯದ ನಗೆಯಿಂದ ಸುಮ್ಮನೆ ಕುಳಿತಿದ್ದ. ಸ್ವಲ್ಪ ಹೊತ್ತಿನಲ್ಲಿಯೇ ಬೀಗರ ಲಕ್ಷ್ಯ ಭಾವೀ ಅಳಿಯನ ಕಡೆಗೆ ಹಾರಿತು.

"ಪ್ರಮದಾ, ಆ ಹಣ್ಣುಗಳ ತಟ್ಟೆಯನ್ನು ತಂದುಕೊಡಮ್ಮ" ಎಂದು ಮಗಳಿಗೆ ಹೇಳಿ, ನಾರಾಯಣನಿಗೆ ಸೂಚಿಸಿದರು, "ಇವಳೇ ನನ್ನ ಮಗಳು ಪ್ರಮದಾ"

"ಹುಂ" ಎಂದ ನಾರಾಯಣ, ನೀರಸವಾಗಿ. ಒಂದೇ ನೋಟ ದಿಂದ ಅವನ ಆಸಕ್ತಿಯೆಲ್ಲ ಪೂರ್ತಿ ಹೊರಟು ಹೋಯಿತು.

"ಚೆನ್ನಾಗಿ ವೀಣೆ ಬಾರಿಸುತ್ತಾಳೆ. ಬಾಯಿ ಹಾಡೂ ಬರುತ್ತದೆ. ಯಾವುದರಲ್ಲಿ ಅಭಿರುಚಿ ಹೆಚ್ಚೊ ತಮಗೆ ?"

ನಾರಾಯಣನಿಗೆ ನಗು ಬಂದಿತು,

"ಸಂಗೀತಕ್ಕೂ ನಮಗೂ ಬಹಳ ದೂರ"

ಪ್ರಮದಾ ಹಿಂದಿರುಗಿ ಹೋದಮೇಲೆ ಮಾಲತಿಯ ಬಳಿಯಲ್ಲಿ ಕುಳಿತಿದ್ದಳು. ನಾರಾಯಣ ಒಂದು ಬಾರಿ ಒಂದೇ ಒಂದು ಬಾರಿ ಅವಳ ಕಡೆಗೆ ನೋಡಿದ,

"ಮಾಲತಿಯೇ ಪ್ರಮದಳಾಗಿದ್ದಿರಬಾರದಿತ್ತೆ ?" ಎಂದುಕೊಂಡ.

ಲಲಿತೆಯ ಉತ್ಸಾಹವೂ ಬೇಸರವಾಗಿ ಪರಿಣಮಿಸಿತು. ಪ್ರಮದೆಯ ತಾಯಿ ಒಂದೆರಡು ಬಾರಿ ಅವಳನ್ನು ಮಾತನಾಡಿಸಿದರು.

"ಓದುತ್ತಿದ್ದೀರೇನು ನೀವು?"

"ಇಲ್ಲ. ಬಿಟ್ಟುಬಿಟ್ಟೆ"

"ಸಂಗೀತ?"

"ನಮ್ಮ ಮನೆಯಲ್ಲಿ ಎಲ್ಲರಿಗೂ ಸಂಗೀತ ಅಂದರೆ ಅಷ್ಟಕ್ಕೆ ಅಷ್ಟೆ"

"ಈ ಹುಡುಗಿ ಯಾರು?"

"ನನ್ನ ಗೆಳತಿ"

"ಇನ್ನೂ ಲಗ್ನವಿಲ್ಲ?"

"ಲಗ್ನ? ಯಾರಿಗೆ ಬೇಕು ಲಗ್ನ" ಎಂದು ನಕ್ಕಳು ಲಲಿತ.

ಅಲ್ಲಿಗೆ ಆಕೆ ಸುಮ್ಮನಾದರು. ಲಕ್ಷ್ಮೀನಾರಣಪ್ಪ ನಾರಾಯಣ ನೊಂದಿಗೆ ಸ್ವಲ್ಪ, ಗೋವಿಂದಪ್ಪನವರೊಡನೆ ಸ್ವಲ್ಪ ಮಾತನಾಡುತ್ತ ಇದ್ದರು, ಅದೇನೋ ಲೇವಾದೇವಿಯ ವಿಷಯ. ಅವರ ಪಾಲುಗಾರ ರಾಮಪ್ಪ ಹುಚ್ಚಾಪಟ್ಟೆ ಆಡಳಿತ ನಡೆಸಿ, ಇದ್ದಕ್ಕಿದ್ದಂತೆ ಪರಾರಿಯಾಗಿ ಬಿಟ್ಟಿದ್ದು, ಅದರಿಂದ ತಮಗಾದ ನಷ್ಟ, ಹೆಂಡತಿಯ ಒಡವೆಗಳನ್ನು ಮಾರಿ ಸಾಲದಿಂದ ಪಾರಾಗಿ ಮತ್ತೆ ಸಣ್ಣ ಅಂಗಡಿಯಿಟ್ಟಿದ್ದು.... ಇತ್ಯಾದಿ.

ಗೋವಿಂದಪ್ಪನವರು ಗಮನವಿಟ್ಟು ಅವರು ಹೇಳುವುದನ್ನೆಲ್ಲ ಕೇಳುತ್ತಿದ್ದರು. ಆದರೆ ನಾರಾಯಣನಿಗೆ ಅವರು ಹೇಳುತ್ತಿದ್ದ ಮಾತು ಗಳು ಕಿವಿಗೇ ಬೀಳುತ್ತಿರಲಿಲ್ಲ. "ಅನಂತನೆದುರಿಗೆ ಇಷ್ಟು ಅವಮಾನ ವಾಗುತ್ತಿದೆಯಲ್ಲ! ಎದ್ದು ಹೊರಟರೆ ಸಾಕು ಇಲ್ಲಿಂದ" ಎನ್ನಿಸುತ್ತಿತ್ತು ಅವನಿಗೆ.

ಅಷ್ಟರಲ್ಲಿ ಲಕ್ಷ್ಮೀನಾರಣಪ್ಪನವರೇ ಮನೆಗೆ ಹೊರಡಲು ಎದ್ದು ನಿಂತರು,

"ಇನ್ನು ಬರೋಣವೇ ನಾವು?"

"ಆಗಬಹುದು."

"ಮತ್ತೆ ನಾಳೆಯೋ ನಮ್ಮ ಭೇಟಿ?" ಎಂದು ಗೋವಿಂದಪ್ಪ ನವರಿಗೆ ಹೇಳಿ ನಾರಾಯಣನನ್ನು ಆಹ್ವಾನಿಸಿದರು ಲಕ್ಷ್ಮೀನಾರಣಪ್ಪ ತಮ್ಮ ಮನೆಗೆ, "ನಿಮ್ಮ ತಂದೆಯವರು ಬಂದಾಗ ಜೊತೆಯಲ್ಲಿ ತಾವೂ ಬನ್ನಿ ನಿಮ್ಮ ಗೆಳೆಯರೊಡನೆ''

ಪ್ರಮದಾ ಮತ್ತೆ ಎಲ್ಲರಿಗೂ ಕೈಮುಗಿದಳು. ಅವರ ತಾಯಿಯೂ ಯಶೋದಮ್ಮನವರಿಗೆ ''ಹೋಗಿ ಬರುತ್ತೇವೆ ಇನ್ನು" ಎಂದು ಹೇಳಿದರು.

ಯಶೋದಮ್ಮ ಗೋವಿಂದಪ್ಪ ಇವರನ್ನೆಲ್ಲಾ ಕಾರಿನವರೆಗೆ ತಲುಪಿಸಿ ಒಳಕ್ಕೆ ಬಂದರು.

ಹೊಸಲಿನಲ್ಲಿ ಕಾಲಿಡುವಾಗಲೇ ಯಶೋದಮ್ಮ ಹೇಳಿದರು,

"ಸದ್ಯ ನೀವೇನೂ ಇನ್ನೂ ಮಾತನಾಡಿಲ್ಲ ತಾನೇ? ಅವರೋ! ಅವರ ಆಸ್ತಿಯೋ! ಸಾಕಾಯಿತು ನನಗೆ"

"ನಿನಗೆ ಸಾಕಾದರೆ ಸಾಕಾಯಿತು, ಬಿಡು, ಯಶೋದ. ಈ ಮಾತಿನಲ್ಲಿ ನೀನು ಬಾಯಿ ಹಾಕಬೇಡ. ನನ್ನ ಮಗ ಉಂಟು, ನಾನುಂಟು"

"ಹಾಗಂದರೆ ಅರ್ಥವೇನು? ನಾಲ್ಕು ಜನರ ಮುಂದೆ ಈ ಹುಡುಗಿ ನನ್ನ ಸೊಸೆಯೆಂದು ನಾನು ತಾನೇ ಹೇಳಬೇಕು? ಈ ಹುಡುಗಿಯನ್ನು ಯಾವ ಮುಖದಿಂದ ಎಲ್ಲರಿಗೂ ತೋರಿಸಲಿ........"

"ಸುಮ್ಮನಿರು, ಯಶೋದ! ನೀನು ಬಹಳ ಚೆಲುವೆ!"

"ಹಾಗೆಂದು ನಾನು ಹೇಳಲಿಲ್ಲ. ಈ ಹುಡುಗಿ ಇಷ್ಟು ಕುರೂಪಿಯಾದದ್ದು ಅವಳ ತಪ್ಪಿಂದ ಅಂತಲೂ ನಾನು ಹೇಳುವುದಿಲ್ಲ. ಆದರೆ ಮುಂದೆ ನಾರಾಯಣ ಸುಖದಿಂದ ಇರಬೇಕೋ ಬೇಡವೋ? ನೋಡಿದ ಕಣ್ಣಿಗೆ ಸ್ವಲ್ಪ ತಂಪಾಗುವಂತೆ ಇರುವ ಒಂದು ಹುಡುಗಿಯನ್ನು ನೋಡಿ. ಇದು ಬೇಡ"

"ತಿರುಗೀ ಅದೇ ಮಾತು," ಎಂದು ಗೋವಿಂದಪ್ಪ ಕರೆದರು "ನಾರಾಯಣಾ........!"

ಬಂದವರು ಹೊರಟು ನಿಂತಾಗಲೇ ನಾರಾಯಣ—ಅನಂತ

ಕೊಠಡಿಗೆ, ಮಾಲತಿ ಮತ್ತು ಲಲಿತ ಹಿಂದುಗಡೆಯ ತೋಟಕ್ಕೆ ಹೊರಟು ಹೋಗಿದ್ದರು. ತಂದೆಯ ಕರೆ ಕೇಳಿ ನಾರಾಯಣ ಹಜಾರಕ್ಕೆ ಬಂದ,

"ಏನಪ್ಪ ?"

"ಕುಳಿತುಕೋ, ಹುಡುಗಿಯನ್ನು ನೋಡಿದೆಯಾ ?"

"ಹುಡುಗೀನ್ನೇ ? ಹುಂ, ನೋಡಿದೆ"

"ಒಪ್ಪಿದ್ದಿ ತಾನೆ ?"

"ಏನು ತಮಾಷೆ ಮಾಡುತ್ತೀಯ ಅಪ್ಪ ?"

ಗೋವಿಂದಪ್ಪ ನಕ್ಕರು,

"ತಮಾಷೆಯಲ್ಲ ನಾರಾಯಣ. ಬೇಕು ಅಂತಲೇ ಕೇಳಿದೆ. ನಿಮ್ಮಮ್ಮ ನಿನ್ನ ಒಪ್ಪಿಗೆ ಕೇಳಬೇಕು ಅಂತ ಪ್ರಾಣ ತೆಗೆದಳು, ಅದಕ್ಕೆ ಅವಳ ತೃಪ್ತಿಗಾಗಿ ಕೇಳಿದೆ, ಅಷ್ಟೆ. ನಿನಗೆ ಯಾವ ತರಹ ಅಭಿಪ್ರಾಯವೂ ಇಲ್ಲ ಅಂತ ನನಗೆ ಗೊತ್ತು. ಇನ್ನು ನೀನು ಹೋಗು"

ಆದರೆ ನಾರಾಯಣ ಹೋಗಲಿಲ್ಲ,

"ಹಾಗಂದರೆ ಅಭಿಪ್ರಾಯ ಇಲ್ಲ. ಅಂದರೆ ?"

"ಅಂದರೇನೋ ನಾರಾಯಣ ? ನೀನು ವಿಧೇಯನಾದ ಮಗ ಅಂತ. ಅದರಿಂದಲೇ, ಆ ಭರವಸೆಯಿಂದಲೇ ನಿನಗೆ ಹೇಳದೆಯೇ ನಿನ್ನ ಮದುವೆಯ ದಿನವನ್ನು ಸಹ ಗೊತ್ತುಮಾಡಿಬಿಟ್ಟೆ."

"ಏನು, ಏನಂದಿರಿ ಅಪ್ಪಾ ? ಮದುವೆಯೇ ? ಈ ಹುಡುಗಿಗೂ ಈ ಮಾತಿಗೂ ಸಂಬಂಧ ಇಲ್ಲ ತಾನೇ ?"

"ಮತ್ತೆ ಇನ್ಯಾವ ಹುಡುಗಿಯಿದ್ದಾಳಿಯೋ ?"

"ಓಹೋ !" ಎಂದ ನಾರಾಯಣ, "ಆದರೆ ಅಪ್ಪಾ ಇದು ಅಸಾಧ್ಯವಾದ ಮಾತು. ನಾನು ಎಂದಿಗೂ ಇದಕ್ಕೆ ಒಪ್ಪೋದಿಲ್ಲ. ಆ ಗುಡಾಣವನ್ನು ನೋಡಿದ್ದಕ್ಕೇ ನನಗೆ ಪಿತ್ಥ ಕೆರಳಿದಂತಾಗಿದೆ"

ಗೋವಿಂದಪ್ಪನವರಿಗೆ ಅರ್ಥವಾಗಲಿಲ್ಲ. ಅವರಿಗೆ ತಮ್ಮ ಕಿವಿಗಳಲ್ಲೇ ಸ್ವಲ್ಪ ಅಪನಂಬುಗೆ ಹುಟ್ಟಿತು,

"ನಾರಾಯಣ ಏನು ಹೇಳುತ್ತಿದ್ದೀ? ಪ್ರಮದಾನ ನೀನು ಮದುವೆ ಯಾಗುವುದಿಲ್ಲವೆಂದೆಯಾ?"

"ಅಂದೆ ಅಪ್ಪಾ. ಎಂದಿಗೂ ಆಗುವುದಿಲ್ಲ"

"ಈಗ ಈ ಮಾತನ್ನಾಡಿ ಫಲವಿಲ್ಲ, ನಾರಾಯಣ. ಲಗ್ನ ಪತ್ರಿಕೆ ಕೂಡ ಆಗಿಹೋಗಿದೆ"

"ಅಪ್ಪಾ, ನೀವು ಏಕೋ ಇನ್ನೂ ನಂಬಿನಂತಿಲ್ಲ, ನಾನು ಖಂಡಿತ ಈ ಮದುವೆಗೆ ಒಪ್ಪುವುದಿಲ್ಲ. ನನಗೆ ಹೇಳದೆ ಹೇಗೆ ಗೊತ್ತು ಮಾಡಿದಿರಿ?"

ಗೋವಿಂದಪ್ಪನವರಿಗೆ ಕೋಪ ಬಂದಿತು,

"ಎಲಾ, ಚೋಟುದ್ದ ಇದ್ದವನನ್ನು ಬೆಳೆಸಿ ದೊಡ್ಡವನಾಗಿ ಮಾಡಿದೆ. ನನ್ನ ಋಣದಲ್ಲಿ ಬೆಳೆದದ್ದಕ್ಕೆ ಈಗ ಬಾಯಿ ಮುಚ್ಚಿಕೊಂಡು ನಾನು ಹೇಳಿದಂತೆ ಕೇಳು. ಹುಡುಗಿ ಹೇಗಿದ್ದರೇನು? ಅವಳು ಗರತಿ ಯಾಗಿ ಮನೆಯಲ್ಲಿರತಕ್ಕವಳು. ರೂಪ ಲಾವಣ್ಯ ನೋಡುವುದಕ್ಕೆ ನಾವೇನು ನಾಟಕದವರೆ? ನಿನ್ನ ಹೆಂಡತಿಯಾದವಳನ್ನೂ ಯಾರಾದರೂ ನಾಟ್ಯಕ್ಕೆ ಕರೆಯಬೇಕಾಗಿದೆಯೆ?"

"ಹಾಗೆ ಅಂತ ಹುಡುಕಿ ನೋಡಿಟ್ಟಿರೋ ಇಂಥಾ ನೆಂಟಸ್ತಿಕೇನ? ಈಗ ಏನು ಬೇಕಾದರೂ ಮಾಡಿಕೊಳ್ಳಿ. ನಾನು ಬೇರೆ ಈ ಹುಡುಗೀನ ಮದುವೆಮಾಡಿಕೊಳ್ಳುವುದಿಲ್ಲ."

"ಈ ಮಾತುಗಳನ್ನು ಕಟ್ಟಿಡು ನಾರಾಯಣ. ಮನೆಯಿಂದ ಓಡಿಸಿ ಬಿಟ್ಟೇನು"

ಯಶೋದಮ್ಮ ತಂದೆ ಮಕ್ಕಳ ಸಂವಾದವನ್ನು ಕೇಳಿ ಹೆದರಿದರು,

"ಇದೇನು ಹೀಗೆಲ್ಲಾ ಮಾತನಾಡುತ್ತೀರಿ? ನಾಳೆ ಸಂಸಾರ ಮಾಡ ಬೇಕಾದವನು ಅವನೋ ನೀವೋ? ಇಷ್ಟವಿಲ್ಲದ ಕಡೆ ಗಂಟು ಹಾಕಿ ಅವನ ಸುಖವನ್ನು ನಾವೇ ಹಾಳುಮಾಡಲು ಯತ್ನಿಸುವುದೆ?........"

"ಯಶೋದ!" ಎಂದು ಗೋವಿಂದಪ್ಪ ಗರ್ಜಿಸಿದರು, "ನಾರಾಯಣ! ಇದು ಕೊನೆಯ ಮಾತು. ಇನ್ನು ಹದಿಮೂರು ದಿನಕ್ಕೆ ಲಗ್ನ ಇಟ್ಟಿದೆ. ಅಷ್ಟು ದಿನಗಳಲ್ಲಿ ಈ ಹುಚ್ಚಾಟ ಬಿಟ್ಟು ದಾರಿಗೆ

ಬಂದೆಯೋ ಸರಿ. ಇಲ್ಲದಿದ್ದರೆ ನಿನಗೂ ನನಗೂ ಸಂಬಂಧ ಕಡಿದು ಹೋಯಿತೆಂದು ತಿಳಿ."

"ಇವತ್ತೇ ಕಡಿದುಹೋಯಿತು" ಎಂದು ನಾರಾಯಣ ಹೊರಗೆ ಹೊರಟು ನಿಂತಿದ್ದ ಗೆಳೆಯನ ಬಳಿಗೆ ಹೊರಟ.

ಮನೆಯಿಂದ ಒಂದು ಇಪ್ಪತ್ತು ಗಜ ಹೋಗುವವರೆಗೂ ಅನಂತ ಸುಮ್ಮನಿದ್ದ. ಅನಂತರ ಕೇಳಿದ,

"ಏತಕ್ಕೆ ನಿನಗೆ ಇಷ್ಟು ಸಿಟ್ಟು ಈ ನಡುವೆ ನಾರಾಯಣ? ಮೃದುವಾಗಿ ಮಾತನಾಡಿ ತಂದೆಯ ಮನಸ್ಸನ್ನು ಒಲಿಸುವುದಕ್ಕೆ ಪ್ರಯತ್ನ ಪಡುವುದನ್ನು ಬಿಟ್ಟು, ಅವರನ್ನು ಚೆನ್ನಾಗಿ ರೇಗಿಸಿ ಬಿಟ್ಟೆಯಲ್ಲ?"

"ಏನಾದರೂ ಆಗಲಿ. ಇನ್ನು ನನಗೂ ಆ ಮನೆಗೂ ಸಂಬಂಧ ವಿಲ್ಲ" ನಾರಾಯಣ ಹೇಳಿದ.

"ಹಾಗಾದರೆ ಏನು ಮಾಡುವಿ ಈಗ?"

"ಮದ್ರಾಸಿಗೆ ಹೋಗಿ ಏನಾದರೂ ಕೆಲಸ ಸಿಕ್ಕೀತೇನೋ ನೋಡು ತ್ತೇನೆ."

"ಕೆಲಸ!"

"ಇನ್ನೇನು ಮಾಡು ಅನ್ನುತ್ತೀ ಅನಂತ? ಭಿಕ್ಷೆ ಬೇಡಲು ಆಗು ವುದಿಲ್ಲ, ಕದಿಯಲು ಬರುವುದಿಲ್ಲ. ಉಪವಾಸವಿರು ಎನ್ನುವಿಯಾ? ಅದೂ ಅಭ್ಯಾಸವಿಲ್ಲ."

"ಛೇ! ಬಾಯಿಗೆ ಬಂದಂತೆ ನನ್ನೊಡನೆಯೇ ಮಾತನಾಡಲು ತೊಡಗಿದೆಯಲ್ಲ? ಈಗ ಸದ್ಯದಲ್ಲಿ ಎಲ್ಲಿಯೂ ಹೋಗಬೇಡ. ನಮ್ಮ ಮನೆಗೆ ಬಾ, ನಿಮ್ಮ ಮನೆ ನಿನಗೆ ಬೇಡವೆನಿಸಿದರೆ. ಎರಡು ದಿನ ಆದ ಮೇಲೆ ಎಲ್ಲಿ ಬೇಕಾದರೂ ಹೋಗು"

"ಏನೋ ಅನಂತ, ನಾನು ಆತ್ಮಹತ್ಯೆಯನ್ನು ಮಾಡಿಕೊಳ್ಳುವೆ ನೆಂದು ತಿಳಿದಿದ್ದೀಯಾ?"

ಅನಂತನ ಮನಸ್ಸಿನಲ್ಲಿ ಅದು ಸುಳಿದುಹೋಗಿತ್ತು. ಆದರೂ ಅವನು ಹಾಸ್ಯಮಾಡುವವನಂತೆ ನಕ್ಕು, "ಸಾಕು ನಾರಾಯಣ,

ಇಪ್ಪತ್ತೈದು ವರ್ಷಗಳಾದರೂ ಅಪ್ಪ ಸಾಕಬೇಕು ಇಲ್ಲದಿದ್ದರೆ ಸಾಯು ತ್ತೇನೆ ಅಂದರೆ ನಮ್ಮ ದೇಶದ ಪುಣ್ಯ ಅಷ್ಟೆ. ಗಂಡಸಾಗಿ ಹುಟ್ಟಿದ್ದಕ್ಕೆ ಇನ್ನಾದರೂ ಬೆವರು ಸುರಿಸಿ ಕೆಲಸಮಾಡಿ ಊಟಮಾಡು."

"ಆಯಿತು. ಹಾಗಾದರೆ, ಇನ್ನೇನು ಇರು ಅಂತ ಊದುತ್ತಿದ್ದೀಯೋ?"

"ಅದಲ್ಲ ಕಣೋ, ನೀನು ಇದ್ದಕ್ಕಿದ್ದಂತೆ ಓಡಿಹೋದರೆ ಎಷ್ಟು ಹೆದರುತ್ತಾರೆ ನಿಮ್ಮ ತಾಯಿ ತಂಗಿಯರು? ಸಮಯ ಸಾಧಿಸಿ ಅವರಿಗೆ ಸಮಾಧಾನ ಮಾಡಿ ಹೋಗುವೆಯಂತೆ. ಅದಕ್ಕೇನು ಅವಸರ?"

"ಆಗಲಿ. ನಿಮ್ಮ ಮನೆಗೇ ಹೋಗೋಣ ಹಾಗಾದರೆ"

ಇತ್ತ ನಾರಾಯಣ ಹೊರಬಿದ್ದ ಮೇಲೆ ಮನೆಯಲ್ಲಿ ಜಗಳವೇ ಹತ್ತಿಬಿಟ್ಟಿತ್ತು. ಎಂದೂ ತಾಯಿಯಮೇಲೆ ರೇಗದೆ ಇದ್ದ ತಂದೆ ಇವತ್ತು ಹುಚ್ಚಾಪಟ್ಟೆ ಮಾತನಾಡುವುದನ್ನು ಕೇಳಿ ಲಲಿತೆಗೆ ಒಂದು ತರಹಾ ಆಯಿತು.

ಯಶೋದಮ್ಮ ಏನು ಕಡಿಮೆ ಅನ್ನಲಿಲ್ಲ. ಗೋವಿಂದಪ್ಪ ಕೂಗಾಡುತ್ತಿದ್ದರೂ ಅವರಿಗೆ ಯಶೋದಮ್ಮನವರ ಮಾತಿನ ಮುಂದೆ ಕಕ್ಕಬಿಕ್ಕಾಗುತ್ತಿತ್ತು. ಅನ್ನುವುದನ್ನೆಲ್ಲಾ ಅಂದು ಯಶೋದಮ್ಮ ಗಟ್ಟಿಯಾಗಿ ಅಳತೊಡಗಿದರು. ಗೋವಿಂದಪ್ಪನವರಿಗೆ ಏನು ಮಾಡುವುದೆಂದು ತೋಚದೆ ಎದ್ದು ಮನೆಯಿಂದ ಹೊರಗೆ ಹೊರಟುಬಿಟ್ಟರು.

ಸಂಜೆಯಾಯಿತು. ಯಶೋದಮ್ಮ ಸಮಾಧಾನ ಹೊಂದಲು ಯತ್ನಿಸುತ್ತ ಕುಳಿತಿದ್ದರು. ನಾರಾಯಣನ ಸುಳಿವೂ ಇಲ್ಲ, ಗೋವಿಂದಪ್ಪನವರೂ ಮನೆಗೆ ಬಂದಿರಲಿಲ್ಲ. ಲಲಿತೆ ಮಾತ್ರ ಸುಮ್ಮನೆ ತಾಯ ಬಳಿ ಕುಳಿತಿದ್ದಳು. ಯಶೋದಮ್ಮ ಹೇಳಿದರು,

"ಲಲಿತ, ನೀನು ಬೇಕಾದರೆ ಮಾಲತಿಯ ಮನೆಗೆ ಹೋಗು. ಸ್ವಲ್ಪ ಹೊತ್ತು ಒಬ್ಬಳೇ ಇರುತ್ತೇನೆ."

ಲಲಿತೆ ತಾಯಿ ಶಾಂತರಾದರೆಂದು ಅಂದುಕೊಂಡಳು,

"ಆಗಲಮ್ಮ. ಕತ್ತಲಾಗುವುದಕ್ಕೆ ಮುಂಚೆಯೇ ಬಂದುಬಿಡುತ್ತೇನೆ."

ಲಲಿತೆ ಹೊರಟುಹೋದ ಒಂದರ್ಧ ಮುಕ್ಕಾಲು ಗಂಟೆಗೆ ಗೋವಿಂದಪ್ಪನವರು ಬಂದರು.

"ಯಶೋದ, ಸಮಾಧಾನದಿಂದ ಈಗಲಾದರೂ ಒಂದೆರಡು ಮಾತನಾಡಲು ಅವಕಾಶ ಉಂಟೇನು?"

"ನಾನೂ ನಿಮ್ಮನ್ನು ಅದೇ ಕೇಳಲು ಕಾದಿದ್ದೆ."

"ಮಕ್ಕಳೆಲ್ಲಿ?'

"ನಾರಾಯಣ ಅನಂತನ ಜೊತೆಯಲ್ಲಿ ಹೋದ. ಲಲಿತೆಯನ್ನು ನಾನೇ ಮಾಲತಿಯ ಮನೆಗೆ ಕಳುಹಿಸಿದ್ದೇನೆ."

"ಒಳ್ಳೆಯದಾಯ್ತು." ಗೋವಿಂದಪ್ಪ ಸ್ವಲ್ಪ ತಡೆದು ನುಡಿದರು, "ಈಗ ಏನಾಗಿಬಿಟ್ಟಿದೆ ಗೊತ್ತೇ ಯಶೋದ? ನಾರಾಯಣ ಪ್ರಮದೆಯನ್ನು ಮದುವೆಯಾಗಲೇಬೇಕು."

"ಮತ್ತೆ ಅದೇ ಮಾತೆ?'

"ಅದೇ ಮಾತು. ಅಂದರೆ ಏನು ಮಾಡುವುದು? ಇಲ್ಲಿ ಕೇಳು, ಈಗ ಮಾತು ಕೊಟ್ಟು ಲಗ್ನಪತ್ರಿಕೆ ಮಾಡಿ ಎಲ್ಲಾ ಆಗಿಹೋಯಿತು. ಇನ್ನು ಏನಾದರೂ ಹೇಳಿದರೆ ಲಕ್ಷ್ಮೀನಾರ್ಣಪ್ಪ ಮಾನನಷ್ಟ ಮೊಕದ್ದಮೆ ಮಾಡಿ ನನ್ನನ್ನು ದಿವಾಳಿ ಎಬ್ಬಿಸಿಬಿಡುತ್ತಾನೆ."

"ಏನು?"

"ಬೀದಿಯಲ್ಲಿ ನಿಲ್ಲಬೇಕಾಗುತ್ತದೆ ನಾವು ಯಶೋದ, ನಾರಾಯಣ ಈ ಮದುವೆಗೆ ಒಪ್ಪದಿದ್ದರೆ"

"ಅವನು ಎಂದಿಗೂ ಒಪ್ಪುವುದಿಲ್ಲ"

"ಏತಕ್ಕೆ, ಹೇಳು ಯಶೋದ"

"ನನ್ನನ್ನೇನು ಹೀಗೆ ಕೇಳುತ್ತೀರಿ? ನೀವು ಅವಳನ್ನು ನೋಡಲಿಲ್ಲವೇ? ಆ ಹುಡುಗಿಯನ್ನು ಕಟ್ಟಿಕೊಂಡು ಬಾಳಲು ಯಾರಿಗೆ ಮನಸ್ಸು ಬರುತ್ತದೆ?"

"ಓ ಅದು ಸರಿ, ಹುಡುಗಿ ತುಂಬಾ ಕುರೂಪಿ, ಅವಳ ಜೊತೆಯಲ್ಲಿ ನಾರಾಯಣನಿಗೆ ಸಂಸಾರ ಮಾಡುವುದು ಕಷ್ಟ."

"ನಿಮಗೂ ಗೊತ್ತಿದೆ...."

"ಹುಂ. ಆದರೆ ಅವನು ಅವಳ ಜೊತೆಯಲ್ಲಿ ಸಂಸಾರ ಮಾಡ ಬೇಕಾಗಿಲ್ಲ, ಯಶೋದ. ನಾನು ಹೇಳುವುದು ಮದುವೆಯಾಗಲಿ ಎಂದು ಅಷ್ಟೆ."

"ಇದೇನು ಮಾತು ಹೇಳುತ್ತಿದ್ದೀರಿ ? ನಿಮಗೆ ಮನಸ್ಸು ಸಮಸ್ಥಿತಿ ಯಲ್ಲಿಲ್ಲ"

"ಇದೆ, ಯಶೋದ, ಅದರ ವಿಷಯ ಯೋಚಿಸಬೇಡ. ನಾನು ಹೇಳುವುದನ್ನು ಕೇಳು. ನಾರಾಯಣ ಪ್ರಮದೆಯನ್ನು ಮದುವೆಯಾಗಲಿ ಮೊದಲು. ಆಮೇಲೆ ಅವನಿಗೆ ತಕ್ಕಂಥಾ ಇನ್ನೊಂದು ಸುಂದರಳಾದ ಹುಡಿಗಿಯನ್ನೂ ನೋಡೋಣ. ಹೇಗೂ ನಮ್ಮ ವಂಶದಲ್ಲಿ ಇಬ್ಬರು ಮೂವರು ಹೆಂಡತಿಯರಿರುವುದು ಅಪರೂಪವಲ್ಲ"

"ಏನೋ, ನನಗೆ ಒಂದೂ ಗೊತ್ತಾಗುತ್ತಿಲ್ಲ"

"ನಿಧಾನವಾಗಿ ಯೋಚನೆ ಮಾಡು. ನನ್ನ ಮಾತು ಕೇಳಿದರೆ ಮರ್ಯಾದೆ, ಸಂಪತ್ತು ಎಲ್ಲಾ ಉಳಿದು ನಾರಾಯಣ ಸುಖವಾಗಿರ ಬಹುದು. ಇಲ್ಲದಿದ್ದರೆ ಗೊತ್ತೇ ಇದೆಯಲ್ಲ ?"

ಲಲಿತೆ ಮನೆಗೆ ಬಂದಾಗಲೂ ಇವರಿಬ್ಬರ ಮಾತು ನಡೆದೇ ಇತ್ತು. ಇಬ್ಬರೂ ಸುಪ್ರಸನ್ನರಾಗಿ ಸಣ್ಣಗೆ ಮಾತನಾಡಿಕೊಳ್ಳುತ್ತಲಿದ್ದರು. ಲಲಿತೆಯನ್ನು ನೋಡಿ ಯಶೋದಮ್ಮನಿಗೆ ನಾರಾಯಣ ಇನ್ನೂ ಮನೆಗೆ ಬಂದಿಲ್ಲವೆಂದು ಅರಿವಾಯಿತು,

"ನಾರಾಯಣ ಎಲ್ಲಿಗೆ ಹೋದನೋ ? ಇನ್ನೂ ಬರಲಿಲ್ಲವಲ್ಲ ? ಅನಂತನ ಮನೆಗೆ ಹೋಗಿರಬಹುದೇನೋ ? ಲಲಿತಾ, ರಂಗನನ್ನು ಕಳುಹಿಸು ಅನಂತನ ಮನೆಗೆ, ಅಲ್ಲಿ ನಾರಾಯಣ ಇದ್ದಾನೇನೋ ನೋಡಿಕೊಂಡು ಬರಲಿ"

ಆಳು ರಂಗ ಅನಂತನ ಮನೆಗೆ ಹೋದಾಗ ಅದೇ ತಾನೇ ಅನಂತ—ನಾರಾಯಣ ಮನೆಗೆ ಬಂದಿದ್ದರು.

"ಏನೋ ರಂಗ ಬಂದೆ?" ಎಂದು ನಾರಾಯಣನೇ ಕೇಳಿದ.

"ಅಮ್ಮಾವರು ತಾವು ಇಲ್ಲಿ ಇದ್ದೀರೇನೋ ನೋಡಿಕೊಂಡು ಬಾ ಅಂತ ಕಳುಹಿಸಿದರು ಬುದ್ಧಿ."

"ನೋಡಿದೆಯೇನೋ ನಾರಾಯಣ?" ಅನಂತ ಕೇಳಿದ.

"ಹುಂ, ನೋಡಿದೆ ಕಣೋ. ಲೋ ರಂಗ, ಈಗ ನನ್ನನ್ನು ನೋಡಿದ್ದಾಯಿತಲ್ಲ ನೀನು, ಇನ್ನು ಹೊರಡು."

ರಂಗ ಇದೇ ಮಾತನ್ನು ಹೇಳಿದ ಯಶೋದಮ್ಮನವರಿಗೆ. ಅವರು ಗೋವಿಂದಪ್ಪನವರಿಗೆ ಹೇಳಿದರು,

"ನೀವು ಈಗ ಹೋಗಿ ಅವನನ್ನು ಕರೆದುಕೊಂಡು ಬರಬೇಕು."

"ನಡೆ ನೀನೂ, ಇಬ್ಬರೂ ಹೋಗಿ ಕರೆಯೋಣ" ಎಂದರು ಅವರು.

"ನಾರಾಯಣಾ" ಎಂದು ಗೋವಿಂದಪ್ಪನವರು ಅನಂತನ ಮನೆಯ ಮುಂದೆ ನಿಂತು ಕೂಗುತ್ತಲೇ ಅನಂತ ಓಡಿಬಂದು ಬಾಗಿಲನ್ನು ತೆಗೆದ.

"ದಯಮಾಡಿಸಿ ಒಳಗೆ"

"ಅದೆಲ್ಲಾ ಇರಲಪ್ಪ. ನಮ್ಮ ಹುಡುಗ ಇದ್ದಾನೆಯೋ ಒಳಗೆ?"

ಆ ಮಾತು ಕೇಳಿ ನಾರಾಯಣ ಈಚೆಗೆ ಬಂದ. ನಗುನಗುತ್ತ ತಂದೆ ಮಗನ ಮುಖವನ್ನು ನೋಡಿದರು. ಅವನಿಗೂ ಸಂತೋಷವಾಯಿತು, "ನಾನೇ ಗೆದ್ದೆ ಅಂತ ತೋರುತ್ತದೆಯಲ್ಲಾ?" ಎಂದುಕೊಂಡು ಕೇಳಿದ,

"ಏಕಪ್ಪ?"

"ಮನೆಗೆ ಬಾ, ಮಗು"

"ಒಂದು ಕ್ಷಣ ಒಳಗೆ ಬರುವುದಿಲ್ಲವೆ?" ಅನಂತ ಕೇಳಿದ.

"ಇನ್ನೊಂದು ದಿನ ಬರುತ್ತೇವೆ, ಈಗ ಹೊತ್ತಾಯಿತು, ಮನೆಯಲ್ಲಿ ಲಲಿತ ಒಬ್ಬಳೇ ಇದ್ದಾಳೆ."

ದಾರಿಯಲ್ಲಿ ಬರುತ್ತ ಮಗನನ್ನು ಮೆಲ್ಲಗೆ ಗೋವಿಂದಪ್ಪ ಅಣಕಿಸಿದರು :

"ಇಷ್ಟು ಬೇಗ ಇಪ್ಪತ್ತೈದು ವರ್ಷದಿಂದ ಬೆಳೆದ ಬಂಧನ ಕಡಿದು ಹೋಗುವುದೆಂದು ತಿಳಿದೆಯಾ ನಾರಾಯಣ ?"

"ಅಪ್ಪ, ಮಿತಿಮೀರಿ ಎಳೆದರೆ ಕಡಿಯದ ಬಂಧನವಿಲ್ಲ."

"ಕೇಳಿದೆಯೋ ಯಶೋದ, ನಿನ್ನ ಮಗ ಕವಿಯಾಗುತ್ತಿದ್ದಾನೆ."

"ಆಗಲಿ, ಸದ್ಯ ಈಗ ವಿರಸ ಬೇಡ. ಮಗು ನಾರಾಯಣ, ಅವರು ಹೇಳುವುದನ್ನೆಲ್ಲಾ ಕೊಂಚ ಗಮನವಿಟ್ಟು ಕೇಳು. ಮೊದಲೇ ಏನಾದರೂ ಹೇಳಿಬಿಡಬೇಡ. ಅವರಿಗಾದರೂ ನನಗಾದರೂ ನಿಮ್ಮಿಬ್ಬರ ಹಿತದ ಮೇಲೆ ತಾನೇ ದೃಷ್ಟಿ ?"

"ಇಲ್ಲವೆಂದವರು ಯಾರಮ್ಮಾ? ಹೇಳಿ ಅಪ್ಪ, ಏನು ಹೇಳುವಿರೋ ಕೇಳುತ್ತೇನೆ."

"ಸದ್ಯಕ್ಕೆ ಈಗ ಮಾತು ಬೇಡ ನಾರಾಯಣ. ನಾಳೆ ಹೇಳುತ್ತೇನೆ" ಎಂದರು ಅವರು.

ಮಾರನೆಯ ದಿನ ಮಧ್ಯಾಹ್ನ ಊಟವಾದಮೇಲೆ ತಾಯಿ, ತಂದೆ, ಮತ್ತು ಮಗ ಕುಳಿತು ಮಾತನಾಡಿದರು.

ಗೋವಿಂದಪ್ಪನವರೇ ಮಾತನಾಡಿದರು ಬಹಳ ಹೊತ್ತೆಲ್ಲ. ನಾರಾಯಣ ಕೊನೆಗೆ ಹೇಳಿದ,

"ಅಪ್ಪಾ, ಇದರಿಂದ ನಮಗೆ ಒಳ್ಳೆಯದಾಗದು. ಪ್ರಮದೆ ಕುರೂಪಿಯಿರಬಹುದು, ಆದರೆ ಅವಳೂ ಒಂದು ಮನುಷ್ಯಜೀವವಲ್ಲವೇ ? ನಮ್ಮ ಸ್ವಾರ್ಥಕ್ಕೆ ಅವರನ್ನು ಮೋಸಗೊಳಿಸಿ ದುಃಖಪಡಿಸುವುದು ಎಲ್ಲಿಯ ನ್ಯಾಯ ?"

"ಹಾಗೆಂದರೇನು ನಾರಾಯಣ ? ಗಂಡಸಿಗೆ ಒಂದೇ ಲಗ್ನದ ನಿಯಮ ಇಲ್ಲ ನಮ್ಮಲ್ಲಿ. ಹೆಂಡತಿಯರನ್ನು ಸಾಕುವ ಯೋಗ್ಯತೆಯಿರುವವನು ಹತ್ತು ಮದುವೆಗಳನ್ನು ಮಾಡಿಕೊಳ್ಳಬಹುದು, ಹತ್ತು ಜನರನ್ನೂ ಸುಖದಿಂದ ಇಡಬಹುದು. ಸ್ನೇಹಿತರನ್ನು ಮಾಡಿಕೊಳ್ಳುವಾಗ "ಒಬ್ಬರೇ

ಸ್ನೇಹಿತರು ಸಾಕು, ಇಬ್ಬರಿದ್ದರೆ ಸ್ನೇಹ ಕಡಿಮೆಯಾಗುತ್ತದೆ, ಎಂದೇನಾದರೂ ಅಂದುಕೊಳ್ಳುತ್ತಾರೆಯೇ. ಹಾಗೆಯೇ ಇದೂ...."

"ಆದರೂ, ಅಪ್ಪ ತುಂಬ ಯೋಚನೆ ಮಾಡಿ ನಿರ್ಧರಿಸಬೇಕಾದ ವಿಷಯ ಇದು"

"ಆಗಲಿ, ಅದಕ್ಕೇನು? ಇನ್ನೂ ಹನ್ನೆರಡು ದಿನಗಳಿವೆ. ನಾಳೆ ನಾವಿದ್ದರಲ್ಲಿ ನೀನು "ಹುಂ" ಅಂದರೆ ಲಗ್ನಪತ್ರಿಕೆಯನ್ನು ಅಚ್ಚು ಹಾಕಲು ಕಳುಹಿಸಬಹುದು."

ನಾರಾಯಣ ಯೋಚನೆ ಮಾಡಿದ ದಿನವೆಲ್ಲ. ಆದರೂ ಅವನಿಗೆ ಗೋವಿಂದಪ್ಪನವರ ಮಾತು ಮನಸ್ಸಿಗೆ ಸರಿಬರಲಿಲ್ಲ. "ಇದು ತಪ್ಪು. ವಿದ್ಯಾವಂತನಾಗಿ ನಾನು ಮಾಡತಕ್ಕ ಕೆಲಸವಲ್ಲ" ಎಂದೇ ಅನ್ನಿಸುತ್ತಿತ್ತು. ಆದರೆ, "ಅಪ್ಪ ದಿವಾಳಿಯಾಗುವ ಸನ್ನಿವೇಶ ಬಂದಿದೆಯೆನ್ನುತ್ತಾರಲ್ಲ, ಏನು ಮಾಡಿ ಇದರಿಂದ ಅವರನ್ನು ಪಾರು ಮಾಡುವುದು?" ಎಂದು ಬೇರೆ ಚಿಂತೆ ಕಾಡುತ್ತಿತ್ತು ಅವನನ್ನು.

ಅನಂತ ಮಾತ್ರ ನಿರ್ಧಾರದಿಂದ ಹೇಳಿಬಿಟ್ಟ,

"ಲೋ ನಾರಾಯಣ ನೀನು ಮರ್ಯಾದಸ್ಥನಾದರೆ ಈ ಮೋಸದಲ್ಲಿ ಭಾಗವಹಿಸದೆ ದೂರವಾಗು. ನಿನ್ನ ತಂದೆಗೆ ನಿಜವಾಗಿ ಅಷ್ಟು ಕಷ್ಟವಾಗುವಂತಿದ್ದರೆ, ಖಂಡಿತ ಆ ಹುಡುಗಿಯನ್ನೇ ಲಗ್ನ ಮಾಡಿಕೋ, ಆದರೆ ಇನ್ನೊಂದು ಮದುವೆಯ ಮಾತನ್ನು ಮಾತ್ರ ಮನಸ್ಸಿನಲ್ಲಿಯೂ ತರಬೇಡ. ಅವಳೇ ಸುರಸುಂದರಿ ಅಂತ ಮನಸ್ಸಿನಲ್ಲಿ ಭಾವಿಸಿಕೊಂಡು ಅಭಿಮಾನ ಪಡುವುದನ್ನು ಕಲಿ. ಇಲ್ಲವೇ ಈ ಮದುವೆಗೆ ಒಪ್ಪಬೇಡ"

ಗೆಳೆಯನ ಮಾತುಗಳು ನಾರಾಯಣನ ಮೇಲೆ ತುಂಬ ಪರಿಣಾಮವನ್ನುಂಟುಮಾಡಿದುವು. ಮಾರನೆಯ ದಿನ ರಾತ್ರಿ ತಂದೆಯ ಊಟವಾದ ಮೇಲೆ ಅವರ ಬಳಿಗೆ ಹೋಗಿ ಹೇಳಿದ,

"ಅಪ್ಪ ತುಂಬ ಯೋಚನೆ ಮಾಡಿದ್ದೇನೆ. ಈ ಮದುವೆ ಆಗ ತಕ್ಕದ್ದಲ್ಲ. ಅವರೇನು ಮಾಡುತ್ತಾರೋ ಮಾಡಲಿ. ಹೇಗೂ ನನ್ನ

ಓದು ಮುಗಿಯಿತು. ನಾನು ಸಂಪಾದಿಸಿ ಮನೆಯನ್ನು ನಿಭಾಯಿಸು ತ್ತೇನೆ, ನೀವು ಅದರ ಚಿಂತೆ ಬಿಡಿರಿ"

ಗೋವಿಂದಪ್ಪ ಕೇಳಿದರು,

"ಇದು ನಿನ್ನ ಕಡೆಯ ಮಾತೇ ನಾರಾಯಣ ?"

"ಹೌದು, ಅಪ್ಪ"

"ಏಕೆ ನಾರಾಯಣ, ಯಾವುದಾದರೂ ಹುಡುಗಿ ನಿನ್ನ ಮನಸ್ಸನ್ನು ಒಲಿಸಿಕೊಂಡಿದ್ದಾಳೇನು ? ನೀನು ಯಾರ ಮಾತಿಗೋ ಕಿವಿಗೊಟ್ಟು ಈ ನಿಶ್ಚಯಕ್ಕೆ ಬಂದಿದ್ದೀಯೆಂದು ತೋರುತ್ತಿದೆ ನನಗೆ"

ನಾರಾಯಣ ತಂದೆಯ ಮುಖ ನೋಡಿದ. ಅವರು ಏನೊಂದೂ ಉದ್ವೇಗವಿಲ್ಲದೆ ಕೇಳಿದರು,

"ಹೇಳು ನಾರಾಯಣ, ನಿನ್ನ ಮನಸ್ಸಿನ ಸ್ಥಿತಿ ತಿಳಿಯದೆ ನಾವೇನು ಮಾಡುವುದು ?"

ಹಿಂದೆ ಮುಂದೆ ಯೋಚಿಸದೆ ನಾರಾಯಣ ಹೇಳಿದ,

"ಅಪ್ಪಾ, ನನಗೆ ಲಲಿತೆಯ ಗೆಳತಿ ಮಾಲತಿಯನ್ನು ಮದುವೆ ಯಾಗುವುದಕ್ಕೆ ಇಷ್ಟವಿದೆ"

"ಮಾಲತಿ !"

ಒಮ್ಮೆಲೇ ಅವರ ಮುಖದ ಮೇಲೆ ಇದ್ದ ಶಾಂತತೆಯ ಆವರಣ ಜಾರಿಬಿತ್ತು.

"ನಾರಾಯಣಾ ! ನನ್ನ ಕಣ್ಣ ಮುಂದೆಯೇ ನೀನು ಈ ಆಟ ಪ್ರಾರಂಭಿಸಿದೆಯಾ ? ಮಾಲತಿ ಆಸ್ಪತ್ರೆಯ ದಾದಿಯ ಮಗಳು, ಬೇರೆ ಜಾತಿಯ ಹುಡುಗಿ ಅವಳಿಗೆ....ನೀನು........" ಅವರಿಗೆ ಆ ಕೋಪದಲ್ಲಿ ಉಪಯೋಗಿಸಲು ಶಬ್ದಗಳೇ ಸಿಗದಂತಾಯಿತು.

ನಾರಾಯಣನಿಗೂ ತಂದೆಯ ಕೋಪದಿಂದ ಸ್ವಲ್ಪ ಕೋಪ ಬಂದಿತು.

" ದಾದಿಯ ಮಗಳಾದರೇನಪ್ಪಾ ? ಅವಳ ಯೋಗ್ಯತೆ........"

"ನಾರಾಯಣಾ! ನಿಲ್ಲಿಸು ಮಾತು! ಅದನ್ನು ಕೇಳಲು ನನಗಿಚ್ಛೆಯಿಲ್ಲ. ಈ ತಕ್ಷಣ ನಿನ್ನ ಬಟ್ಟೆಬರೆಗಳನ್ನು ತೆಗೆದುಕೊಂಡು ಹೊರಡು ಮನೆಯಿಂದ, ಅಯೋಗ್ಯ! ನಡೆಯಾಚೆ"

ನಾರಾಯಣ ಈಚೆಗೆ ಬಂದ. ಬಾಗಿಲಿನಬಳಿ ಯಶೋದಮ್ಮ ನಿಂತಿದ್ದರು.

"ಏನಾಯಿತು ಮಗು! ಮಾಲತಿಯ ಮಾತೇಕೆ ಬಂದಿತು?"

ಗೋವಿಂದಪ್ಪ ಹಿಂದೆಯೇ ಬಂದು ಕೂಗಿಕೊಂಡರು,

"ಅವಳನ್ನು ಮದುವೆಯಾಗುತ್ತಾನಂತೆ! ಪ್ರೇಮ ವಿವಾಹ ಬೇಕಾಯಿತೇನೋ? ನೀನೂ ಸರಿಯಾಗಿದ್ದಿ ಯಶೋದ, ಹೋಗ್ತಾ ಬರ್ತಾ, ಅವಳನ್ನು ಕರೆದೂ ಕರೆದೂ ಇಲ್ಲಿಗೆ ತಂದಿಟ್ಟೆ"

ಲಲಿತೆಯೂ ಬಂದಳು ಅಲ್ಲಿಗೆ,

"ಅಪ್ಪ ಏನೇನೋ ಹೇಳ್ತಿದ್ದೀ. ಮಾಲತಿ ಅಣ್ಣನ ಮುಖ ಕೂಡ ಸರಿಯಾಗಿ ನೋಡಿಲ್ಲ ಇವತ್ತಿನ ವರೆಗೂ"

"ಇವನು ಅವಳ ಮುಖ ನೋಡಿದರೆ ಸಾಕು ಅಂತಲೇನೋ ಅವಳ ಮನಸ್ಸಿನಲ್ಲಿ! ಅನಿಷ್ಟ ಸೋಗಲಾಡಿ ಹುಡುಗಿ........"

ನಾರಾಯಣ ಹೆಚ್ಚು ಕೇಳಲು ಅಲ್ಲಿ ನಿಲ್ಲಲಿಲ್ಲ. ನೆಟ್ಟಗೆ ಕೊಠಡಿಗೆ ಹೋಗಿ ತನ್ನ ಬಟ್ಟೆಬರೆಗಳನ್ನೆಲ್ಲಾ ಪೆಟ್ಟಿಗೆ ತುಂಬಿಕೊಂಡು ಕೋಟನ್ನು ಹಾಕಿಕೊಂಡ. ಯಶೋದಮ್ಮ ಇನ್ನೂ ಗೋವಿಂದಪ್ಪನವರೊಡನೆ ಮಾತನಾಡುತ್ತಿರುವುದು ಅವನಿಗೆ ಕೇಳುಸುತ್ತಿತ್ತು. ಒಂದು ಸಾರಿಯೂ ಅತ್ತ ನೋಡದೆ ಮನೆಯಿಂದ ಹೊರಟೇ ಬಿಟ್ಟ ನಾರಾಯಣ.

ಗೋವಿಂದಪ್ಪನವರಿಗೆ ಅಭಿಮಾನಭಂಗವಾಗಿತ್ತು,

"ಇನ್ನು ಮಾತು ಸಾಕು ಯಶೋದ. ನಿನಗೆ ಇಷ್ಟಾಗಿ ಮಗನೇ ಬೇಕಾಗಿದ್ದರೆ ನೀನೂ ಹೊರಟುಹೋಗು. ಇಲ್ಲವೇ ನಾನು ಬೇಕಾಗಿದ್ದರೆ ಅವನು ಇದ್ದಾನೆ ಎನ್ನುವುದನ್ನು ಮರೆತಿರಬೇಕು. ಲಲಿತೆ ನಿನಗೂ ಅದೇ ಮಾತು ನಾನು ಹೇಳುವುದು" ಎಂದು ಯಶೋದಮ್ಮನವರ ಬಾಯಿ ಮುಚ್ಚಿಸಿದರು.

ಯಶೋದಮ್ಮ ಒಂದು ಕ್ಷಣ ಯೋಚಿಸಿದರು,

"ನಾರಾಯಣನ ಜೊತೆಯಲ್ಲಿ ನಾನೂ ಮನೆಬಿಟ್ಟು ಹೊರಟು ಹೋಗಬೇಕು" ಆದರೆ ತಕ್ಷಣ ದುಃಖದ ಮೂರ್ತಿಯಾಗಿ ನಿಂತಿದ್ದ ಮಗಳನ್ನು ನೋಡಿದರು, "ಇವಳ ಮದುವೆಯಾಗಬೇಕು. ಅದಕ್ಕೆ ಸಮಾಜದಲ್ಲಿ ಸ್ಥಾನ ಬೇಕು. ಗಂಡನನ್ನು ಬಿಟ್ಟು ಹೋದವಳ ಮಗಳಿಗೆ ಒಳ್ಳೆಯ ಮನೆ ಹೇಗೆ ಸಿಗುತ್ತದೆ!" ಎನ್ನಿಸಿತು, ಗಂಟಲುಬ್ಬಿ ಬಂದಿತು. ಮಾತನಾಡದೆ ಮಗಳನ್ನು ಎಳೆದುಕೊಂಡು ಒಳಕ್ಕೆ ಹೋದರು.

ಗೋವಿಂದಪ್ಪ ಸುಮ್ಮನಾಗಲಿಲ್ಲ ಅಲ್ಲಿಗೆ ಬೆಳಗಾಗುತ್ತಲೇ ಮುಖ ಮಾರ್ಜನಗಳನ್ನು ತೀರಿಸಿಕೊಂಡು ಮಾಲತಿಯ ಮನೆಗೆ ಹೋದರು.

ಮಾಲತಿಯೇ ಬಾಗಿಲನ್ನು ತೆಗೆದಳು. ಅವರ ದರ್ಪದಿಂದ ಕೂಡಿದ ಮುಖವನ್ನು ನೋಡಿ ಅವಳಿಗೆ ಸ್ವಲ್ಪ ಹೆದರಿಕೆಯೇ ಆಯಿತು.

"ನಿಮ್ಮ ತಾಯಿ ಇದ್ದಾರೆಯೇ ಮನೆಯಲ್ಲಿ ?"

"ಇದ್ದಾರೆ. ಒಳಕ್ಕೆ ಬನ್ನಿ" ಎಂದು ಅವರನ್ನು ಕೂಡಿಸಿ, ಮಾಲತಿ ಒಳಕ್ಕೆ ಹೋಗಿ ತಾಯಿಯನ್ನು ಕರೆದಳು, "ಅಮ್ಮಾ ಲಲಿತೆಯ ತಂದೆ ಬಂದಿದ್ದಾರೆ"

ಮಾಲತಿಯ ತಾಯಿ, ವನಜಮ್ಮ ಆಸ್ಪತ್ರೆಗೆ ಹೋಗಲು ಸಿದ್ಧರಾಗಿ ಏನೋ ಹುಡುಕುತ್ತ ಇದ್ದವರು ಮಗಳ ಮಾತನ್ನು ಕೇಳಿ ಈಚೆಗೆ ಬಂದರು,

"ಆರೋಗ್ಯವೇ ?''

''ಹುಂ....ಆರೋಗ್ಯ. ಏನು ಕೆಲಸಕ್ಕೆ ಹೊರಟಿರುವಂತಿದೆ?

''ಹೌದು, ಇನ್ನೇನು ಅರ್ಧಗಂಟೆಯಲ್ಲಿ ನಾನು ಆಸ್ಪತ್ರೆಯಲ್ಲಿರಬೇಕು.'' ಎಂದರು ವನಜಮ್ಮ "ಏನಾದರೂ ಮಾತನಾಡುವುದಿತ್ತೇ ?"

"ಪರವಾಯಿಲ್ಲ. ದಾರಿಯಲ್ಲೇ ಮಾತನಾಡಿದರಾಯ್ತು. ನಾನೂ ಅಷ್ಟು ದೂರ ನಿಮ್ಮೊಂದಿಗೆ ಬರುತ್ತೇನೆ''

''ಸರಿ, ನಡೆಯಿರಿ ಹಾಗಾದರೆ'' ಎಂದರು ವನಜಮ್ಮ.

ಗೋವಿಂದಪ್ಪ ಏನು ಮಾತನಾಡುವುದೆಂದು ಸರಿಯಾಗಿ ಲೆಖ್ಖ ಹಾಕಿಕೊಂಡು ಬಂದಿದ್ದರು. ಹತ್ತು ಹೆಜ್ಜೆ ನಡೆದ ಮೇಲೆ ಮಾತು ಪ್ರಾರಂಭಿಸಿದರು.

"ಮಾಲತಿಯ ಓದು ಮುಗಿಯಿತಲ್ಲವೇ? ಮುಂದೆ ಅವಳನ್ನು ಏನು ಮಾಡಲಿದ್ದೀರಿ?"

''ಇನ್ನೂ ಫಲಿತಾಂಶ ಬರಲಿಲ್ಲ ಪರೀಕ್ಷೆಯದು. ಅದು ಬರಲಿ, ನೋಡೋಣ''

''ಹಾಗೆ ಅಂತ ಮನಸ್ಸಿನಲ್ಲಿಯಾದರೂ ಒಂದು ಯೋಚನೆ ಮಾಡದಿರುವುದಕ್ಕಾಗುತ್ತದೆಯೇ?"

"ಆಗುವುದಿಲ್ಲ, ನಿಜ" ವನಜಮ್ಮ ಅವರ ಮಾತನ್ನೊಪ್ಪಿ ನುಡಿದರು, "ನನಗೆ ಏನು ಹೆಚ್ಚು ಗುರಿ ಇಲ್ಲ. ಸದ್ಯದಲ್ಲಿ—ಎಲ್ಲಿಯಾದರೂ ಒಂದು ಕೆಲಸ ನೋಡಿದರೆ ಆಯ್ತು''

"ಏನು, ಮದುವೆ ಮಾಡುವ ಯೋಚನೆಯಿಲ್ಲವೇ ನಿಮಗೆ?"

ವನಜಮ್ಮ ಆ ಮಾತನ್ನು ಕೇಳಿ ಖಿನ್ನರಾದರು,

"ಅದಕ್ಕೆ ವರ ಹುಡುಕುವುದು, ನಿಂತು ಮಾಡಿಸುವುದು ಇವಕ್ಕೆಲ್ಲ ಯಾರೂ ಬೇಡವೇ? ನನಗಂತೂ ಮೂರು ಹೊತ್ತೂ ಕೆಲಸ. ನೋಡೋಣ ಅವಳ ಹಣೆಯಲ್ಲಿ ಏನು ಬರೆದಿದೆಯೋ?"

ಇದು ಗೋವಿಂದಪ್ಪನವರು ನಿರೀಕ್ಷಿಸದ ಉತ್ತರ. ಅವರು ಮತ್ತೆ ಕೇಳಿದರು,

"ಹಾಗಾದರೆ ನೀವು ಇನ್ನೂ ವರ ನೋಡಿಲ್ಲವೆ? ಈ ಹುಡುಗ ಆಗಬಹುದು ಎಂದೂ ಮನದಲ್ಲಿ ಅಂದುಕೊಂಡಿಲ್ಲವೆ?"

"ಇಲ್ಲ, ಇಲ್ಲ."

ಈ ಪ್ರಶ್ನೆಗಳಿಗಿಂತ ನೆಟ್ಟಗೆ ಕೇಳಿಬಿಡುವುದೇ ವಾಸಿ ಎಂದುಕೊಂಡು ಗೋವಿಂದಪ್ಪ ಕೇಳಿದರು,

"ನಿಮಗೆ ನಮ್ಮ ನಾರಾಯಣನ ಮೇಲೆ ಕಣ್ಣಿಲ್ಲವೆ?"

"ನಾರಾಯಣ!" ಆಕೆ ಕಕ್ಕಾಬಿಕ್ಕಾದರು.

"ಸಾಕು, ನಾಟಕ ಆಡಬೇಡಿ. ಇದು ನನ್ನ ಬಳಿ ನಡೆಯುವುದಿಲ್ಲ. ಒಳ್ಳೆಯ ಮಾತಿನಿಂದ ಈ ಯೋಜನೆ ನಿಲ್ಲಿಸಿದಿರೋ ಸರಿ, ಇಲ್ಲದಿದ್ದರೆ ನಿಮ್ಮ ಕೆಲಸಕ್ಕೆ ಸಂಚಕಾರ ಬಂದೀತು."

ವನಜಮ್ಮ ತಡವರಿಸುತ್ತ ಕೇಳಿದರು,

"ಇದೇನು ಮಾತು ಇದು? ನಾನು ಎಂದಿಗೂ ಈ ವಿಷಯ ಮನಸ್ಸಿನಲ್ಲಿಯೂ ತಂದಿಲ್ಲವಲ್ಲ!"

"ತರಬೇಡಿ. ಅದೇ ನಾನು ಹೇಳುವುದು. ಹುಂ. ಇನ್ನು ನಾನು ಹೇಳುವುದನ್ನು ಹೇಳಿಯಾಯ್ತು, ಹೊರಡುತ್ತೇನೆ" ಎಂದು ಗೋವಿಂದಪ್ಪ ಹಿಂದಿರುಗಿದರು.

ವನಜಮ್ಮನ ಮನಸ್ಸು ಅಲ್ಲೋಲಕಲ್ಲೋಲವಾಗಿತ್ತು. ಆಸ್ಪತ್ರೆಯಲ್ಲಿ ಅರ್ಧಗಂಟೆಯೂ ಕೆಲಸ ಮಾಡಲಾರದೆ ಹೋದಳು. ಇದು ವೈದ್ಯರ ಕಣ್ಣಿಗೂ ಬಿತ್ತು.

"ಏನಾಗಿದೆ ವನಜಮ್ಮ ನಿಮಗೆ?"

"ಏನೋ? ಕೆಲಸ ಮಾಡುವುದಕ್ಕೆ ಆಗುವುದಿಲ್ಲ"

"ಚೆನ್ನಾಗಿ ಒಂದು ದಿನ ವಿಶ್ರಾಂತಿ ತೆಗೆದುಕೊಳ್ಳಬಾರದೇಕೆ? ನೀವು ಮನೆಗೆ ಹೋಗಿ ವನಜಮ್ಮ, ರಜೆಗೆ ಒಂದು ಚೀಟಿಕೊಟ್ಟು, ಮಿತಿಮೀರಿ ಆಯಾಸವಾದಾಗ ಕೆಲಸ ಮಾಡಬಾರದು" ಎಂದರು ಅವರು.

ವನಜಮ್ಮ ಹಿಂದಿರುಗಿ ಬಂದುದನ್ನು ನೋಡಿ ಮಾಲತಿಗೆ ಆಶ್ಚರ್ಯವಾಯಿತು, "ಇದೇನಮ್ಮಾ ಇವತ್ತು?"

"ಏನೋ ಬೇಸರವಾಗಿತ್ತು ಮಾಲಾ. ರಜ ತೆಗೆದುಕೊಂಡು ಬಂದೆ. ನಿನ್ನ ಕೆಲಸವೆಲ್ಲ ಮುಗಿದಿದ್ದರೆ ಇಲ್ಲಿ ಬಾ ಸ್ವಲ್ಪ"

"ಏನಮ್ಮ?"

"ನೀನು ಲಲಿತೆಯ ಅಣ್ಣನೊಂದಿಗೆ ಏನಾದರೂ ಮಾತನಾಡುವ ಅಭ್ಯಾಸ ಇಟ್ಟುಕೊಂಡಿದ್ದೀಯಾ ಮಾಲಾ?"

"ಇಲ್ಲಮ್ಮ, ಅವರೇನೋ ಒಳ್ಳೆಯವರು ಅಂತ ತೋರುತ್ತೆ. ಆದರೂ ನಾನು ಸಾಧ್ಯವಿದ್ದಷ್ಟು ದೂರ ದೂರವೇ ಇರುತ್ತೇನೆ."

"ಹಾಗಿದ್ದರೆ ಈತ ಏತಕ್ಕೆ ಈ ಮಾತು ಹೇಳಿದರೋ?"

"ಯಾವ ಮಾತಮ್ಮ ?

ಸ್ವಲ್ಪ ಅನುಮಾನಿಸಿ ವನಜಮ್ಮ ಮಗಳಿಗೆ ಗೋವಿಂದಪ್ಪನವರಾಡಿದ ಮಾತನ್ನು ಹೇಳಿದರು. ಮಾಲತಿ ವಿಸ್ಮಿತೆಯಾದಳು.

"ಎಷ್ಟು ಊಹಾಪೋಹಗಳನ್ನು ಮಾಡಿರಬೇಕು ಇವರು! ಅಮ್ಮಾ ಈಗ ಅವರ ಮನೆಯಲ್ಲಿ ನಡೆದಿರುವ ಸಂಗತಿ ಇಷ್ಟು. ಒಂದು ಕುರೂಪಿ ಧನವಂತರ ಮನೆಯ ಹುಡಿಗಿಯನ್ನು ಸೊಸೆಯಾಗಿ ತರಲು ಲಲಿತೆಯ ತಂದೆ ಪ್ರಯತ್ನಪಟ್ಟರು, ಲಲಿತೆ ಅಣ್ಣ ಆ ಮಾತಿಗೆ ಒಪ್ಪಲಿಲ್ಲ. ಇವರು ಅದಕ್ಕೊಂದು ಅರ್ಥ ಕಲ್ಪಿಸಿದ್ದಾರೆ"

"ಹೋಗಲಿ ಬಿಡು ಮಾಲಾ" ಎಂದರು ವನಜಮ್ಮ.

ನಾರಾಯಣ ಮನೆಯಿಂದ ನೆಟ್ಟಗೆ ಅನಂತನಲ್ಲಿಗೆ ಹೋಗಿ, ಅಷ್ಟು ಹೊತ್ತಿಗೆ ಎಲ್ಲ ವಿಷಯಗಳನ್ನೂ ಹೇಳಿದ್ದ. ಅನಂತ ಅವನು ಹೇಳಿದುದನ್ನೆಲ್ಲಾ ಕೇಳಿ ತಲೆದೂಗಿದ,

"ಈಗ ನಿನ್ನ ಕಾರ್ಯಕ್ರಮವೇನು ಹಾಗಿದ್ದರೆ?"

"ಮೊದಲು ಕೆಲಸಕ್ಕೆ ಅರ್ಜಿ ಹಾಕುವುದು. ಬಳಿಕ ಮಾಲತಿಯನ್ನು ಮದುವೆಯಾಗುವುದು."

"ಚೆನ್ನಾಯ್ತು, ಮಾಲತಿಯ ತಾಯಿ ನಿನ್ನನ್ನು ಅಳಿಯನಾಗಲೆಂದು ಒಪ್ಪದಿದ್ದರೆ........"

"ಏತಕ್ಕೆ ಒಪ್ಪುವುದಿಲ್ಲ?"

"ನಿಮ್ಮ ತಂದೆಯ ನಿಷ್ಠುರಕ್ಕೆ ಸಿಗದೆ ಇರಲು"

ನಾರಾಯಣ ಸ್ವಲ್ಪ ಸುಮ್ಮನೆ ಇದ್ದು ಬಳಿಕ ನುಡಿದ,

"ಅನಂತ ಬರುತ್ತೀಯಾ, ಅವರ ಮನೆಗೆ ಹೋಗೋಣ?"

"ಹೋಗಿ....?"

"ಏನಾದರೂ ಒಂದನ್ನು ನಿಷ್ಕರ್ಷೆ ಮಾಡಿಕೊಂಡು ಬರೋಣ"

ಅನಂತನಿಗೆ ಒಂದು ಕಡೆ ನಗು, ಇನ್ನೊಂದು ಕಡೆ ಆತಂಕ.

"ಏನು ಹಾಗಾದರೆ, ತಡಮಾಡಬೇಡ ಇನ್ನು" ಎಂದು ಎದ್ದ.

ಮಾಲತಿಯ ಮನೆಯನ್ನು ದೂರದಿಂದ ನೋಡಿದ್ದ ನಾರಾಯಣ. ಇವತ್ತು ಅದನ್ನು ಪ್ರವೇಶಿಸುವ ಯೋಗ ದೊರಕಿತು.

ಮನೆಯ ಬಾಗಿಲು ತೆರೆದಿತ್ತು. ಹತ್ತಿರದಲ್ಲಿಯೇ ವನಜಮ್ಮ ಮಾಲತಿ ಕುಳಿತು ಬಟ್ಟೆ ಹೊಲೆಯುತ್ತಿದ್ದರು.

ಬಂದವರನ್ನು ನೋಡಿ ಅವರಿಬ್ಬರಿಗೂ ಒಂದು ತರಹ ಆಯಿತು. ಇಬ್ಬರೂ ಎದ್ದು ನಿಂತರು.

ನಾರಾಯಣ ಸುಮ್ಮನೆ ನಿಂತಿದ್ದ. ಅನಂತನೇ ಮಾತನಾಡ ಬೇಕಾಯಿತು:

"ನಾವು ಒಳಕ್ಕೆ ಬರಬಹುದೆ?"

"ಬನ್ನಿ" ಎಂದರು ವನಜಮ್ಮ. ಮಾಲತಿ ಅಡಿಗೆ ಮನೆಯ ಕಡೆ ಹೋದಳು. ಹುಡುಗರಿಬ್ಬರೂ ಒಳಕ್ಕೆ ಬಂದು ಕುಳಿತರು.

"ಇವರು ನಾರಾಯಣ್. ಗೋವಿಂದಪ್ಪನವರ ಮಕ್ಕಳು" ಅನಂತ ನುಡಿದ.

"ಗೊತ್ತು, ಕೇಳಿ ಬಲ್ಲೆ" ವನಜಮ್ಮ ಸುಮ್ಮನೆ ಹೇಳಿದರು.

ಒಂದು ನಿಮಿಷ ಎಲ್ಲರೂ ಮೌನವಾಗಿದ್ದರು. ಆಮೇಲೆ ವನಜಮ್ಮ ಕೇಳಿದರು,

"ಏನು ಇತ್ತ ಕಡೆ ಬಂದಿದ್ದು?"

"ಸ್ವಲ್ಪ ಕೆಲಸವಿತ್ತು" ಅನಂತನೇ ಹೇಳಿದ, "ಸ್ವಲ್ಪ ಕಷ್ಟವಾದ ಕೆಲಸ"

"ಚಿಂತೆಯಿಲ್ಲ ಹೇಳಿ"

"ಹೇಳಬೇಕೆಂದೇ ಬಂದಿದ್ದೇವೆ. ಆದರೆ ಹೇಗೆ ಪ್ರಾರಂಭಿಸಬೇಕು ಎಂಬುದು ತಿಳಿಯದು" ನಾರಾಯಣ ಹೇಳಿದ.

"ನಮ್ಮ ಮಾಲತಿಯ ವಿಷಯವೇ?"

"ಹೌದು, ಹೌದು" ಅನಂತ ಸಮಾಧಾನದಿಂದ ನುಡಿದ, "ನಿಮಗೆ ಹೇಗೆ ಗೊತ್ತಾಯಿತು?"

"ಇವತ್ತು ಬೆಳಿಗ್ಗೆ ಗೋವಿಂದಪ್ಪನವರು ಬಂದಿದ್ದರು" ವನಜಮ್ಮ ನಿಟ್ಟುಸಿರನ್ನು ಬಿಟ್ಟು ಹೇಳಿದರು.

"ಏನು ಮಾತನಾಡಿದರು ಅಪ್ಪ ನಿಮ್ಮೊಡನೆ?" ನಾರಾಯಣ ಕೇಳಿದ. ವನಜಮ್ಮ ಏನೂ ಮುಚ್ಚುಮರೆಯಿಲ್ಲದೆ ಗೋವಿಂದಪ್ಪನವರು ಆಡಿದ ಮಾತನ್ನು ಹೇಳಿದರು. ನಾರಾಯಣನಿಗೆ ಲಜ್ಜೆಯಾಯಿತು.

"ಛೇ ಎಷ್ಟು ಅನ್ಯಾಯವಾಯಿತು! ನಾನು ಅಪ್ಪನೊಂದಿಗೆ ನೆನ್ನೆ ಆ ಮಾತನ್ನು ಹೇಳಬಾರದಾಗಿತ್ತು."

"ನೀವು ಹೇಳಿದಿರೇನು ಅವರಿಗೆ?"

"ಹೌದು," ಎಂದ ನಾರಾಯಣ, "ನನ್ನ ಮನಸ್ಸಿನಲ್ಲಿ ಬಂದದ್ದು ಬಾಯಲ್ಲಿ ಬಂದು ಹೋಯಿತು" ವನಜಮ್ಮ ಸುಮ್ಮನಿದ್ದರು.

ಅನಂತ ಹೇಳಿದ,

"ಅವರ ಮಾತು ಹೇಗಾದರೂ ಇರಲಿ, ನಿಮಗೆ, ನಾರಾಯಣನಿಗೆ ಮಾಲತಿಯನ್ನು ಕೊಡಲು ಒಪ್ಪಿಗೆ ಇದ್ದರಾಯಿತು"

ವನಜಮ್ಮ ಮಾತನಾಡಲಿಲ್ಲ. ಮತ್ತೆ ಅನಂತ ಹೇಳಿದ,

"ಈಗ ಮಾತಿನ ನಿಷ್ಕರ್ಷೆಯಾಗಿಬಿಡಲಿ. ನಾರಾಯಣ ಕೆಲಸಕ್ಕಾಗಿ ಶೋಧಿಸುತ್ತಲಿದ್ದಾನೆ. ಎಂಜನೀಯರಿಗೆ ಕೆಲಸಕ್ಕೇನೂ ಅಭಾವವಿಲ್ಲ. ಸರಿಯಾದದ್ದು ಸಿಕ್ಕಿದ ಕೂಡಲೇ ಮದುವೆ ಮಾಡಿಬಿಟ್ಟರೆ ಸರಿ."

ವನಜಮ್ಮ ಅವನ ಮುಖ ನೋಡಿದರು,

"ಏಕಮ್ಮಾ, ನಿಮಗೆ ಇನ್ನೇನಾದರೂ ಆತಂಕವಿದೆಯೇ?"

ಆಕೆ ಹೇಳಿದರು,

"ಆತಂಕ ಬೇಡವೇ ಮತ್ತೆ? ಹುಡುಗು ಹುಡುಗರ ಮಾತು ಕೇಳಿ ಮಗಳನ್ನು ಕೊಟ್ಟು ಆಮೇಲೆ ನಾನು ದುಃಖಪಡಲೇ? ಒಂದು ಹೆಣ್ಣಿಗಾಗಿ ತಂದೆತಾಯಿಗಳನ್ನು ಬಿಟ್ಟವರು ನನ್ನ ಮಗುವನ್ನು ಸರಿಯಾಗಿ ನೋಡಿಕೊಳ್ಳುತ್ತಾರೆಂಬ ಭರವಸೆ ನನಗಿಲ್ಲ"

ಅನಂತನಿಗೆ ಒಂದು ತರಹೆ ಆಯಿತು,

"ಆಗಲಿ, ಯೋಚನೆ ಮಾಡಿ ಉತ್ತರ ಹೇಳಿರಿ."

"ಯೋಚನೆ ಗೀಚನೆ ಒಂದೂ ಬೇಡಪ್ಪ. ದೊಡ್ಡವರ ಒತ್ತಾಸೆ ಯಿಲ್ಲದ ನೆಂಟಸ್ತಿಗೆ ನಮಗೆ ಬೇಡ"

ನಾರಾಯಣನ ಮುಖ ಕೆಂಪಗಾಗಿತ್ತು.

"ಏಳು ಅನಂತ, ಹೋಗೋಣ'' ಎಂದ.

ಅವರಿಬ್ಬರೂ ಹೊರಟುಹೋದಮೇಲೆ ಮಾಲತಿ ಈಚೆಗೆ ಬಂದಳು. ವನಜಮ್ಮನವರ ಕಣ್ಣುಗಳಲ್ಲಿ ನೀರು ತುಂಬಿತ್ತು,

"ಅಳುವುದೇಕಮ್ಮಾ?" ಎಂದಳು ಮಾಲತಿ.

"ಅಳದೆ ಏನು ಮಾಡಲಿ ಮಾಲಾ? ಎಂಥಾ ಒಳ್ಳೆಯ ವರ, ತಾನಾಗಿ ಬಂದಿತ್ತು. ಏತಕ್ಕೋ ಹೆದರಿ ಬಿಡಬೇಕಾಯಿತು"

"ಅಂದರೆ ಅಮ್ಮಾ ನಿನಗೆ ಇದರಲ್ಲಿ ಇಷ್ಟ ಇತ್ತೇ?"

"ಇಷ್ಟವಿದ್ದರೇನು ಬಂತು ಮಾಲಾ? ಎಲ್ಲಾದಕ್ಕೂ ಪಡೆದು ಬಂದಿರಬೇಕು.''

ಮಾಲತಿ ಸುಮ್ಮನಾದಳು. ಈ ಮಾತುಕತೆಗಳು ಆಗ ಅವಳ ಮೇಲೆ ಏನೂ ಪರಿಣಾಮ ಮಾಡಲಿಲ್ಲವಾದರೂ ಪುರುಸೊತ್ತಾದಾಗಲೆಲ್ಲ, ಇದೇನು ಹೀಗಾಯಿತು? ಎಂದುಕೊಳ್ಳುವಂತೆ ಆಗತೊಡಗಿತು. ನಾರಾಯಣನ ಮೊದಲಿನ ಮಾತುಕತೆ, ನಡೆ ನುಡಿಗಳಿಗೆಲ್ಲಾ ಅವಳಿಗೆ ಬೇರೆಯ ಅರ್ಥ ಕಾಣತೊಡಗಿತು. ಅವಳರಿಯದಂತೆಯೇ ಅವಳ ಮನಸ್ಸು ಪರವಶವಾಗತೊಡಗಿತು.

ಗೋವಿಂದಪ್ಪನವರು ಲಲಿತೆಗೆ ಮಾಲತಿಯನ್ನು ನೋಡಕೂಡ ದೆಂದು ಕಟ್ಟಪ್ಪಣೆಮಾಡಿದರು ಆದರೆ ಅವಳು ಬಿಟ್ಟಾಳೇ? ಒಂದು ದಿನ ತಂದೆ ಮನೆಯಲ್ಲಿ ಇಲ್ಲದಾಗ ಹೊರಟಳು, ದಾರಿಯಲ್ಲಿ ಅವರೇ ಸಿಗ ಬೇಕೇ? ಸರಿ, ಚೆನ್ನಾಗಿ ಛೀಮಾರಿ ಹಾಕಿ ಹಿಂದಿರುಗಿ ಕರೆದುಕೊಂಡು ಬಂದರು.

ಅವರಿಗೆ ಈಗ ಮಗನ ಮೇಲಿನ ಪ್ರೀತಿ, ಅಭಿಮಾನ ಭಂಗದಿಂದ ದ್ವೇಷಕ್ಕೆ ತಿರುಗಿತ್ತು. ಲಕ್ಷ್ಮೀನಾರಣಪ್ಪ ಅವರಂದುಕೊಂಡಂತೆ ಮಾನ ನಷ್ಟ ಮೊಕದ್ದಮೆ ಮಾಡದಿದ್ದರೂ ಅವರ ಕೋಪವನ್ನು ನೂರುಮಡಿ

ಯಾಗಿ ಹೆಚ್ಚಿಸಿದರು. ಜೊತೆಗೆ ಅವರ ದರ್ಪಕ್ಕೆ ಎತ್ತಿ ಹೊಡೆದಂತಾಗಿತ್ತು ಮಗ ಮನೆ ಬಿಟ್ಟು ಹೋದುದು. ಸದಾ ವ್ಯರ್ಥ ಕೋಪದಿಂದ ಕುದಿದು ಹೋಗುತ್ತಿದ್ದರು. ನಾಲ್ಕೈದು ದಿನಗಳಲ್ಲಿ ಬೆಂಗಳೂರೇ ಅವರಿಗೆ ದುಸ್ಸಹವಾಯಿತು.

"ಬೊಂಬಾಯಿಗೆ ಹೋಗಿಬಿಡುವುದೇ ಸರಿ. ಯಶೋದ, ನನಗೆ ಇನ್ನು ಒಂದು ವರ್ಷದಲ್ಲಿಯೇ ಹೇಗೂ ನಿವೃತ್ತಿಯಾಗುತ್ತೆಯಾದ್ದರಿಂದ ಕೇಳಿಕೊಂಡರೆ ರಜಾ ಸಿಗುತ್ತದೆ. ಅಲ್ಲಿ ನನ್ನ ತಮ್ಮನ ಅಂಗಡಿಯಲ್ಲಿ ವ್ಯಾಪಾರ ಮಾಡಬಹುದು. ಈ ಊರಿನಲ್ಲಿ ಇಷ್ಟು ಅಪಹಾಸ್ಯಾಸ್ಪದವಾಗಿ ಇರುವುದಕ್ಕಿಂತ ಅದು ಮೇಲು'' ಎಂದು ಒಂದು ದಿನ ಯಶೋದಮ್ಮನವರಿಗೆ ಹೇಳಿದರು.

ಯಶೋದಮ್ಮನವರಿಗೆ ತಂದೆ ಮಗ ಇಬ್ಬರ ಮನಸ್ಸನ್ನೂ ಕರಗಿಸಲು ಯತ್ನ ಮಾಡಿ ಸಾಕಾಗಿತ್ತು. ನಾರಾಯಣನಂತೂ ತಾಯಿ ಕಳಿಸಿದ್ದ ರಂಗನಿಗೆ ಒಂದು ಸಲ ಕಪಾಳಕ್ಕೆ ಕೊಟ್ಟು ಕಳುಹಿಸಿಬಿಟ್ಟಿದ್ದ ಸಹ. ಅವರಿಗೆ ಈ ಕೋಟಲೆಯಿಂದ ದೂರವಾದರೆ ಸಾಕು ಎನ್ನಿಸಿತ್ತು. ಅದಕ್ಕೇ,

"ಆಗಲಿ, ಹೋಗೋಣ. ಹೇಗೂ ಲಲಿತೆಯ ಓದೂ ಮುಗಿಯಿತು, ಇನ್ನು ಯಾವ ಊರಾದರೇನು ನಮಗೆ?" ಎಂದರು.

ಲಲಿತೆ ಮತ್ತು ಯಶೋದಮ್ಮನವರನ್ನು ಗೋವಿಂದಪ್ಪನವರು ಮುಂಚೆ ತಮ್ಮನ ಮನೆಗೆ ಕಳುಹಿಸಿದರು. ಅವರು ಹೋಗುವುದು ಸ್ವಲ್ಪ ತಡವಾಯಿತು, ರಜಾ ಮಂಜೂರಾಗಿ ಬಂದು, ತಮ್ಮ ಕೆಲಸವನ್ನು ಹೊಸಬರಿಗೆ ವಹಿಸಿಕೊಟ್ಟು ನಿಧಾನವಾಗಿ ಅವರು ಹತ್ತು ಹದಿನೈದು ದಿನಗಳ ನಂತರ ಬೊಂಬಾಯಿಗೆ ಹೊರಟರು.

ನಾರಾಯಣ ತಂದೆಯ ಮನೆಯ ಕಡೆಗೇ ಸುಳಿಯುವುದನ್ನು ಬಿಟ್ಟುಬಿಟ್ಟಿದ್ದ. ಅದರಿಂದಲೇ ಅವರು ಬೊಂಬಾಯಿಗೆ ಹೊರಟು ಹೋದಮೇಲೆ ಅವನಿಗೆ ಆ ಸಮಾಚಾರ ತಿಳಿಯಿತು, ಅದೂ ಅಕಸ್ಮಾತ್ತಾಗಿ,

"ಏತಕ್ಕೆ ಹೋದರೋ?" ಎಂದುಕೊಂಡು ಸುಮ್ಮನಾಗಿಬಿಟ್ಟ ಅವನು.

ತಂದೆಯ ಮನೆಯಿಂದ ಹೊರಟುಹೋಗಿ ಇಪ್ಪತ್ತು ದಿನಗಳಾದ ಮೇಲೆ ನಾರಾಯಣನಿಗೆ ಒಂದು ಕೆಲಸ ಸಿಕ್ಕಿತು, ಬೆಂಗಳೂರಿನ್ಲೇ. ಪಿ. ಡಬ್ಲ್ಯು. ಡಿ.ಯಲ್ಲಿ.

"ಇದೇ ಊರಲ್ಲೇ ಸಿಕ್ಕಿದೆ, ಒಳ್ಳೆಯದಾಯ್ತು, ನಮ್ಮ ಮನೆಯಲ್ಲೇ ಇರು ಇನ್ನೂ ಸ್ವಲ್ಪ ದಿನ" ಎಂದ ಅನಂತ.

"ಸದ್ಯದಲ್ಲಿ, ಇನ್ನೆಲ್ಲೂ ನನಗೆ ಜಾಗವಿಲ್ಲ" ಎಂದು ನಕ್ಕ ನಾರಾಯಣ.

ವನಜಮ್ಮ—ಮಾಲತಿ ಇಬ್ಬರಿಗೂ ಗೋವಿಂದಪ್ಪನವರ ಮನೆಯವರು ಬೊಂಬಾಯಿಗೆ ಹೋಗಿದ್ದು ಬೇಗಲೇ ತಿಳಿಯಿತು,

"ಇವರಿಗೆ ಹೆದರಿ ನಾನು ಆ ಹುಡುಗನನ್ನು ನಿಷ್ಠುರವಾಗಿ ಅಂದೆ" ಎಂದು ವನಜಮ್ಮ ವ್ಯಥೆಪಟ್ಟರು.

ಮಾಲತಿಯಂತೂ ನಾರಾಯಣನ ನೆನಪು, ಲಲಿತೆಯ ನೆನಪು ಬಂದಾಗಲೆಲ್ಲ ಸಹಾನುಭೂತಿಯಿಂದ ತಪಿಸಿಹೋಗುತ್ತಿದ್ದಳು.

ಆದರೆ ನಿಜವಾಗಿ ಹೇಳಬೇಕೆಂದರೆ ಅನಂತನಿಗಾಗಲೀ, ನಾರಾಯಣನಿಗಾಗಲೀ ವನಜಮ್ಮ ನಿಷ್ಠುರವಾಗಿ ಅಥವಾ ಕಠಿಣವಾಗಿ ಮಾತನಾಡಿದರೆಂದು ಅನ್ನಿಸಿರಲಿಲ್ಲ.

"ಪಾಪ! ಆಕೇನ ನಿಮ್ಮಪ್ಪ ಚೆನ್ನಾಗಿ ಹೆದರಿಸಿಟ್ಟುಬಿಟ್ಟಿದ್ದಾರೆ. ಮೊದಲೇ ಒಂಟಿ ಹೆಂಗಸು. ಗಾಬರಿ ಬಿದ್ದುಬಿಟ್ಟಿದ್ದಾರೆ" ಎಂದಿದ್ದ ಅವತ್ತು ಅನಂತ.

ನಾರಾಯಣ ಅದಕ್ಕೆ ಹೇಳಿದ್ದ.

"ನಿಜ. ಅಲ್ಲದೆ ನಾನು ಮಾಲತಿಯನ್ನು ನೋಡಿ ಮಾತನಾಡುವವರೆಗೂ ಏನೂ ಹೇಳಲಾರೆ. ಅದಕ್ಕೆ ನನಗೆ ಕೆಲಸ ಸಿಕ್ಕಿ ನನ್ನ ಕಾಲಿನ ಮೇಲೆ ನಾನು ನಿಲ್ಲುವಂತಾಗಬೇಕು."

ಅವನು ಮಾಲತಿಯನ್ನು ನೋಡಬೇಕೆಂದು ಕೆಲಸ ಸಿಕ್ಕದಿನ ದಿಂದ ಅಂದುಕೊಂಡಿದ್ದ, ಆದರೆ ಅದು ಹೇಗೋ ಇನ್ನೂ ಕಾರ್ಯರೂಪಕ್ಕೆ ಬಂದಿರಲಿಲ್ಲ.

ಒಂದು ದಿನ ಬೆಳಿಗ್ಗೆ ಅವನು ಕೆಲಸಕ್ಕೆ ಹೋಗುವಾಗ ದಾರಿಯಲ್ಲಿ ಹುಡುಗರು ಗುಂಪುಗುಂಪಾಗಿ ಹೋಗುತ್ತಿದ್ದರು.

"ಏನಿವತ್ತು ಇಷ್ಟು ಉತ್ಸಾಹ?'' ಎಂದು ಅವನಿಗೆ ಗೊತ್ತಿದ್ದ ಒಂದಿಬ್ಬರನ್ನು ವಿಚಾರಿಸಿದ.

ಅವರೆಂದರು, "ಇವತ್ತು ವಿಶ್ವವಿದ್ಯಾನಿಲಯದ ಪರೀಕ್ಷೆಗಳ ಫಲಿತಾಂಶ ಬಂದಿದೆ."

"ಫಲಿತಾಂಶ! ಮಾಲತಿ — ಲಲಿತೆಯರಿಗೇನಾಗಿರಬಹುದು ?" ನಾರಾಯಣ ವೇಗವಾಗಿ ಸೈಕಲ್ ಹಾಕಿಕೊಂಡು ಹೋದ ಫಲಿತಾಂಶ ಹಾಕುವಲ್ಲಿಗೆ. ಬೇಗ ಗುಂಪಿನಲ್ಲಿ ತಳ್ಳಿಕೊಂಡು ಮುಂದೆ ಹೋಗಿ ನೋಡಿದ.

ಮಾಲತಿ ಮೊದಲನೆ ತರಗತಿಯಲ್ಲಿ ತೇರ್ಗಡೆಯಾಗಿದ್ದಳು. ಲಲಿತೆ ಎರಡನೆಯ ತರಗತಿಯಲ್ಲಿ. ಸಂತೋಷದಿಂದ ಗುಂಪನ್ನು ತಳ್ಳಿಕೊಂಡು ಈಚೆಗೆ ಬಂದ ಅವನು, "ಈಗೇಕೆ ಮಾಲತಿಯ ಮನೆಗೆ ಹೋಗಿ ಸುದ್ದಿಯನ್ನು ತಲುಪಿಸಬಾರದು?" ಎಂದುಕೊಂಡ.

ಆದರೆ ಅದಕ್ಕೆ ಅಗತ್ಯವಿರಲಿಲ್ಲ. ಅವನು ಸೈಕಲನ್ನು ಹತ್ತಲು ಹೋಗುತ್ತಿರುವಾಗ ಮಾಲತಿಯೇ ಅವನ ಕಣ್ಣಿಗೆ ಬಿದ್ದಳು.

ಅವಳು ಯಾವುದೋ ಒಂದು ಹುಡುಗಿಯೊಡನೆ ಬಂದಿದ್ದಳು. ಇಬ್ಬರಿಗೂ ಆ ಗುಂಪಿನಲ್ಲಿ ನುಗ್ಗಿ ಹೋಗಲು ಇಷ್ಟವಿಲ್ಲ, ಯಾರನ್ನಾದರೂ ಕೇಳಲು ಸಂಕೋಚ, ಫಲಿತಾಂಶವನ್ನು ತಿಳಿಯಲು ಆತುರ ಬೇರೆ ಜೊತೆಗೆ. ಹೆಜ್ಜೆಮೇಲೆ ಹೆಜ್ಜೆಯಿಡುತ್ತಾ ನಿಧಾನವಾಗಿ ಬರುತ್ತಿದ್ದರು.

ಮಾಲತಿಯನ್ನು ನೋಡಿದ ತಕ್ಷಣ ನಾರಾಯಣ ಕೂಗಿಯೇ ಬಿಟ್ಟ,

**"ಮಾಲತೀ...."**

ಮಾಲತಿ ತಿರುಗಿ ನೋಡಿದಳು, ಅವಳಿಗೆ ಏನು ಮಾಡಬೇಕೆಂದು ಹೊಳೆಯಲಿಲ್ಲವೇನೋ. ಹಾಗೆಯೇ ಅಲ್ಲೇ ನಿಂತಳು. ನಾರಾಯಣ ಸೈಕಲ್ಲನ್ನು ತಳ್ಳಿಕೊಂಡು ಬಂದ.

"ನಿಮಗೆ ಮೊದಲನೆ ತರಗತಿಯಲ್ಲಿ ತೇರ್ಗಡೆಯಾಗಿದೆ"

"ಓ! ತುಂಬು ವಂದನೆಗಳು ನಿಮಗೆ" ಮಾಲತಿ ಎಂದಳು.

"ಪರವಾ ಇಲ್ಲ, ನಿನ್ನ ಫಲಿತಾಂಶ ಗೊತ್ತಾಯಿತು. ನನ್ನದೂ ಹೀಗೇ ಯಾರಾದರೂ ನೋಡಿಕೊಂಡು ಬರಬಾರದೆ?" ಎಂದಳು ಅವಳ ಗೆಳತಿ.

ನಾರಾಯಣ ನಸುನಕ್ಕು, "ನಿಮ್ಮ ನಂಬರೆಷ್ಟು?"

ಅವಳೂ ನಗುತ್ತ ಹೇಳಿದಳು, "ಮುನ್ನೂರು ಆರು"

"ಸರಿ, ಈಗ ಬಂದೆ" ಎಂದು ಸೈಕಲನ್ನು ಅಲ್ಲೇ ಇಟ್ಟು ನಾರಾಯಣ ಮತ್ತೆ ಗುಂಪಿನೊಳಕ್ಕೆ ತೂರಿಕೊಂಡು ಹೋದ.

ಎರಡು ನಿಮಿಷದಲ್ಲಿ ಈಚೆಗೆ ನಗುತ್ತ ಬಂದ.

"ಎರಡನೆಯ ತರಗತಿಯಲ್ಲಿ ಆಗಿದೆ"

"ಶತ ನಮಸ್ಕಾರಗಳು ನಿಮಗೆ" ಎಂದಳು ಅವಳು.

ನಾರಾಯಣನಿಗೆ ಹೊತ್ತಾಗುತ್ತಿತ್ತು. ಸೈಕಲ್ ಹತ್ತುತ್ತ ಕೇಳಿದ, "ಮಾಲತಿ ಸುಮ್ಮನಿದ್ದೀರಲ್ಲ, ಮನೆಗೆ ತಿಂಡಿಗೆ ಕರೆಯುವುದಿಲ್ಲವೆ?"

ಮಾಲತಿ ಪೆಚ್ಚುಪೆಚ್ಚಾಗಿ ಹೇಳಿದಳು "ಆಗಲಿ, ಬನ್ನಿ"

"ಬರಿಯ ತಿಂಡಿಯಾಸೆಗೆ?"

ಮಾಲತಿ ಸುಮ್ಮನಿದ್ದಳು. ನಾರಾಯಣ ಹೇಳಿದ,

"ಹಿಂದೆ ಬಂದಿದ್ದಾಗ ನಿಮ್ಮ ತಾಯಿಯನ್ನು ಏನೋ ಕೇಳಿದ್ದೆ. ಅದನ್ನು ಕೊಡುವುದಾದರೆ ಬರುತ್ತೇನೆ"

ಮಾಲತಿ ಗಂಭೀರಳಾಗಿ ನುಡಿದಳು,

"ಬನ್ನಿ, ಕೊಡಿಸುತ್ತೇನೆ"

ನಾರಾಯಣ ಗಂಭೀರವಾಗಿ ಅವಳ ಕಡೆಗೊಮ್ಮೆ ನೋಡಿದ, ಹೊರಡುವ ಮೊದಲು,

"ಆಗಲಿ, ಬರುತ್ತೇನೆ"

ಮಾಲತಿ ಈ ಸಂವಾದವನ್ನು ತಾಯಿಯ ಕಿವಿಗೆ ಹಾಕಲಿಲ್ಲ. ನಾರಾಯಣನೂ ಅನಂತನಿಗೆ ಎಲ್ಲವನ್ನೂ ಸಂಪೂರ್ಣವಾಗಿ ಹೇಳಲಿಲ್ಲ.

"ಲೋ ಅನಂತ, ಮಾಲತಿಗೆ ಮೊದಲನೆ ತರಗತಿಯಲ್ಲಿ ತೇರ್ಗಡೆಯಾಗಿದೆ. ತಿಂಡಿ ಕೊಡಿಸುತ್ತಾಳೆಯಂತೆ, ಮನೆಗೆ ಕರೆದಿದ್ದಾಳೆ. ಬಾ ಹೋಗೋಣ ಅವರ ಮನೆಗೆ" ಎಂದು ಕರೆದ.

"ನಿನ್ನ ತಂಗಿಗೆ?" ಎಂದು ಕೇಳಿದ ಅವನು.

"ಎರಡನೆಯ ತರಗತಿಯಲ್ಲಿ ಆಗಿದೆ"

"ಹಾಗಾದರೆ ಮೊದಲು ನೀನು ತಿಂಡಿ ಕೊಡಿಸು. ಬಳಿಕ ಅವರ ಮನೆಗೆ ಹೋಗೋಣ"

ಹೋಟಲಿಗೆ ಹೋಗಿ ಸುತ್ತಾಡಿಕೊಂಡು ಮಾಲತಿಯ ಮನೆಗೆ ಇವರು ಹೋದಾಗ ದೀಪ ಹಚ್ಚುವ ಹೊತ್ತಾಗಿದ್ದಿತು.

ಮಾಲತಿಯೇ ಅವರನ್ನು ಒಳಕ್ಕೆ ಕರೆದಳು, .

"ಬನ್ನಿ ಒಳಕ್ಕೆ"

ವನಜಮ್ಮನವರಿಗೆ ಅವರನ್ನು ನೋಡಿ ಆಶ್ಚರ್ಯವಾಯಿತು,

"ಕುಳಿತುಕೊಳ್ಳೀಪ್ಪ" ಎಂದರು, ಕುತೂಹಲ ತುಂಬಿದ ಧ್ವನಿಯಲ್ಲಿ.

"ನಿಮ್ಮ ಮಗಳಿಗೆ ತೇರ್ಗಡೆಯಾದುದಕ್ಕೆ ತಿಂಡಿಕೇಳಲು ಬಂದೆವು" ಎಂದ ಅನಂತ.

"ತಿಂಡೀ ಜೊತೆಗೆ ಹಳೆಯ ಪ್ರಶ್ನೆಯೊಂದು" ಎಂದ ನಾರಾಯಣ.

ಆಕೆ ನಕ್ಕರು. "ಏನು ಪ್ರಶ್ನೆಯಪ್ಪ ಅದು?"

"ನಿಮಗೇ ಗೊತ್ತಲ್ಲ? ಈಗ ನನಗೆ ಕೆಲಸ ಆಗಿದೆ. ಮಾಲತಿಯನ್ನು ಸಾಕಬಲ್ಲೆ"

ಅವರು ಸುಮ್ಮನೆ ತಲೆ ತಗ್ಗಿಸಿಕೊಂಡು ಸ್ವಲ್ಪ ಹೊತ್ತು ಕುಳಿತುಬಿಟ್ಟರು. ಒಳಗಿನಿಂದ ಮಾಲತಿ ಕೂಗಿದಳು, "ಅಮ್ಮಾ"

"ಬಂದೇ ಮಾಲಾ" ಎಂದು ಎದ್ದು ಅವರು ಒಳಕ್ಕೆ ಹೋಗಿ ತಿಂಡಿಯ ತಟ್ಟೆಗಳನ್ನು ತಂದು ಇಬ್ಬರ ಮುಂದೂ ಇಟ್ಟರು. ಮಾಲತಿ ಅವರ ಹಿಂದೆಯೇ ಬಂದು ಪಾನಕದ ಲೋಟಗಳನ್ನಿಟ್ಟು ಒಳಕ್ಕೆ ಹೋದಳು.

"ಮೊದಲು ಮಾತು, ಆಮೇಲೆ ತಿಂಡಿ" ಎಂದ ಅನಂತ.

ವನಜಮ್ಮ ಹೇಳಿದರು,

"ಮಾತೇನಪ್ಪ? ಮಾಡಿಕೊಳ್ಳುತ್ತೇನೆ ಅಂದರೆ ನನಗೆ ಸಾಧ್ಯವಿದ್ದಷ್ಟು ಚೆನ್ನಾಗಿ ಮದುವೆ ಮಾಡಿಕೊಡುತ್ತೇನೆ. ದೇವರು ಸುಖವಾಗಿಟ್ಟಿರಲಿ ಅವರಿಬ್ಬರನ್ನೂ ಅಂತ ಹಾರೈಸುತ್ತೇನೆ. ಅಷ್ಟೆ."

"ಹತ್ತಿರದಲ್ಲಿಯೇ ಒಳ್ಳೇ ಲಗ್ನ ನೋಡುತ್ತೇನೆ" ಅಂದ ಅನಂತ.

ಆಕೆಗೆ ನಗು ಬಂದಿತು,

"ಅಷ್ಟು ಹುಡುಗಾಟ ಬೇಡ. ಹಳ್ಳಿಯಲ್ಲಿ ನನ್ನ ಸೋದರ ಮಾವ ಇದ್ದಾರೆ. ಅವರನ್ನು ಕರೆಸುತ್ತೇವೆ. ಅವರಿಗೆ ಲೌಕಿಕ ಅಷ್ಟು ತಿಳಿಯದೆ ಇದ್ದರೂ ಇವನ್ನೆಲ್ಲಾ ನೋಡಿಕೊಳ್ಳುತ್ತಾರೆ," ಎಂದು ಅವರು ನಾರಾಯಣನನ್ನು ಕೇಳಿದರು, "ನಿಮ್ಮ ಮನೆಯವರು?"

"ನನ್ನ ಗೆಳೆಯರು, ಉಪಾಧ್ಯಾಯರುಗಳು ಎಲ್ಲರಿಗೂ ಬರೆಯುತ್ತೇನೆ. ಯಾರ್‍ಯಾರು ಬರುತ್ತಾರೋ ಅವರೇ ನನ್ನ ಕಡೆಯವರು."

ನಾರಾಯಣ ಮಾಲತಿ ಈಚೆಗೆ ಬರಬಹುದು ಎಂದಿದ್ದ. ಅವಳು ಬರಲಿಲ್ಲ. ಇವರು ಸ್ವಲ್ಪ ಮಾತನಾಡಿಕೊಂಡು ಎದ್ದರು.

"ಬರುತ್ತೇವೆ ಇನ್ನು"

"ಆಗಬಹುದು"

ಅನಂತನ ತಂದೆಗೆ ಈ ಸಮಾಚಾರವೆಲ್ಲ ಸ್ವಲ್ಪಸ್ವಲ್ಪವಾಗಿ ತಿಳಿಯಿತು. ಅವರು—"ಏಕೆ ನಾರಾಯಣ, ನಾವಿಬ್ಬರೂ ಹಸೆಮಣೆಯ ಮೇಲೆ ನಿಂತು ಹುಡುಗಿಯನ್ನು ಧಾರೆ ಎರೆಸಿಕೊಳ್ಳುತ್ತೇವೆ. ನೀನು ಎಷ್ಟಾದರೂ ನನ್ನ ಸ್ನೇಹಿತನ ಮಗ. ಗೋವಿಂದನಿಗೆ ಇವತ್ತು ನಿನ್ನ ಮೇಲೆ ಸಿಟ್ಟಿದ್ದರೂ ಇನ್ನು ಹತ್ತು ವರ್ಷದ ಮೇಲೆ ಇರುತ್ತದೆಯೇ?

ಆಗ ಅವನಿಗೆ ನನ್ನ ವಿಷಯದಲ್ಲಿ 'ಕೊಂಚ ಕೃತಜ್ಞತೆ ಬರುವಂತೆ ಮಾಡುತ್ತೇನೆ" ಎಂದರು.

ಇಪ್ಪತ್ತು ದಿನಗಳ ನಂತರ ವಿಜೃಂಭಣೆ ಇಲ್ಲದಿದ್ದರೂ ವಿತರಣೆಯಿಂದ ಮಾಲತಿ ನಾರಾಯಣರ ವಿವಾಹವಾಯಿತು.

"ನೀವೂ ಇಲ್ಲೇ ಇದ್ದುಬಿಡಿ. ಇನ್ನು ಬೇರೆ ಮನೆ ಏಕೆ?" ಎಂದರು ವನಜಮ್ಮ ಮದುವೆಯಾದ ಮೇಲೆ.

ಅದು ಸ್ವಸ್ತವಾಗಿ ತೋರಲಿಲ್ಲ ನಾರಾಯಣನಿಗೆ. ಆದರೆ ಅವರ ಮನಸ್ಸನ್ನು ನೋಯಿಸಲೂ ಇಷ್ಟವಿಲ್ಲದೆ ಎಡವಟ್ಟಾಗಿ ಮಾತನಾಡಿದ,

"ಹಾಗಿದ್ದರೆ ನೀವು ಕೆಲಸ ಬಿಡಬೇಕು"

ಅದಕ್ಕೆ ಆಕೆ ಒಪ್ಪಲಿಲ್ಲ.

ನಾರಾಯಣ ತನ್ನ ಕೆಲಸಕ್ಕೆ ಹತ್ತಿರವಾಗಿ ಒಂದು ಮನೆ ಮಾಡಿದ. ಅಚ್ಚುಕಟ್ಟಾಗಿ ಅವರ ಸಂಸಾರ ಪ್ರಾರಂಭವಾಯಿತು.

ಮಾಲತಿ–ನಾರಾಯಣ ಇವರ ಸಂಸಾರ ನಮ್ಮ ದೇಶದ ಇತರ ಸಹಸ್ರ ಸಾಮಾನ್ಯ ಚಿಕ್ಕ ಕುಟುಂಬಗಳಂತೆಯೇ ಇತ್ತು. ವನಜಮ್ಮ ಮಗಳಿಗೆ ಹೆಚ್ಚು ಏನೂ ಕೊಡಲಿಲ್ಲ. ಇತ್ತ ನಾರಾಯಣನೂ ಅನುಭವವಿಲ್ಲದ ಯುವಕ. ಜೊತೆಗೆ ಅವನು ವಿದ್ಯಾರ್ಥಿ ದಿನಗಳಲ್ಲಿ ತನಗೊಬ್ಬನ ಸಲುವಾಗಿ ನೂರಾರು ರೂಪಾಯಿಗಳನ್ನು ಖರ್ಚುಮಾಡುತ್ತಿದ್ದವನು ಈಗ ಬರುತ್ತಿದ್ದ ನೂರು ರೂಪಾಯಿಗಳಲ್ಲಿ ಸಂಸಾರವನ್ನು ತೂಗಿಸುವುದೆಂದರೆ ಅವನಿಗೇ ಆಶ್ಚರ್ಯವಾಗುತ್ತಿತ್ತು.

"ತಿಂಗಳ ಮೊದಲನೆ ತಾರೀಖು ಏನಾದರಾಗಲೀ ಅಡಿಗೆ ಪದಾರ್ಥಗಳು ತಿಂಗಳಿಗೆ ಬೇಕಾದಷ್ಟು ತಂದು ಹಾಕಿ ಆಮೇಲೆ ಉಳಿದ ಖರ್ಚುಗಳನ್ನು ಮಾಡುವುದು" ಎಂದು ಪ್ರತಿ ತಿಂಗಳ ಕೊನೆಯ ದಿನಗಳಲ್ಲಿ ಅವನ ನಿರ್ಧಾರ.

ಸಂಬಳ ಕೈಗೆ ಬಂದ ದಿನ ನಿರ್ಧಾರ ಗಾಳಿಯಲ್ಲಿ ತೂರಿಹೋಗುತ್ತಿತ್ತು. ಒಂದೇ ಸಿನೇಮಾ, ಒಂದೇ ಸೀರೆಯೆಂದು ಖರ್ಚುಮಾಡಿ

ಬಿಡುತ್ತಿದ್ದ. ಮಾಲತಿಗೆ ಏಕೋ ಅವನ ಉತ್ಸಾಹದ ಮೇಲೆ ತಣ್ಣೀರೆರೆ ಚುವುದೆಂದರೆ ಕಸಿವಿಸಿಯಾಗುತ್ತಿತ್ತು ಮನಸ್ಸಿಗೆ.

"ಆ ಸಿನೇಮಾ ಚೆನ್ನಾಗಿಲ್ಲವಂತೆ. ಅದರ ಬದಲು ಸುಮ್ಮನೆ ಸುತ್ತಾಡಿಕೊಂಡು ಬರೋಣ'' ಎಂದು ಅವಳು ಹೇಳಿದರೂ, ಅವನು ಅದನ್ನು ಒಪ್ಪುತ್ತಿರಲಿಲ್ಲ.

"ಯಾರು ಹೇಳಿದರು ಚೆನ್ನಾಗಿಲ್ಲ ಅಂತ? ನೋಡಿದ ಮೇಲೆ ನೀನೇ ನನ್ನನ್ನು ಹೊಗಳುತ್ತೀ" ಎಂದುಬಿಡುತ್ತಿದ್ದ.

ಅವನು ಸೀರೆ ಬಟ್ಟೆ ತರುವುದು ಅವಳಿಗ ಪತ್ತೆಯಾಗುತ್ತಲೇ ಇರಲಿಲ್ಲ. ಆದರೂ ಮೊದಲೇ,

"ಇನ್ನು ನನಗೆ ಸೀರೆ ತರಬೇಕಾದರೆ ನನಗೆ ಹೇಳಬೇಕು. ಸುಮ್ಮನೆ ಸಿಕ್ಕಿದಂತೆ ಏಕೆ ತರುತ್ತೀರಿ? ಈಗ ಇರುವುದೇ ಬೇಕಾದಷ್ಟಿವೆ" ಎಂದು ಹೇಳುತ್ತಿದ್ದಳು.

ಅವನು ಅದಕ್ಕೆ ನಗುತ್ತಿದ್ದ. "ನಿನಗೆ ಇದೇ ಗೊತ್ತಿರುವುದು. ಲಲಿತೆ ಎಷ್ಟು ಸೀರೆಗಳನ್ನು ಇಟ್ಟುಕೊಂಡಿದ್ದಳು ಗೊತ್ತೆ?''

ಬಳಿಕ ಇದ್ದಕ್ಕಿದ್ದಂತೆ ಒಂದು ದಿನ ಮನೆಗೆ ಬಂದು, "ಮಾಲಾ ಬಾ ಇಲ್ಲಿ. ಇದು ಚೆನ್ನಾಗಿದೆಯೋ ಇಲ್ಲವೋ? ಅಂಗಡಿಯಲ್ಲಿ ಈಚೆಗೆ ಹಾಕಿದ್ದರು, ನೋಡಿದೆ. ಬಿಡಲು ಮನಸ್ಸೇ ಬರಲಿಲ್ಲ. ಹೇಗಿದೆ ನನ್ನ ಅಭಿರುಚಿ!'' ಎಂದು ಉತ್ಸಾಹದಿಂದ ಸೀರೆಯನ್ನೋ ಬಟ್ಟೆಯನ್ನೋ ತೋರಿಸುತ್ತಿದ್ದ.

ಒಂದೊಂದು ಸಲ ಮಾಲತಿ ಹೇಳಲಾರದೆ ಹೇಳುತ್ತಿದ್ದಳು,

''ಈಗ ಹೀಗೆ ಮಾಡಿದರೆ, ಮುಂದೆ ಬೇಕಾದಾಗ ಕೈ ಖಾಲಿ ಇರುತ್ತೆ''

''ಇರಲಿ ಬಿಡು, ಹುಳುಗಳಂತೆ ಬದುಕಿ ದುಡ್ಡು ಶೇಖರಿಸುವುದರಲ್ಲಿ ಏನು ಸಾರ್ಥಕ!'' ಎಂದುಬಿಡುತ್ತಿದ್ದ ಅವನು.

ಇದರಿಂದ ಎಷ್ಟೋ ಸಲ ತಿಂಗಳ ಕೊನೆಯ ದಿನಗಳಲ್ಲಿ ಪಜೀತಿ ಯಾಗುತ್ತಿತ್ತು. ಅದಕ್ಕೂ ಅವನು ಲಕ್ಷಿಸುತ್ತಿರಲಿಲ್ಲ.

"ಅಕ್ಕಿ ಬೇಳೆ ಮುಗಿದು ಹೋಗುತ್ತಿವೆಯೇ? ಏನು ಮಾಡೋದು ಮಾಲಾ? ನನ್ನ ಹತ್ತಿರ ದುಡ್ಡಿಲ್ಲ. ಹೋಗಲಿ ಬಿಡು. ಇನ್ನು ನಾಲ್ಕೈದು ದಿನಗಳು ತಾನೇ? ಒಂದೇ ಹೊತ್ತು ಊಟಮಾಡಿ ತಿಂಗಳನ್ನು ದೂಡಿ ಬಿಡೋಣ" ಎಂದು ಅವಳನ್ನು ಸಮಾಧಾನ ಮಾಡುತ್ತಿದ್ದ.

ಮಾಲತಿಗೆ ನಾರಾಯಣ ಬೇಸರಪಡದಿದ್ದರಾಯಿತು ಅಷ್ಟೆ. ಆದಷ್ಟು ಮಟ್ಟಿಗೆ ಹೇಗೋ ಮಾಡಿ ದಿನಗಳೆಸುತ್ತಿದ್ದಳು ಅಭಾವ ತೋರದಂತೆ. ಇಷ್ಟರ ಮೇಲೆ ಅದೂ ಸಾಧ್ಯವಾಗದಿದ್ದರೆ ಅವನು ಹೇಳಿದಂತೆ ಒಂದು ಹೊತ್ತು ಊಟ ಮಾಡುವುದೂ ಅವಳಿಗೆ ಕಷ್ಟವೆಂದು ತೋರುತ್ತಿರಲಿಲ್ಲ. ಇನ್ನೂ ಅಂಥಾ ದಿನಗಳಲ್ಲಿ ಅವಳು ಎಂದಿಗಿಂತ ಹೆಚ್ಚು ಉಲ್ಲಾಸದಿಂದ ಅವನೊಡನೆ ಚೆನ್ನಾಗಿ ಅಲಂಕಾರ ಮಾಡಿಕೊಂಡು ಸುತ್ತಲು ಹೋಗುತ್ತಿದ್ದಳು. ಅವಳ ಸಂತೋಷವನ್ನು ನೋಡಿ ನಾರಾಯಣ ವಿಸ್ಮಿತನಾಗುತ್ತಿದ್ದ.

"ಸ್ವಪ್ನ ಜೀವಿ ನೀನು ಮಾಲಾ. ವಾಸ್ತವ ಸುಖ ದುಃಖ ನಿನಗೆ ತಟ್ಟುವುದಿಲ್ಲ. ಬಹುಶಃ ನಾನು ಕಟ್ಟಿಗೆ ಕಡಿಯುವವನಾಗಿದ್ದು ನಿನಗೆ ಅಂಬಲಿಯೊಂದು ಹೊರತು ಬೇರೇನೂ ದೇಹಧಾರಣೆ ಇಲ್ಲದಿದ್ದರೂ ನೀನು ಇಷ್ಟೇ ಆನಂದಯುಕ್ತಳಾಗಿರುತ್ತಿದ್ದೆಯೋ ಏನೋ?"

ಮಾಲತಿ ಅವನ ಮಾತಿಗೆ ನಗುತ್ತಿದ್ದಳು.

ನಾರಾಯಣನ ತಂದೆ ಮಾತ್ರ ಅವನನ್ನು ಕ್ಷಮಿಸಲಿಲ್ಲ. ದಿನದ ಮೇಲೆ ದಿನ ಕಳೆದರೂ ಅವರಿಂದ ಒಂದು ಪತ್ರ ಸಹ ಬರಲಿಲ್ಲ. ಒಂದೊಂದು ಬಾರಿ ನಾರಾಯಣ ಉದ್ವೇಗದಿಂದ ನುಡಿಯುತ್ತಿದ್ದ,

"ಅಪ್ಪನೇನೋ ಹಠದಿಂದ ದೂರ ಇದ್ದಾರೆ. ಆದರೆ ಲಲಿತ, ಅಮ್ಮ ಏಕೆ ಇಷ್ಟು ಕಠಿಣರಾದರು ಮಾಲಾ?"

ಮಾಲತಿ ಅನ್ನುತ್ತಿದ್ದಳು,

"ಅವರು ಕಠಿಣರಾಗಲಾರರು. ಎಂದಾದರೊಂದು ದಿನ ಇದ್ದಕ್ಕಿದ್ದಂತೆ ಬರುತ್ತಾರೆ ನೋಡುತ್ತಿರಿ"

ಇದೊಂದು ವಿಷಯವನ್ನು ಬಿಟ್ಟರೆ ಅವರ ಸುಖಕ್ಕೆ ಮಿತಿ ಯಿರಲಿಲ್ಲ.

ಅವರ ನೆಂಟರೆಂದರೆ ನಾರಾಯಣನ ಗೆಳೆಯರು, ವನಜಮ್ಮ. ಅನಂತನಂತೂ ಮನೆಯವನಂತೆಯೇ ಆಗಿಬಿಟ್ಟಿದ್ದ. ಬಂದಾಗಲೆಲ್ಲ ನಾರಾಯಣನ ಮೇಲೆ ಮಾಲತಿಯ ಬಳಿ ಚಾಡಿ ಹೇಳದೆ ಇದ್ದರೆ ಅವನಿಗೆ ಆಗುತ್ತಲೇ ಇರಲಿಲ್ಲ,

"ನಂಬ ಬೇಡೀಮ್ಮಾ ಇವನ್ನ. ನಿಮ್ಮ ಜೊತೆಯಲ್ಲಿ ಬೆಕ್ಕಿನಂತೆ ಇರುತ್ತಾನೆ. ಹೊರಗಡೆ ಶುದ್ಧ........ಇವನ ಜೊತೆಯಲ್ಲಿ ಓಡಾಡೋದಕ್ಕೆ ನನಗೆ ನಾಚಿಕೆಯಾಗುತ್ತೆ" ಎಂದು ಮೊದಲು ಸಲ ಅವನು ಹೇಳಿದಾಗ ಮಾಲತಿ ಅಪ್ರತಿಭಳಾಗಿ,

"ಏಕೆ ಏನು ಮಾಡುತ್ತಾರೆ?" ಎಂದು ಕೇಳಿ, ನಾರಾಯಣ ಅವನನ್ನು ಮನೆಯೆಲ್ಲಾ ಅಟ್ಟಿಸಿಕೊಂಡು ಓಡಾಡಿದ್ದ....ಆದರೂ ಬಿಡದೆ ಅನಂತ ಹೇಳೇಬಿಟ್ಟಿದ್ದ.

"ಶುದ್ಧ ಗಂಡಸಿನಂತೆ ಓಡಾಡುತ್ತಾನೆ" ಅಂತ.

ಬಹುಶಃ ಅನಂತನ ಹಾಸ್ಯಗಳಿಗೆ ಮಾಲತಿಗೆ ನಗುಬರುವಂತಿರುತ್ತಿರಲಿಲ್ಲ. ಆದರೂ ಎಲ್ಲರ ಸಂತೋಷಕ್ಕಾಗಿ ನಗುತ್ತಿದ್ದಳು.

ಈ ಆನಂದದ ವಾತಾವರಣದಲ್ಲಿ ನಾರಾಯಣನ ಮೊದಲನೆಯ ಮಗ "ರಾಮಚಂದ್ರ" ಹುಟ್ಟಿದ.

ರಾಮಚಂದ್ರ ಹುಟ್ಟುವುದಕ್ಕೆ ಕೇವಲ ಹದಿನೈದು ದಿನಗಳ ಮುಂಚೆ ಮಾಲತಿ ತಾಯ ಮನೆಗೆ ಹೋದಳು. ನಾರಾಯಣನ ಬೇಸರಕ್ಕೆ ಕೊನೆ ಮೊದಲಿರಲಿಲ್ಲ. ದಿನಕ್ಕೆ ಎರಡು ಬಾರಿ ಹೋಗಿ ಬರುತ್ತಿದ್ದ ಅತ್ತೆಯ ಮನೆಗೆ. ಆದರೂ ರಾಮಚಂದ್ರನಿಗೆ ಎರಡು ತಿಂಗಳಾಗುವ ವೇಳೆಗೆ ಅವನ ಸಹನೆ ಎಲ್ಲೆ ಮೀರಿತು,

"ಇನ್ನು ಮನೆಗೆ ಬಂದುಬಿಡು ಮಾಲಾ" ಎಂದೇಬಿಟ್ಟ. ಒಂದು ದಿನ ವನಜಮ್ಮ ಹೇಳಿದರು,

"ಇನ್ನೆರಡು ತಿಂಗಳು ತಡೆಯಪ್ಪಾ. ಹಸಿ ಮೈಯಲ್ಲಿ ಕೆಲಸಕ್ಕೆ ಬಿದ್ದರೆ ಒಳ್ಳೆಯದಲ್ಲ" ಎಂದು. ಆದರೆ ಮಾಲತಿ ತಾಯನ್ನು ದಬಾಯಿಸಿ ಬಿಟ್ಟಳು,

"ಅಯ್ಯೋ ಹೋಗಮ್ಮ. ಅಲ್ಲಿ ಅವರು ಬೇಯಿಸಿಕೊಂಡು ಏನು ತಿಂದು ಕೆಲಸಕ್ಕೆ ಹೋಗುತ್ತಾರೋ? ನಿತ್ಯ ಇಲ್ಲಿಗೆ ಬರಬೇಕು ಬೇರೆ. ನಿನ್ನ ತತ್ವವೆಲ್ಲಾ ಥಳುಕಿನ ಹೆಂಗಸರಿಗೆ. ನಾನು ಗಟ್ಟಿಯಾಗಿದ್ದೀನಿ. ನಾನು ಇನ್ನು ಅಲ್ಲಿಗೆ ಹೊರಡೋದೇ ಸರಿ"

ವನಜಮ್ಮ ಮಗಳ ಮಾತಿಗೆ ಸೋತು ಅವಳನ್ನು ಅವಳ ಮನೆಗೆ ಕಳುಹಿಸಿಕೊಟ್ಟರು.

ಈ ಬಾರಿ ಮಾಲತಿ ಮನೆಗೆ ಬಂದರೂ ನಾರಾಯಣನಿಗೆ ತೃಪ್ತಿ ಯಾಗಲಿಲ್ಲ. ಮೊದಲಿನಂತೆ ಸಂಜೆ ಸುತ್ತಲು ಮಾಲತಿ ಬರುತ್ತಿರಲಿಲ್ಲ,

"ಥಂಡಿಯಾಗುತ್ತೆ ಮಗುವಿಗೆ. ನೀವು ಹೋಗಿಬನ್ನಿ ಅನಂತ ರವರ ಜೊತೆಯಲ್ಲಿ" ಎಂದುಬಿಡುತ್ತಿದ್ದಳು.

ಸಿನೇಮಾಕ್ಕೆ ಹೋಗಬೇಕಾದರಂತೂ ಅದಕ್ಕೆ ಒಂದು ದಿನ ಮುಂಚೆಯೇ ವನಜಮ್ಮನವರಿಗೆ ಹೇಳಿ, ಮಗುವನ್ನು ಕರೆದೊಯ್ದು ಅಲ್ಲಿ ಬಿಟ್ಟು ಬರಬೇಕು.

ಊಟ ತಿಂಡಿಯಲ್ಲಿಂತೂ ಮಾಲತಿ ಒಂದನ್ನು ತಿಂದರೆ ಒಂದನ್ನು ತಿನ್ನುತ್ತಿರಲಿಲ್ಲ. "ಇದನ್ನು ನಾನು ತಿಂದರೆ ಮಗುವಿಗೆ ಅಜೀರ್ಣ ಆಗು ತ್ತದೆ" ಎನ್ನುವಳು.

ನಾರಾಯಣನಿಗೆ ಒಂದೊಂದು ಸಲ ಬೇಜಾರಿಟ್ಟು ಹೋಗುತ್ತಿತ್ತು.

"ಥತ್ ಸದಾ ಮಗು, ಮಗು! ಅದರ ಯೋಚನೆಯೇ ಆಗಿ ಹೋಯ್ತಲ್ಲಾ ನಿನಗೆ? ನಾನು ಇದ್ದೇನೆ ಎಂಬುದು ಮರೆತೇಹೋಯಿ ತೇನೋ?" ಎಂದುಬಿಡುತ್ತಿದ್ದ.

ಮರುಕ್ಷಣ ಪಶ್ಚಾತ್ತಾಪದಿಂದ ಬೆಂದುಹೋಗಿ, "ಮಾಲಾ ಕ್ಷಮಿಸು. ನಾನು ಈ ಮಗು ಇಬ್ಬರೂ ನಿನ್ನನ್ನು ಗೋಳು ಹುಯ್ಕೊಳ್ಳುವವರೇ ಆಗಿಬಿಟ್ಟೆವು" ಎಂದು ಕ್ಷಮೆ ಕೇಳುತ್ತಿದ್ದ.

ಕೆಲವು ಬಾರಿ ಮಗುವಿನ ಆಟಪಾಟಗಳಲ್ಲಿ ಅವನಿಗೆ ಮೈಮರೆಯು ತ್ತಿತ್ತು.

"ಈಗಲೇ ನಾವು ನಿಜವಾದ ಸುಖವನ್ನು ಅನುಭವ ಮಾಡುತ್ತಿರುವುದು ಮಾಲಾ" ಎಂದು ಅವಳಿಗೆ ಮತ್ತೆ ಮತ್ತೆ ಹೇಳುತ್ತಿದ್ದ.

ಹಬ್ಬಹಬ್ಬಕ್ಕೆ ಮಗುವಿನ ಬಟ್ಟೆ ಹೊಲೆಯಿಸಬೇಕೆಂಬ ಆಶೆ ಅವನಿಗೆ. ಅದು ಯಾವಾಗಲೂ ಸಾಧ್ಯವೇ? ಆಗದೆ ಇದ್ದಾಗ ಮಾಲತಿಗಿಂತ ಅವನಿಗೇ ಹೀನಾಯ,

"ಛೇ, ಸರಿಯಾಗಿ ನೋಡಿದರೆ ಇಷ್ಟು ಹೊತ್ತಿಗೆ ಅದಕ್ಕೊಂದು ಗಾಡಿ ತೆಗೆದುಕೊಡಬೇಕಾಗಿತ್ತು. ಅದಿಲ್ಲ ಹೋಗಲಿ ನಾಲ್ಕು ಲಕ್ಷಣ ವಾದ ಬಟ್ಟೆ ಹೊಲೆಯಿಸೋಣ ಅಂದರೆ ಅದೂ ಸಾಧ್ಯವಿಲ್ಲ" ಎಂದು ಗೊಣಗುತ್ತಿದ್ದ.

ಹೀಗಾದಾಗಲೆಲ್ಲ ಕೊನೆಗೆ ಮಾಲತಿಯೇ ಶಿಕ್ಷಿಸಲ್ಪಡುತ್ತಿದ್ದಳು. ಎಲ್ಲದರ ಮೇಲೂ ಅವನಿಗೆ ಅಸಮಾಧಾನ ಹೆಚ್ಚಿ ಮಾಡಿದ ಅಡಿಗೆ ಕೂಡ ಹಾಗೇ ಉಳಿದು ಹೋಗುತ್ತಿತ್ತು. ಅವನು ಸರಿಯಾಗಿ ತಿನ್ನದೆ ಇದ್ದರೆ ಅವಳು ಹೇಗೆ ತಿಂದಾಳು?

ಒಂದು ದಿನ—ರಾಮುವಿಗೆ ವರ್ಷವಾಗಿತ್ತು—ಆಗ, ಮಧ್ಯಾಹ್ನ ಮನೆಗೆ ಬಂದ ನಾರಾಯಣ, ಮುಖದಮೇಲೆ ಎಂದಿಲ್ಲದಷ್ಟು ನಗು:

"ಏನು, ಇಷ್ಟು ಸಂತೋಷದಲ್ಲಿದ್ದೀರಿ?"

"ಏನು ಹೇಳು ನೋಡೋಣ?"

"ನೀವು ಮೊದಲು ಹೇಳಿದರೆ ನಾನೂ ಹಿಂದಿಲಿಂದ ಹೇಳುತ್ತೇನೆ" ಎಂದಳು ಮಾಲತಿ.

"ನಿನ್ನನ್ನು ಕೊಂಚ ಸುತ್ತಾಡಿಸಿಕೊಂಡು ಬರೋಣ ಅಂತ ಹದಿನೈದು ದಿನ ರಜಾ ತೆಗೆದುಕೊಂಡಿದ್ದೇನೆ"

ಮಾಲತಿಗೆ ಏನೋ ಯೋಚನೆಯೇ ಆಯಿತು. ಅವನ ಮುಖ ವನ್ನೇ ನೋಡುತ್ತ ನಿಂತಳು. ಅವನಿಗೆ ಇನ್ನೂ ನಗುಬಂದಿತು.

"ಏನು ಹಾಗೆ ನೋಡುತ್ತೀ? ನಾನು ಸರಿಯಾಗಿದ್ದೀನೆ ಮಾಲು. ನನಗೆ ಎತಕ್ಕೆಷ್ಟು ಆನಂದವಾಗಿದೆ ಎಂದರೆ," ಎಂದು ಹೇಳಿದ, "ನನಗೆ ಒಟ್ಟಿಗೆ ಇಪ್ಪತ್ತು ರೂಪಾಯಿ ಬಡ್ತಿ ಸಿಕ್ಕಿದೆ. ಇವತ್ತು ಹಳೆಯ ಬಾಬತ್ತು ಕೊಂಚ ದುಡ್ಡೂ ಬಂದಿತು"

"ಓ" ಎಂದಳು ಮಾಲತಿ.

"ಒಂದು ಹತ್ತು ಹನ್ನೆರಡು ದಿನ ನಿಮ್ಮ ತಾಯಿ ಮಗುವನ್ನು ನೋಡಿಕೊಳ್ಳುತ್ತಾರೆ. ನಾವು ಅಲ್ಲಿ ಇಲ್ಲಿ ಸುತ್ತಾಡಿಕೊಂಡು ಬರೋಣ."

"ಏಕೆ, ಅವನ್ನೂ ಕರೆದುಕೊಂಡು ಹೋಗೋಣ"

"ಬೇಡ ಮಾಲಾ. ನಾಲ್ಕು ದಿನಗಳು ನಾವು ನಾವೇ ಇರೋಣ."

ಮಾಲತಿಗೆ ಅವನ ಮನದೊಲವು ತಿಳಿಯಿತು. ಸುಮ್ಮನಾದಳು.

ರಾಮಚಂದ್ರ ಬಲು ಮುದ್ದು ಮಗು. ಅವನನ್ನು ಕಂಡರೆ ಅವನ ಅಜ್ಜಿಗಂತೂ ಪ್ರಾಣ. ನಾರಾಯಣ' ಮಗು ಅಲ್ಲಿ ಒಂದು ಹನ್ನೆರಡು ದಿನಗಳಿರಲಿ, ಎಂದು ಸೂಚಿಸಿದ ಕೂಡಲೇ ಆಕೆ ಆನಂದದಿಂದ ಒಪ್ಪಿಕೊಂಡರು.

"ಓಹೋ ಆಗಲಪ್ಪ. ಹದಿನೈದು ದಿನಗಳು ಚೆನ್ನಾಗಿ ಸುತ್ತಿಕೊಂಡು ಬನ್ನಿ"

ಮಾಲತಿಗೆ ಮಾತ್ರ ಅತೃಪ್ತಿ.

"ಮಗುವಿಗೆ ನೋಟ ಅಂದರೆ ಆಸೆ. ಅದನ್ನು ಬಿಟ್ಟು ನಾವು ಹೋಗುವುದೇನಮ್ಮ?"

ವನಜಮ್ಮ ಅವಳನ್ನು ಸಮಾಪೆ ಮಾಡಿಬಿಟ್ಟರು,

"ಸುಮ್ಮನಿರೇ ಸಾಕು, ಮನಸ್ಸಿನಲ್ಲಿ ಇಲ್ಲದ್ದನ್ನು ಬಾಯಿಯಲ್ಲಿ ಹೇಳಬೇಡ. ಇಷ್ಟಕ್ಕೂ ಮಗುವನ್ನು ಕರೆದುಕೊಂಡು ಹೋಗಿ ನಾಲ್ಕು ಊರಿನ ನೀರು ಕುಡಿಸಿದರೆ ಅದಕ್ಕಾದರೂ ಮೈಗೆ ತಡೆಯುತ್ತದೆಯೇ? ಇಲ್ಲಿ ಅದು ಹಾಯಾಗಿರಲಿ, ನೀವು ವಿನೋದವಾಗಿ ಹೋಗಿ ಬನ್ನಿ"

ಹೊರಡುವಾಗ ವನಜಮ್ಮ ಮಗಳಿಗೆ ಇನ್ನೊಂದು ಬಾರಿ ಹೇಳಿದರು,

"ಮಾಲಾ, ಇಲ್ಲದ್ದೆಲ್ಲಾ ಅಂದುಕೊಂಡು ಅಪರ ಸಂತೋಷವನ್ನೂ ಹಾಳುಮಾಡಿ, ಪೆಚ್ಚು ಮುಖದಿಂದ ಊರಿಗೆ ಬರಬೇಡ ತಿಳಿಯಿತೇ? ರಾಮೂನ ಯೋಚನೆ ನನಗೆ ಬಿಟ್ಟು, ನಗುನಗುತ್ತ ಇದ್ದು ಬಾ"

ಮಾಲತಿಗೆ ತಾಯ ಮಾತನ್ನು ಕೇಳಿ ನಗುಬಂದಿತು,

"ಆಗಲಮ್ಮಾ ಆಗಲಿ"

ಹದಿನೈದು ದಿನಗಳು ಅವರಿಬ್ಬರಿಗೂ ಹದಿನೈದು ನಿಮಿಷಗಳಂತೆ ಕಳೆದುಹೋದುವು. ಅವರ ಸಂತೋಷಕ್ಕೆ ಮಿತಿಯೇ ಇರಲಿಲ್ಲ. ನಾರಾಯಣನಂತೂ ಹೊಸ ಮನುಷ್ಯನೇ ಆಗಿಬಿಟ್ಟಿದ್ದ ಚನ್ನಪಟ್ಟಣ, ಮಳೂರು ನಾರಾಯಣ ಬಾಲ್ಯದಲ್ಲಿ ಓಡಾಡಿದ ಪ್ರದೇಶಗಳು. ಅಲ್ಲಿ ಪ್ರತಿಯೊಂದು ಸ್ಥಳವೂ ಅವನಿಗೆ ಒಂದೊಂದು ಸಮಾಚಾರವನ್ನು ನೆನಪಿಗೆ ತರುತ್ತಿತ್ತು. ಅವನ್ನೆಲ್ಲಾ ಮಾಲತಿಗೆ ಹೇಳಿ ಅವಳನ್ನು ನಗಿಸುತ್ತಿದ್ದ.

"ನೋಡು ಅಲ್ಲಿ ಕಾಣುತ್ತದೆಯಲ್ಲಾ ಅದು ಕೆಂಪು ಹುಣಿಸೆ ಹಣ್ಣಿನ ಮರ. ಆ ಮನೆ ಈ ಸ್ಟೇಷನ್ ಮಾಸ್ಟರದು. ನಿತ್ಯ ಮಧ್ಯಾಹ್ನ ನಾವು ಇಲ್ಲಿಗೆ ಆ ಹಣ್ಣುಗಳನ್ನು ಲೂಟಿ ಮಾಡಲು ಬರುತ್ತಿದ್ದೆವು. ಸುಮಾರು ಮೂವತ್ತು ಜನ ಹುಡುಗರು ಒಟ್ಟಿಗೆ ಬಂದು ಅಲ್ಲಿ ಹೊರಗಡೆ ಕುಳಿತುಕೊಳ್ಳುತ್ತಿದ್ದೆವು. ಒಬ್ಬ ಚುಲ್ಬಾರಿಯನ್ನು ಎತ್ತಿ ಒಳಕ್ಕೆ ಬಿಡುತ್ತಿದ್ದೆವು. ಅವನು ಜೇಬು ಭರ್ತಿಮಾಡಿಕೊಂಡು ಬಂದಿದ್ದೂ ಬಂದಿದ್ದೆ, ನಾವು ಅದನ್ನು ಖಾಲಿ ಮಾಡಿದ್ದೂ ಮಾಡಿದ್ದೆ."

"ಎಂದೂ ಬೆನ್ನು ಬಿಸಿಯಾಗಲಿಲ್ಲವೇ?" ಮಾಲತಿ ಕೇಳಿದಳು.

"ಓ ಅದೇನು ಹೇಳುತ್ತೀ? ಒಂದಿಪ್ಪತ್ತು ಸಲ ಅಟ್ಟಿಸಿಕೊಂಡು ಬಂದರು. ನಮಗೋ ಕಾಲು ಜೋರು. ಆ ಚುಲ್ಬಾರಿಯನ್ನು ಎತ್ತಿಕೊಂಡು ಓಡಿಬಿಡುತ್ತಿದ್ದೆವು. ಬಳಿಕ ಮತ್ತೆ ಬರುತ್ತಿದ್ದೆವು" ಅವತ್ತೇ ಅದೆಲ್ಲಾ ನಡೆಯಿತೇನೋ ಎಂಬಂತೆ ನಗುತ್ತಿದ್ದರು ಇಬ್ಬರೂ, ಎಂದೋ ನಡೆದ ವಿಷಯ ಮಾತನಾಡಿಕೊಂಡು.

"ಇದು ನಮ್ಮ ಮರಿಗಳ ಶಿಬಿರವಾಗಿತ್ತು ನಾವು ಎಷ್ಟು ಬಾರಿ ಇಲ್ಲಿಗೆ ಈರುಳ್ಳಿ ಆಲೂಗೆಡ್ಡೆಗಳನ್ನು ತಂದು ಸುಟ್ಟುಕೊಂಡು ತಿನ್ನುತ್ತಿ

ದ್ದೆವೋ! ಮೇಲೆ ಕೆಳಗೆ ಒಣಗಿದ ಹುಲ್ಲನ್ನು ಹಾಕಿ ಮಧ್ಯೆ ಇವನ್ನು ಹಾಕಿ ಬೆಂಕಿ ಹೊತ್ತಿಸುತ್ತಿದ್ದೆವು ಬೆಂಕಿ ಆರಿದ ಮೇಲೆ ಈರುಳ್ಳಿ ಆಲೂಗೆಡ್ಡೆಗಳನ್ನು ಈಚೆಗೆ ತೆಗೆದು "ಚೆಂದಿದೆ" ಎಂದು ಹೇಳಿಕೊಂಡು ತಿಂದುಬಿಡುತ್ತಿದ್ದೆವು. ಈಗಿನಂತೆ ಬಾಯಿರುಚಿ ಕೆಟ್ಟಿರಲಿಲ್ಲ ನಮಗೆ''

ಕನ್ನಂಬಾಡಿಯಲ್ಲಿ ಒಂದು ದಿನವನ್ನು ಕಳೆದರು. ಮಾಲತಿ ಅದೇ ಮೊದಲು ಬಾರಿ ಹೋಗಿದ್ದು. ಆದರೆ ನಾರಾಯಣ?

"ಕಾಲೇಜಿಗೆ ಸೇರಿದ ಮೊದಲು ಆಗಾಗ ಮೈಸೂರಿಗೆ ಬರುತ್ತಿದ್ದೆ. ಮೈಸೂರಿನಿಂದ ಗೆಳೆಯರೆಲ್ಲರೂ ಒಟ್ಟಿಗೆ ಸೈಕಲ್ ಮೇಲೆ ಇಲ್ಲಿಗೆ ಬರುತ್ತಿದ್ದೆವು. ರಾತ್ರಿ ಪೂರ್ತಿ ಇಲ್ಲೇ ಕಳೆದು ಬೆಳಗಿನ ಝಾವದಲ್ಲಿ ಹಿಂದಿರುಗುತ್ತಿದ್ದೆವು''

ಮೈಸೂರಿನ ಕುಕ್ಕರಹಳ್ಳಿಯ ಕೆರೆ ಕೂಡ ಮಾಲತಿಗೆ ಆಕರ್ಷಣೀಯವಾಗಿತ್ತು. "ನಾನಿಲ್ಲೇ ಈಜಲು ಕಲಿತಿದ್ದು. ನನಗೋ ಬೆಂಡನ್ನು ಕಟ್ಟಿಕೊಂಡಿದ್ದರೂ ಹೆದರಿಕೆ. ಈ ಅನಂತ ಇದ್ದಾನಲ್ಲ ಅವನು ಒಳ್ಳೇ ಕುಶಲಿಯಾದ ಈಜುಗಾರ. ಮೆಟ್ಟಲಿನ ಮೇಲಿಂದ ನನ್ನನ್ನು ನೀರಿನೊಳಕ್ಕೆ ತಳ್ಳಿ ತಾನೂ ಹಿಂದೆಯೇ ಹಾರಿ ಬರುತ್ತಿದ್ದ. ಅವನೇ ನನಗೆ ಈಜುವುದನ್ನು ಕಲಿಸಿದ್ದು''

ಹದಿನೈದು ದಿನಗಳ ಸುಖಾನುಭವ ನಾರಾಯಣನ ಮನಸ್ಸನ್ನು ಸಂತೃಪ್ತಗೊಳಿಸಿತು. ಮತ್ತೆ ಹಳೆಯ ಮನೆಯನ್ನು ಆದರದಿಂದ ಒಳಹೊಕ್ಕರು. ಊರಿಗೆ ಬಂದ ದಿನವೇ ಮಗುವನ್ನು ಕರೆತರಲು ಹೋದರು. ಮಾಲತಿ ತಾಯಿಯನ್ನು ವಿಚಾರಿಸಿದಳು,

"ನಿನಗೆ ಇವನಿಂದ ತುಂಬಾ ತೊಂದರೆಯಾಗಿರಬೇಕು ಅಲ್ಲವೇ ಅಮ್ಮ?"

ಆಕೆ 'ಇಲ್ಲ' ಎಂದರು. ಮಗುವೂ 'ಇಲ್ಲಾಮ್ಮಾ' ಎಂದಿತು ಮುದ್ದುಮುದ್ದಾಗಿ.

ನಾರಾಯಣ ಹೇಳಿದ,

"ಮಾಲಾ ಹುಷಾರು. ಮೇಸ್ತ್ರಿ ಮಾತು ಬರದೆಯೇ ಇಷ್ಟು ಅಧಿಕಾರ ಮಾಡುತ್ತಿದ್ದ. ಈಗ ಇವನ ನಾಲಿಗೆಯೂ ಚಲಿಸಲು ಶುರು ವಾಗಿದೆ. ಸಲಿಗೆ ಕೊಟ್ಟರೆ ಸುಲಿದುಬಿಡುತ್ತಾನೆ''

ಮಾಲತಿ ನಕ್ಕಳು.

ಅವರ ಸಂಸಾರ ಸಾಗಿತು.

ನಾರಾಯಣನ ಗಳಿಕೆ ಈಗ ಹೆಚ್ಚಾಗಿದ್ದರೂ ಖರ್ಚೂ ಹೆಚ್ಚಾಗು ತ್ತಿತ್ತು. ಯುದ್ಧ ನಿಂತಾಗಿನಿಂದ ದಿನೇ ದಿನೇ ಪದಾರ್ಥಗಳ ಬೆಲೆ ಏರು ತ್ತಿತ್ತು. ಜೊತೆಗೆ ಮಗುವಿನ ಖರ್ಚು ಎಷ್ಟು ಕಡಿಮೆ ಮಾಡಿದರೂ ಭಾರವೇ ಇತ್ತು.

ಇದರ ಮಧ್ಯೆ ಮಾಲತಿಗೆ ಅಲಸಿಕೆ ಪ್ರಾರಂಭವಾಯಿತು. ನಾರಾಯಣ ವೈದ್ಯರಿಗೆ ತೋರಿಸಿದ. ಅವರೆಂದರು,

"ರಕ್ತಸಾಲದು. ಟಾನಿಕ್ ಸೇವಿಸಬೇಕು. ಊಟದ ಜೊತೆಗೆ ಹಣ್ಣು ಹಾಲು ಹೆಚ್ಚುಮಾಡಬೇಕು"

ವೈದ್ಯರು ಹೇಳಿದಂತೆ ಉಪಚಾರ ನಡೆಯಿತು. ನಿಧಾನವಾಗಿ ಮಾಲತಿ ಚೇತರಿಸಿಕೊಂಡಳು. ಮೊದಲಿನಂತೆ ಕೆಲಸ ಮಾಡಲು ಪ್ರಾರಂಭ ಮಾಡಿದಳು.

ಈಗೀಗ ನಾರಾಯಣ ಮೊದಲಿನಂತೆ ಸಿನೇಮಾ ಹೋಟೆಲು ಎಲ್ಲಾ ಬಿಟ್ಟುಬಿಟ್ಟಿದ್ದ.

ಆದರೂ ಖರ್ಚಿಗೆ ಹಣ ಸಾಲದೆ ಇರುವುದು ಅವನಿಗೆ ಸಿಟ್ಟಿಗೆ ಕಾರಣವಾಗುತ್ತಿತ್ತು,

"ಥೂ ಈ ಕಾರ್ಪಣ್ಯ ಜೀವನ ಸಾಕಾಯಿತು" ಎಂದು ಬೇಸರ ಪಡುತ್ತಿದ್ದ. ಆದರೆ ಅವನಿಗೆ ತನಗಿಂತ ಮಾಲತಿಯಮೇಲೆ ಕನಿಕರ,

"ಒಬ್ಬಳೇ ಎಷ್ಟು ದುಡಿಯುತ್ತೀ ಮಾಲಾ? ಹೆಚ್ಚು ಕೆಲಸ ವನ್ನೆಲ್ಲಾ ಸೇರಿಸಿಡು, ಭಾನುವಾರ ಮಾಡುತ್ತೇನೆ" ಎನ್ನುತ್ತಿದ್ದ. ಇನ್ನೂ ಮಾಲತಿಗೇ ಅವನಿಗೆ ಕೆಲಸ ಹೇಳಲು ಇಚ್ಛೆಯಿರಲಿಲ್ಲ. ಹೇಗೋ ಪರದಾಡಿ ಅವನು ಮನೆಗೆ ಬರುವ ವೇಳೆಗೆ ಕೆಲಸ ಮುಗಿಸಿ ಲಕ್ಷಣವಾಗಿ

ಬಟ್ಟೆ ಧರಿಸಿಕೊಂಡು ಇರಲು ಯತ್ನಿಸುತ್ತಿದ್ದಳು. ಒಂದೊಂದು ಬಾರಿ ಆಗುತ್ತಲಿರಲಿಲ್ಲ ಅಷ್ಟೆ. ಆಗ ನಾರಾಯಣ ಅವಳ ಸಹಾಯಕ್ಕೆ ಬಂದೇ ಬರುತ್ತಿದ್ದ.

ಅಂತೂ ದಿನಗಳು ಕಳೆದುವು. ಮೊದಲಿನಂತೆ ಸದಾ ಸಂತೋಷಿಗಳಾಗಿರದಿದ್ದರೂ ಮಾಲತಿ–ನಾರಾಯಣರು ಅಸುಖಿಗಳು ಆಗಿರಲಿಲ್ಲ. ಒಂದೊಂದು ಬಾರಿ ತುಂಬಾ ಸಂತೋಷದಿಂದಲೂ ಇರುತ್ತಿದ್ದರು, ಕೆಲವು ಸಲ ಬೇಸರದಲ್ಲಿಯೂ ಇರುತ್ತಿದ್ದರು.

ಈ ಸಂದರ್ಭದಲ್ಲಿ ಮಾಲತಿ ಎರಡನೆ ಮಗುವಿಗೆ ತಾಯಿಯಾದಳು.

ಈ ಬಾರಿ ಅವಳು ತಾಯಿಯ ಮನೆಗೆ ಹೋಗಲಿಲ್ಲ.

“ನಿಮ್ಮ ತಾಯಿ ಇಲ್ಲೇ ಬರಬಾರದೇಕೆ ಮಾಲಾ ? ನಾನು ಒಬ್ಬನೇ ಖಾಲಿ ಮನೆಯಲ್ಲಿ ನಾಲ್ಕು ತಿಂಗಳು ಇರುವುದೆಂದರೆ ನನ್ನ ಕೈಯಲ್ಲಿ ಸಾಧ್ಯವಿಲ್ಲ” ಎಂದು ನಾರಾಯಣ ಹೇಳಿದ್ದೇ ಇದಕ್ಕೆ ಕಾರಣ.

ಮಾಲತಿಯೇನೋ ಹೇಳಿದಳು,

“ಆದರೆ ಖರ್ಚು ವಿಪರೀತವಾಗುತ್ತದೆ.”

“ಆಗಲಿ, ಅದನ್ನು ನಿಮ್ಮ ತಾಯಿಯ ಮೇಲೆ ಏತಕ್ಕೆ ಹಾಕಬೇಕು ?”

ವನಜಮ್ಮ ‘ಲಕ್ಷ್ಮಣ’ ಹುಟ್ಟುವುದಕ್ಕೆ ಒಂದು ತಿಂಗಳು ಮುಂಚೆ ಮನೆಗೆ ಬಂದು ಎಲ್ಲ ಕೆಲಸವನ್ನೂ ವಹಿಸಿಕೊಂಡರು. ಮಗಳ ಮನೆಯ ಕೆಲಸ, ಆಸ್ಪತ್ರೆಯ ಕೆಲಸ ಎರಡೂ ಇದ್ದರೂ ಅವರಿಗೆ ಮಾಲತಿ ರಾಮುವಿಗೆ ಉಣಿಸುವುದು ಕೂಡ ಇಷ್ಟವಾಗುತ್ತಿರಲಿಲ್ಲ,

“ಬಿಡು ಮಾಲಾ. ನಾನು ಮಾಡುತ್ತೇನೆ ಅದನ್ನೆಲ್ಲಾ. ನೀನು ಆರಾಮವಾಗಿದ್ದರೆ ಸಾಕು” ಎಂದು ಮಗುವನ್ನು ಎತ್ತಿಕೊಂಡು ಹೋಗುತ್ತಿದ್ದರು.

ನಾರಾಯಣನಂತೂ ಸಹಾನುಭೂತಿಯ ಮೂರ್ತಿಯಾಗಿಬಿಟ್ಟಿದ್ದ. ಅವಳ ಕೈಲಾಗದಿದ್ದರೆ ಅವನೂ ಸುತ್ತುವುದಕ್ಕೆ ಹೋಗುತ್ತಿರಲಿಲ್ಲ,

ಏನಾದರೂ ತಮಾಷೆಯಾಗಿ ಅವಳೊಡನೆ ಮಾತನಾಡುತ್ತ ಕಾಲ ಕಳೆಯುತ್ತಿದ್ದ.

ಅವಳಂದಂತೆ ಖರ್ಚು ಸ್ವಲ್ಪ ಹೆಚ್ಚಿದ್ದು ಅವನ ಗಮನಕ್ಕೆ ಬಂದಿತ್ತು. ಅದೂ ಅಲ್ಲದೆ ವನಜಮ್ಮ ಮಗಳಿಗೆ ಬೇಕಾದಷ್ಟು ಹಣ್ಣು ಹಂಪಲು ತರುವುದು ಮುಂತಾದುವನ್ನು ತಾವೇ ಮಾಡುತ್ತಿದ್ದುದು ಬೇರೆ ಅವನಿಗೆ ಗೊತ್ತಿತ್ತು.

"ಛೇ ಈ ಹಾಳು ಹಣದ ಅಡಚಣೆಯೊಂದು ನಮ್ಮಿಬ್ಬರ ಮಧ್ಯೆ ತೆರೆಹಾಕುತ್ತದೆ" ಎಂದುಕೊಳ್ಳುತ್ತಿದ್ದ.

ಮಾಲತಿಗೆ ಈಚೀಚೆಗೆ ಅವನು ಬೇಸರಗೊಂಡುದೂ ತಿಳಿಯುತ್ತಲಿರಲಿಲ್ಲ, ಅಷ್ಟು ಎಚ್ಚರಿಕೆಯಿಂದ ಮಾತನಾಡುತ್ತಿದ್ದ ನಾರಾಯಣ. ಅವರಿಬ್ಬರನ್ನೂ ನೋಡಿ, ನೋಡಿ ವನಜಮ್ಮ ಹಿಗ್ಗಿಹೋಗುತ್ತಿದ್ದರು,

"ಎಷ್ಟು ಒಮ್ಮನಸ್ಸಿನಿಂದ ಇದ್ದಾರೆ ಇಬ್ಬರೂ! ದೇವರು ಇವರನ್ನು ಹೀಗೇ ಇಟ್ಟಿರಲಿ" ಎಂದು ಅವರು ಅಂದುಕೊಳ್ಳದ ದಿನವಿಲ್ಲ.

ಲಕ್ಷ್ಮಣ ಹುಟ್ಟಿದ. ವನಜಮ್ಮ ಒಂದು ತಿಂಗಳು ರಜ ತೆಗೆದು ಕೊಂಡು ಮಗಳ ಸೇವೆಗೆ ನಿಂತರು. ನಾರಾಯಣ ರಾಮುವನ್ನು ನೋಡಿಕೊಳ್ಳಲು ಚಿಕ್ಕ ಹುಡುಗನೊಬ್ಬನನ್ನು ನೇಮಿಸಬೇಕಾಯಿತು. ಅವನಿಗೆ ಇದು ಖರ್ಚಿಗೆ ಹಿಂದೆಗೆಯುವ ಕಾಲವಲ್ಲವೆನ್ನಿಸಿತು. ಸ್ವಲ್ಪ ಧಾರಾಳವಾಗಿ ಎಲ್ಲಕ್ಕೂ ಕೊಡತೊಡಗಿದ. ಸಣ್ಣಗೆ ಸಾಲ ಶುರುವಾಯಿತು.

ದೇಶದ ಪರಿಸ್ಥಿತಿ ದಿನೇ ದಿನೇ ಬದಲಾಯಿಸುತ್ತಿದ್ದುದು ಬೇರೆ ಈ ಚಿಕ್ಕ ಸಂಸಾರವನ್ನು ಹೊಯ್ದಾಡಿಸುತ್ತಿತ್ತು. ಪದಾರ್ಥಗಳ ಬೆಲೆ ನೆನ್ನೆಗೆ ಇವತ್ತು ಹೆಚ್ಚಾಗುತ್ತಿದ್ದಿತು. ಅದಕ್ಕೆ ಸರಿಯಾಗಿ ಪ್ರತಿಯೊಂದರಲ್ಲೂ ಕೈತಡೆಯಬೇಕಾಗುತ್ತಿತ್ತು ನಾರಾಯಣ. ಇನ್ನು ಕೆಲವು ತಿಂಗಳುಗಳಾದರೆ ಸಂಸಾರವನ್ನು ತೂಗಿಸುವುದು ಹೇಗೆ ಎಂಬ ಪ್ರಶ್ನೆ ಎದ್ದು ನಿಲ್ಲುತ್ತಿತ್ತು ಅವನ ಕಣ್ಣ ಮುಂದೆ.

ಈ ಸಂದರ್ಭದಲ್ಲಿ ಒಂದು ದಿನ ಒಂದು ದಾರಿ ತೋರಿತು ಅವನಿಗೆ.

ಆಗ ಲಕ್ಷ್ಮಣನಿಗೆ ಇನ್ನೂ ಎರಡು ತಿಂಗಳಾಗಿರಲಿಲ್ಲ. ನಾರಾಯಣನಿಗೆ ಮಾಲತಿಯೊಂದಿಗೆ ಸುತ್ತಲು ಹೋಗುವುದಕ್ಕೆ ಮನಸ್ಸಾಯಿತು. ಮಕ್ಕಳನ್ನು ವನಜಮ್ಮನವರ ಬಳಿಯಲ್ಲಿ ಬಿಟ್ಟು ಹೊರಟರು ಹೊರಗೆ ಇಬ್ಬರೂ,

ಬಹಳ ದಿನಗಳಾಗಿತ್ತು ಹೊರಗೆ ಬಂದು.

"ಕಬ್ಬನ್ ಪಾರ್ಕಿಗೆ ಹೋಗೋಣ" ಎಂದ ನಾರಾಯಣ.

"ಆಗಲಿ ಹೋಗೋಣ" ಎಂದಳು ಮಾಲತಿ.

ಬಸ್ಸನ್ನು ಹತ್ತಿ ಪಾರ್ಕಿನ ಬಳಿ ಇಳಿದರು ಇಬ್ಬರೂ. ಅಲ್ಲೇ ಒಂದಿಷ್ಟು ಓಡಾಡಿದರು. ಒಂದು ಕಡೆ ನೆರಳಿದ್ದೆಡೆಯಲ್ಲಿ ಕುಳಿತರು. ಭವಿಷ್ಯದ ವಿಷಯ ಬಂದಿತು,

"ಈಸಲ ನಾನು ಎದ್ದ ಮೇಲೆ ಖರ್ಚು ಕಡಿಮೆ ಮಾಡಿಯೇ ಮಾಡುತ್ತೇನೆ. ತಿಂಗಳಿಗೆ ನಾಲ್ಕು ಕಾಸು ಸೇರಿಸದೆ ಇದ್ದರೆ ಏನು ಗತಿ? ಮಕ್ಕಳೊಂದಿಗರು ನಾವು" ಎಂದಳು ಮಾಲತಿ.

"ನೋಡೋಣ. ನಾನೂ ಇನ್ನೊಂದು ಏನಾದರೂ ವ್ಯಾಪಾರವನ್ನೋ ಇಲ್ಲವೇ ಸರಿಸಲಹೆ ಕೆಲಸವನ್ನೋ ಹಿಡಿದು ಸ್ವಲ್ಪ ಗಳಿಸಲು ನೋಡುತ್ತೇನೆ" ಎಂದ ನಾರಾಯಣ.

"ಈಗ ಮಕ್ಕಳಿಂದಾಗಿ ಖರ್ಚು ಅಷ್ಟೆ. ಮೊದಲು ನೂರು ರುಪಾಯಿಗಳಲ್ಲಿ ನಾವಿಬ್ಬರೂ ಎಷ್ಟು ಸೌಖ್ಯವಾಗಿದ್ದೆವು ನೆನಪಿಲ್ಲವೇ?"

"ಹುಂ. ಜೊತೆಗೆ ಎಲ್ಲದಕ್ಕೂ ಬೆಲೆ ಇಮ್ಮಡಿಯಾಗಿದೆ"

ಮಾತಿನ ಸಂಭ್ರಮದಲ್ಲಿ ಮಾಲತಿ ತನ್ನನ್ನು ನೋಡಿ ತನ್ನ ಕಡೆಗೆ ಧಾವಿಸಿ ಬಂದ ತನ್ನ ಹಳೆಯ ಅಧ್ಯಾಪಕರನ್ನು ನೋಡಲೇ ಇಲ್ಲ. ಅವರು ಬಿಡಬೇಕಲ್ಲ?

"ಏನಮ್ಮಾ ಮಾಲತಿ ಕ್ಷೇಮವೇ?" ಎಂದು ಕರೆದೇ ಬಿಟ್ಟರು.

ಮಾಲತಿ ತಟ್ಟನೆದ್ದು ನಿಂತಳು, ನಾರಾಯಣನೂ ನಿಂತುಕೊಂಡ. ಮಾಲತಿ ನಾರಾಯಣನನ್ನು ಅವರಿಗೆ ಪರಿಚಯಮಾಡಿಕೊಟ್ಟಳು.

ಅವರು ನಾರಾಯಣನ ಬೆನ್ನು ತಟ್ಟಿ, "ಭೇಷ್! ನಮ್ಮ ಉತ್ತಮ ವಿದ್ಯಾರ್ಥಿನಿಯನ್ನೇ ಆರಿಸಿಬಿಟ್ಟಿದ್ದೀರಿ ಪತ್ನಿಯಾಗಿ! ಅದೃಷ್ಟಶಾಲಿಗಳು ನೀವು" ಎಂದರು

"ನಿಜ, ನಿಮ್ಮ ಮಾತು" ಎಂದ ನಾರಾಯಣ ಹೆಮ್ಮೆಯಿಂದ.

"ಏನಮ್ಮಾ, ಕಲಿತದ್ದನ್ನೆಲ್ಲಾ ಮರೆತು ಆಯಿತೇ? ಏನಪ್ಪಾ ನಮ್ಮ ಹುಡುಗಿಯನ್ನು ಏತಕ್ಕೆ ಮನೆಯಲ್ಲಿ ಕೊಳೆಹಾಕಿದ್ದೀರಿ? ಈ ವರ್ಷ ಪ್ರೌಢ ವಿದ್ಯಾಶಾಲೆಗೆ ಇಪ್ಪತ್ತು ಜನ ಉಪಾಧ್ಯಾಯಿನಿಯರು ಬೇಕೆಂದು ಹಾಕಿಕೊಂಡಿದ್ದಾರೆ. ಇವರ ಕೈಯಲ್ಲಿ ಒಂದು ಅರ್ಜಿ ಏತಕ್ಕೆ ಕೊಡಿಸಬಾರದು ನೀವು?" ಎಂದು ಅವರು ನಾರಾಯಣನಿಗೂ ಹೇಳಿದರು.

"ಆಗಲಿ ನೋಡೋಣ" ಎಂದ ನಾರಾಯಣ.

"ನೋಡೋಣ ಅನ್ನಬೇಡಿರಿ. ವಿದ್ಯಾವತಿಯಾಗಿ ಮನೆಯಲ್ಲಿ ಕುಳಿತರೆ ಅದು ದೇಶದ್ರೋಹ ಮಾಡಿದಂತೆ. ಮಾಲತೀ, ಒಂದು ನಾಲ್ಕು ವರ್ಷಗಳಾದರೂ ಕೆಲಸ ಮಾಡಿದರೇ ಕಾಲೇಜಿನ ಋಣ ತೀರುವುದು" ಎಂದರು ಅವರು.

ಅವರು ಹೊರಟು ಹೋದಮೇಲೆ ಮಾಲತಿ ಹೇಳಿದಳು,

"ಅವರು ಯಾವಾಗಲೂ ಹೀಗೆಯೇ? ಎಲ್ಲ ಹುಡುಗಿಯರಿಗೂ ಕೆಲಸಮಾಡಿರಿ ಎಂದು ಹೇಳುತ್ತಾರೆ."

"ಅವರನ್ನು ಹಾಸ್ಯಮಾಡುವಿಯೇಕೆ ಮಾಲಾ? ಅವರ ಮಾತಿನಲ್ಲಿ ಸತ್ಯ ಇದೆ. ಕೆಲಸ ಮಾಡಲು ಯೋಗ್ಯತೆಯುಳ್ಳವರು ಗಂಡಸಾಗಲಿ ಹೆಂಗಸಾಗಲಿ ಅವಶ್ಯಕತೆ ಇದ್ದರೆ ಕೆಲಸ ಮಾಡಬೇಕು"

"ಇವತ್ತು ನೀವೂ ಏಕೋ ಒಂದು ತರಹಾ ಮಾತನಾಡುತ್ತಿದ್ದೀರಿ" ಎಂದಳು ಮಾಲತಿ, "ನೀವೇ ಹಿಂದೆ ಎಷ್ಟೋ ಬಾರಿ ಹೆಂಗಸರು ಗಳಿಸುವುದಕ್ಕೆ ಹೋಗಬಾರದೆಂದು ಹೇಳುತ್ತಿದ್ದಿರಿ"

"ಯಾವಾಗಲೋ ಏನೋ ಮಾತನಾಡಿದರೆ ಅದಕ್ಕೆ ಏನೋ ಅರ್ಥ ಮಾಡಿಕೊಳ್ಳುತ್ತೀ ಮಾಲಾ. ಹೆಂಗಸರು ಗಳಿಸುವ ಆಸೆಯ ಬಲೆಗೆ ಬೀಳಬಾರದು, ಅವರ ಧ್ಯೇಯ ಸಂಸಾರದಲ್ಲಿ ಸರ್ವರಿಗೂ ವಿಹಿತವಾಗುವಂತೆ

ಆಡಳಿತ ನಡೆಸಿ ಗೌರವ, ಆದರಗಳನ್ನು ಸಂಪಾದಿಸಿಕೊಳ್ಳುವುದಾಗ ಬೇಕು ಎಂದು ನಾನು ಹೇಳಿದಬೇಕು. ಇಂದೂ ಅದೇ ಮಾತನ್ನು ಹೇಳು ತ್ತೇನೆ. ಆದರೆ ಇದು ಬೇರೆ. ಯಾವ ಆದರ್ಶಕ್ಕೂ ವಿಘ್ನ ಬರದಂತೆ ಕಲಿತ ವಿದ್ಯೆ ಸಾರ್ಥಕವಾಗುವುದಾದರೆ ಏತಕ್ಕೆ ಬೇಡ ?"

"ಆದರ್ಶಕ್ಕೆ ಇಲ್ಲಿ ವಿಘ್ನ ಬರುವುದಿಲ್ಲ ? ನಾನು ಕೆಲಸಕ್ಕೆ ಹೋದರೆ ಮನೆಯನ್ನು ನೋಡುವವರು ಯಾರು ?''

"ಮನೆಯನ್ನು ನೋಡುವುದೇನು ಬಂತು ಮಾಲಾ ? ನೀನೇ ಹೇಳುವಿ, 'ಹತ್ತು ಗಂಟೆಗೆ ಮನೆಗೆಲಸವೆಲ್ಲಾ ಮುಗಿದು ಹೋಗುತ್ತೆ. ಆಮೇಲೆ ಏನಾದರೂ ಓದುವುದಕ್ಕೆ ಇಲ್ಲದಿದ್ದರೆ ಬಲು ಬೇಸರ' ಅಂತ ?"

"ಹೌದು, ಆದರೆ ಬೇಸರ ಅಂದರೆ—ತುಂಬಾ ಆಯಾಸವಾಗಿರುತ್ತೆ, ಕೆಲಸ ಮಾಡುವುದಕ್ಕೆ ಇಷ್ಟವಿರುವುದಿಲ್ಲ. ಏನಾದರೂ ಓದುತ್ತಾ ಹತ್ತು ನಿಮಿಷ ಮಲಗಬೇಕು ಅನ್ನಿಸುತ್ತೆ"

ಮಾಲತಿಯು ಮುಖ ಪೆಚ್ಚುಬಿದ್ದಿದ್ದು ನಾರಾಯಣನ ಲಕ್ಷ್ಯಕ್ಕೆ ಬರಲಿಲ್ಲ. ಅದರಿಂದಲೇ ಮತ್ತೆ ಹೇಳಿದ,

"ಹೋಗಲಿ ಬಿಡು, ದುಡಿಯುವುದಕ್ಕೆ ತಾನೇ ಗಂಡಸು ಹುಟ್ಟಿರು ವುದು ? ದುಡಿದು ಸಾಧ್ಯವಾದಷ್ಟು ಮಟ್ಟಿಗೆ ಸಂಸಾರ ತೂಗಿಸುತ್ತೇನೆ."

ಮಾಲತಿ ಸುಮ್ಮನಾದಳು. ನಾರಾಯಣನೇ ಮತ್ತೆ ಹೇಳಿದ,

"ಹಿಂದಿನ ಕಾಲದ ಪದ್ಧತಿ ಇದು. ನಾವು ಎಲ್ಲದರಲ್ಲೂ ಸುಧಾರಿಸಿ ದವರು. ಇದರಲ್ಲಿ ಮಾತ್ರ ಹಳೆಯದು ಬೇಕು"

ಏಕೋ ಅವನಿಗೂ ಸಂಜೆಯ ಗಾಳಿಯಲ್ಲಿ ತಂಪಾಗಲಿಲ್ಲ ಮನಸ್ಸಿಗೆ. ಮಾಲತಿಯಂತೂ ಎತ್ತಲೋ ನೋಡುತ್ತ ಕುಳಿತಿದ್ದಳು. ಸ್ವಲ್ಪ ಹೊತ್ತು ಇಬ್ಬರೂ ಮಾತನಾಡದೆಯೇ ಇದ್ದರು. ಬಳಿಕ ನಾರಾಯಣನೆಂದ,

"ಹುಂ, ಏಳಿನ್ನು ಮನೆಗಾದರೂ ಹೋಗೋಣ"

ಮನೆಗೆ ಅಂದರೆ ಬಸ್ಸು ಸಿಗಬೇಕಲ್ಲ ? ಬಸ್ಸಿನ ನಿಲ್ದಾಣಕ್ಕೆ ಹೋಗಿ ಇಬ್ಬರೂ ನಿಂತರು. ಅರ್ಧ ಗಂಟೆಯಾಯಿತು, ಇಬ್ಬರಿಗೂ ಮಾತು ಬೇಕಿರಲಿಲ್ಲ. ನಿಂತು, ನಿಂತು ಕಾಲು ನೋವು ಬಂದಿತು.

"ಇವತ್ತು ಮನೆಗೆ ಹೋದಂತೆಯೇ ಇದೆ" ಅಲ್ಲಿ ನಿಂತಿದ್ದವರೊಬ್ಬರು ನುಡಿದರು

"ಮೊದಲು ಕೆಲವೇ ಬಸ್ಸುಗಳು ಇದ್ದದ್ದು. ಆದರೂ ಈ ತಾಪತ್ರಯ ವಿರಲಿಲ್ಲ. ಈಗ ಗಳಿಗೆಗೊಂದು ಬಸ್ಸು ಬಂದರೂ "ಜಾಗ ಇಲ್ಲ" ಅನ್ನೋ ಕೂಗು." ಎಂದರು ಮತ್ತೊಬ್ಬರು.

"ಕಾಲ ಸ್ವಾಮಿ, ಕಾಲ. ಮೊದಲುಕಾಲದಲ್ಲಿ ನೂರು ಜನದ ಮನೆಗೆ ಸಂಪಾದಿಸುವವನು ಒಬ್ಬನಿದ್ದರೂ ನಡೆಯುತ್ತಿತ್ತು. ಈಗ ಮನೆ ಮಂದಿಯೆಲ್ಲ ಗಳಿಸಿದರೂ ತೃಪ್ತಿಯಾಗುವಂತೆ ಊಟ ನಡೆಯೋದಿಲ್ಲ"

"ಅದು ಹೇಗೆ ನಡೆದೀತು ಸ್ವಾಮಿ? ಈಗಿನ ಸಿನೇಮಾ, ನಾಟಕ, ನೃತ್ಯ ಸಂಗೀತಗಳ ಮಧ್ಯೆ ಯಾರ ಕೈಯಲ್ಲೂ ದುಡ್ಡು ಉಳಿಯುವುದಿಲ್ಲ. ಬರುವುದು ಮೂರು ಕಾಸಾದರೆ ಇವರು ಹುಚ್ಚು ಖರ್ಚು ಮಾಡುವುದು ಆರು ಕಾಸು .........."

ಹರಟೆ ಜೋರಾಗಿ ಪ್ರಾರಂಭವಾಯಿತು. ನಾರಾಯಣ-ಮಾಲತಿಯರು ಈ ಹರಟೆಯನ್ನು ಕೇಳುತ್ತ, ಅದರಲ್ಲಿ ಸೇರದೆ, ನಿಂತಿದ್ದರು.

ಎಷ್ಟೋ ಹೊತ್ತಾದ ಮೇಲೆ ಒಂದು ಬಸ್ಸಿನಲ್ಲಿ ಸೀಟು ಸಿಕ್ಕಿತು, ಇಬ್ಬರೂ ಮನೆ ತಲುಪಿದರು.

ವನಜಮ್ಮ ಇನ್ನೂ ಎದ್ದಿದ್ದರು,

"ಈಗ ತಾನೇ ಮಕ್ಕಳಿಬ್ಬರೂ ಮಲಗಿದರು. ನೀವು ಸದ್ದು ಮಾಡದೆ ಬಟ್ಟೆ ಬದಲಾಯಿಸಿ, ಊಟಕ್ಕೆ ಬನ್ನಿ" ಎಂದು ಆಕೆ ಎಲೆ ಹಾಕಲು ಹೋದರು.

ನಾರಾಯಣ ಪಿಸುಮಾತಿನಲ್ಲಿ ಮಾಲತಿಗೆ ಹೇಳಿದ,

"ನಿಮ್ಮ ತಾಯಿ ಮನೆಯಲ್ಲಿದ್ದರೆ ನಮಗೆ ಯಾವ ಜವಾಬು ದಾರಿಯೂ ಇರುವುದಿಲ್ಲ, ಮಾಲಾ ಇವರನ್ನು ಇಲ್ಲೇ ಇರಿಸಿಕೊಂಡು ಬಿಟ್ಟರೆ ಯಾವ ಕಷ್ಟವೂ ಇಲ್ಲದೆ ನಾವಿಬ್ಬರೂ ಹೊರಗೆ ಹೋಗಿ ಕೆಲಸ ಮಾಡಬಹುದು.

"ಅವರಿಗೂ ಕೆಲಸ ಉಂಟಲ್ಲ?" ಮಾಲತಿ ಕೇಳಿದಳು.

"ಸಾಕು ಇನ್ನು ಅವರು ಕೆಲಸಮಾಡುವುದು. ಬರೀ ದುಡಿತ. ಅದರಲ್ಲಿ ಬರುವುದು ಅಷ್ಟರಲ್ಲಿಯೇ ಇದೆ." ಎಂದ ನಾರಾಯಣ.

ಇನ್ನೊಮ್ಮೆ ಊಟಕ್ಕೆ ಕುಳಿತಾಗ ಮಾಲತಿ ತಾಯಿಯನ್ನು ಕೇಳಿದಳು,

"ಅಮ್ಮಾ ನಿನ್ನನ್ನು ನಿನ್ನ ಆಸ್ಪತ್ರೆಯ ಕೆಲಸ ಬಿಟ್ಟುಬಿಡು ಎಂದರೆ ಬಿಟ್ಟುಬಿಡುವಿಯಾ?" ಆಕೆ ನಕ್ಕಳು,

"ಯಾರಾದರೂ ಸುಮ್ಮಸುಮ್ಮನೆ "ಬಿಡು" ಅಂದರೆ ಬಿಟ್ಟುಬಿಡುವೆನೇ ಮಾಲಾ?"

"ಸಂದರ್ಭ ಬದಲಾಯಿಸಿ ಕೆಲಸ ಮಾಡುವುದು ಅನವಶ್ಯಕವಾದರೆ?" ನಾರಾಯಣ ಕೇಳಿದ.

"ಅಂದರೆ? ನನಗರ್ಥವಾಗಲಿಲ್ಲ" ಎಂದರು ವನಜಮ್ಮ.

ನಾರಾಯಣ ವಿವರಿಸಿದ,

"ಈಗ—ನಾವು ಸಂಪಾದಿಸುವುದು ನಮ್ಮೆಲ್ಲರಿಗೂ ಸಾಕು ಎಂದಿಟ್ಟುಕೊಳ್ಳೋಣ. ಮಕ್ಕಳನ್ನು ನೋಡಿಕೊಳ್ಳುವುದು, ಮನೆಯನ್ನು ನಿರ್ವಹಿಸುವುದು ಇವೆಲ್ಲಾ ನೀವೊಬ್ಬರಿಗೇ ತೃಪ್ತಿಕರವಾಗಿ ಮಾಡಲಾಗುವುದು ಅಂತ ಇಟ್ಟುಕೊಳ್ಳೋಣ ಆಗ?"

"ಆಗ ಮಾಲತಿಯೇನು ಮಾಡುತ್ತಿರುತ್ತಾಳೆ. ಅವಳ ಮನೆ ಮಕ್ಕಳ ಯೋಗಕ್ಷೇಮ ಅವಳಿಗೆ ಸೇರಿದ್ದು. ಅಲ್ಲವೆ?"

"ನಿಜ, ಆದರೆ ನೀವು ಆ ಯೋಗಕ್ಷೇಮಗಳನ್ನು ವಹಿಸಿಕೊಂಡರೆ ಅವಳು ತನ್ನ ವಿದ್ಯೆ ನಿರರ್ಥಕವಾಗದಂತೆ ಯಾವುದಾದರೂ ಒಂದು ಶಾಲೆಯಲ್ಲಿ ಉಪಾಧ್ಯಾಯಿನಿಯಾಗಿ ಕೈತುಂಬ ಹಣ, ಜೊತೆಗೆ ಒಳ್ಳೆಯ ಹೆಸರು ಎರಡನ್ನೂ ಗಳಿಸಬಹುದು."

"ಓಹೋ" ಎಂದರು ವನಜಮ್ಮ, "ಹಾಗಿದ್ದರೆ ನನಗೆ ನನ್ನ ಕೆಲಸ ಬಿಡಲು ಅಂತಹ ಅಭ್ಯಂತರವಿಲ್ಲ. ಇಷ್ಟಕ್ಕೂ ಆಸ್ಪತ್ರೆಯ ಕೆಲಸ ಬಿಟ್ಟರೂ ಹೊರಗಡೆ ಯಾವಾಗಲಾದರೂ ನನಗೆ ಗುರುತಿದ್ದವರು ಹೇಳಿಕಳುಹಿಸಿದಾಗ ಹೋಗಿ ಬಂದರೇ ಈಗ ಬರುವಷ್ಟು ಬರುತ್ತದೆ. ಏನು ಅಂದರೆ

ನಿತ್ಯ ಬೆಳಿಗ್ಗೆ ಎದ್ದು ಆಸ್ಪತ್ರೆಗೆ ಹೋಗಬೇಕಾಗುವುದಿಲ್ಲ, ಮನೆಯ ಕೆಲಸಕ್ಕೆ ಮನಸ್ಸುಕೊಡಬಹುದು."

"ಕೇಳಿದೆಯಾ ಮಾಲಾ? ನಿನ್ನೆ ಮೊದಲನೆಯ ಚಿಂತೆ ಬಗೆಹರಿದಂತಾಯ್ತು" ಎಂದ ನಾರಾಯಣ.

"ಇದಕ್ಕೆ ಚಿಂತೆಯೇ? ನನಗೆ ಹೇಳುವುದಕ್ಕೆ ಸಂಕೋಚವೇ ಮಾಲಾ? ನಿಮ್ಮ ಭವಿಷ್ಯ ಚೆನ್ನಾಗುವುದಕ್ಕೆ ಇದೊಂದು ಕೆಲಸ ಬಿಡುವುದೊಂದಲ್ಲ, ಏನು ಬೇಕಾದರೂ ಮಾಡಬಲ್ಲೆ ಮಗು" ಎಂದು ವನಜಮ್ಮ ತಮ್ಮ ಮಾತನ್ನು ಪುಷ್ಟೀಕರಿಸಿದರು.

ಮರುದಿವಸ ನಾರಾಯಣ ಹಾಸಿಗೆಯಿಂದ ಏಳುವಾಗಲೇ ಬಹಳ ಉತ್ಸಾಹದಿಂದ ಇದ್ದ.

"ಮಾಲಾ, ನಿನ್ನ ಕೆಲಸದ ವಿಚಾರ ನಿಖರವಾಗಿ ತಿಳಿಯುವವರೆಗೂ ನಿಮ್ಮ ತಾಯಿ ಆಸ್ಪತ್ರೆಗೆ ಹೋಗುತ್ತಿರಲಿ. ಇವತ್ತು ನಾನು ಮನೆಗೆ ಬರುವಾಗ ಮರೆಯದೇ ಕೆಲಸಕ್ಕೆ ಹಾಕಬೇಕಾದರೆ ಬೇಕಾಗುವ ಕಾಗದಗಳನ್ನು ತರುತ್ತೇನೆ" ಎಂದು ಹೇಳಿ ಮನೆಯಿಂದ ಹೊರಟ.

ಮಾಲತಿಗೆ ಮಾತ್ರ ಅವನ ಉತ್ಸಾಹವಿರಲಿಲ್ಲ.

"ಅಮ್ಮಾ, ಇದೇನೋ ಹಠ ಶುರುಮಾಡಿದ್ದಾರೆ ಇವರು. ನನಗೆ ಇನ್ನೂ ಸರಿಯಾಗಿ ಶಕ್ತಿಯೇ ಬಂದಿಲ್ಲ ಈ ಸಲ. ಈ ಅವಸ್ಥೆಯಲ್ಲಿ ಕೆಲಸಕ್ಕೆ ಸೇರುವುದು ಅಂದರೆ ಹೇಗೆ? ಲಕ್ಷ್ಮಣ ಇನ್ನೂ ಹಸುಳೆ. ಅದಕ್ಕೆ ಎಲ್ಲಾದಕ್ಕೂ ಕಷ್ಟವಾಗುತ್ತದೆ"

"ಅಳಿಯಂದಿರೇ ನಿನ್ನನ್ನು ಕೆಲಸಕ್ಕೆ ಸೇರಲು ಹೇಳಿದರೇ ಮಾಲಾ?"

ಮಾಲತಿಗೆ ಒಂದು ತರಹ ಆಯಿತು.

"ಹಾಗಲ್ಲಮ್ಮ. ಈ ನಡುವೆ ಮಿತಿಮೀರಿ ಖರ್ಚಾಗುತ್ತಿದೆ. ಅವರಿಗೆ ಬರುವಷ್ಟು ಏತೇತಕ್ಕೂ ಸಾಲುವುದಿಲ್ಲ. ಅದರಿಂದ ಅವರಿಗೆ ಒಂದು ತರಹ ಬೇಜಾರು. ನಾನೂ ಒಂದು ಸ್ವಲ್ಪ ಸಂಪಾದಿಸಿದರೆ ಆದೀತು ಎಂದು ಇವತ್ತು ಅನ್ನಿಸಿದೆ"

ವನಜಮ್ಮ ಚಿಂತೆಗೊಳಗಾದರು,

"ಕಾಲ ಬದಲಾಯಿಸಿದೆ ಮಾಲಾ. ಯಾವುದಕ್ಕೂ ಕಷ್ಟ. ಈಗ ನಾನು ಕೆಲಸಬಿಟ್ಟು ಕುಳಿತರೂ ಅದರಿಂದ ಒಳ್ಳೆಯದೇ ಆಗುವುದೆಂಬ ನಂಬಿಕೆ ನನಗಿಲ್ಲ"

ಮಧ್ಯಾಹ್ನ ಅನಂತ ಮನೆಗೆ ಬಂದ. ಅವನನ್ನು ನೋಡುತ್ತಲೇ ಮಾಲತಿಗೆ ಸ್ವಲ್ಪ ಹಗುರೆನಿಸಿತು. ಲಕ್ಷ್ಮಣನನ್ನು ಅವನ ಕೈಗೆ ಕೊಟ್ಟು ಟೀ ಮಾಡಿದಳು. ತಾನು ಒಂದು ಲೋಟ ತೆಗೆದುಕೊಂಡು ಇನ್ನೊಂದು ಲೋಟವನ್ನು ಅವನ ಮುಂದಿಟ್ಟು ಅಲ್ಲಿಯೇ ಕುಳಿತಳು. ಮಾತು ಪ್ರಾರಂಭವಾಯಿತು. ರಾಮು ಅನಂತನ ಮೇಲೆ ಹತ್ತಿ ಕುಳಿತ. ಅನಂತ ಅವನಿಗೊಂದು ಏಟು ಕೊಟ್ಟಂತೆ ಮಾಡಿ ಹೇಳಿದ,

''ರಾಮೂನ್ನ ಶಿಶುವಿಹಾರಕ್ಕೆ ಸೇರಿಸಬಾರದೇಮ್ಮ? ಅವನು ಶುದ್ಧ ಘಟಿಂಗನಾಗುತ್ತಿದ್ದಾನೆ."

''ಆಗಲಿ, ಸೇರಿಸೋಣ'' ಎಂದಳು ಮಾಲತಿ.

''ಕೇಳಿದೆಯಾ ರಾಮು? ಇನ್ನು ನೀನು ನಾನು ಬಂದಾಗಲೆಲ್ಲ ಚಾಕಲೇಟು, ಪೆಪ್ಪರಮೆಂಟು ಕೇಳುವಂತಿಲ್ಲ. ನೀನು ಮನೆಯಲ್ಲಿಲ್ಲದಾಗ ಸಮಯ ಸಾಧಿಸಿ ಬರುತ್ತೇನೆ ನಾನು ಇನ್ನು ಮೇಲೆ'' ರಾಮುವಿಗೆ ಅರ್ಥ ವಾಗಲಿಲ್ಲ. ಏನೋ ಚಾಕಲೇಟು ಎಲ್ಲಿಯೋ ಇದೆಯೆಂದು ಕೈನೀಡಿದ,

''ಕೊಡು ಚಿಕ್ಕಪ್ಪ''

"ಕೊಡುವುದಿಲ್ಲ ಅಂದರೆ ಕೊಡು ಅನ್ನುತ್ತೀಯಾ? ನಾನು ಕೊಡು ವುದಿಲ್ಲ" ಅನಂತ ಕೂಗಿದ. ಹೀಗೆ ಅವನು ಕೂಗಿದಾಗಲೆಲ್ಲ ಮಾಲತಿ ಗಟ್ಟಿಯಾಗಿ ನಗಬೇಕು. ಇವತ್ತೂ ಪ್ರಯತ್ನಿಸಿದಳು, ಆದರೆ ನಗು ಬರಲಿಲ್ಲ. ಅನಂತನೇ ನಕ್ಕು ಹೇಳಿದ,

''ಏನು, ಇವತ್ತು ನನ್ನ ಅಭಿನಯ ವ್ಯರ್ಥವಾಯಿತೇಕೆ? ಕೋಪ ಬಂದಿರುವಂತಿದೆಯಲ್ಲ?''

''ಇಲ್ಲ, ಇಲ್ಲ. ಯಾರ ಮೇಲೆ ಕೋಪಿಸಿಕೊಳ್ಳಲಿ ನಾನು?"

''ಕೋಪ ಇಲ್ಲವೇ? ಹಾಗಾದರೆ ಊಟಮಾಡಿಲ್ಲ.''

"ಅದೂ, ಆಯಿತು."

ಅನಂತ ಮಗುವನ್ನು ಕೆಳಗಿಳಿಸಿ ಅದಕ್ಕೆ ಹೇಳಿದ, "ಹೋಗು ರಾಮು. ಅಮ್ಮನಿಗೆ ಇವತ್ತು ನೀನು ತುಂಬ ತೊಂದರೆ ಕೊಟ್ಟಿದ್ದೀಯೆ. ನಿನ್ನ ಜೊತೆ ಬಿಟ್ಟುಬಿಡುತ್ತೇನೆ ನಾನು"

ರಾಮುವಿಗೆ ಅವನು ಹಾಗೆ ಇಳಿಸಿದ್ದು ಸರಿಬೀಳಲಿಲ್ಲ. ಗಟ್ಟಿಯಾಗಿ ಅಳತೊಡಗಿದ. ಮಾಲತಿಗೆ ನಗುಬಂದಿತು. ಅವನನ್ನು ಹತ್ತಿರ ಎಳೆದು ಕೊಂಡು ಹೇಳಿದಳು,

"ನೀವು ಹೀಗೇ ಮಾಡುತ್ತೀರಿ, ಅವನು ನಿಮ್ಮ ಬಳಿಗೆ ಬರುವುದನ್ನು ಬಿಟ್ಟುಬಿಡುತ್ತಾನೆ"

"ಬಿಟ್ಟು ಬಿಡಲಿ" ಎಂದ ಅನಂತ "ಅದು ಇರಲಿ, ಏಕಮ್ಮ ಇವತ್ತು ಹೀಗಿದ್ದೀರಿ? ಏನಾದರೂ ಅಸ್ವಸ್ಥತೆ ಇದೆಯೆ ಮೈಯಲ್ಲಿ?"

"ಸುಖವಾಗಿದ್ದೇನೆ. ಏಕಿಷ್ಟು ಒದ್ದಾಡಿಕೊಳ್ಳುತ್ತೀರಿ ಈ ಬಡ ತಂಗಿಗಾಗಿ?"

"ಏನೋ ಆಗಿದೆ. ನನ್ನ ಕೂಡ ಹೇಳಬಾರದಂತಹುದೇ?"

"ಅಂತಹದೇನಿಲ್ಲ" ಮಾಲತಿ ಅನುಮಾನಿಸಿ ನುಡಿದಳು, "ಇದ್ದಕ್ಕಿದ್ದಂತೆ ನಿಮ್ಮ ಸ್ನೇಹಿತರು ನಾನು ಕೆಲಸಕ್ಕೆ ಸೇರಬೇಕೆಂದು ಯೋಚಿಸುತ್ತಿದ್ದಾರೆ"

"ಹುಂ?"

"ನನಗೆ ಅಭ್ಯಂತರ ನಿಜವಾಗಿಯೂ ಇಲ್ಲ ಆದರೆ ಈಗ ಲಕ್ಷ್ಮಣನಿಗೆ ಎರಡು ತಿಂಗಳು. ನನಗೆ ಕೆಲಸಮಾಡುವುದಕ್ಕೆ ಶಕ್ತಿ ಇದೆಯೇ ಅನ್ನಿಸತ್ತೆ. ಜೊತೆಗೆ ಎಂದೋ ಓದಿದ್ದು. ಎಲ್ಲಾ ಮರೆತುಹೋಗಿದೆ. ತುಂಬಾ ಓದುವುದೂ ಅವಶ್ಯಕವಾಗುತ್ತೆ"

"ಇದುವರೆಗೂ ನಾರಾಯಣ ನನಗೆ ಈ ಮಾತು ಹೇಳಿರಲೇ ಇಲ್ಲವಲ್ಲ?"

"ನೆನ್ನೆಯೇ ಅವರಿಗೆ ಹೊಳೆದಿದ್ದು. ನಾವು ಕಬ್ಬನಪಾರ್ಕಿಗೆ ನಿನ್ನೆ ಸಂಜೆ ಹೋಗಿದ್ದೆವು. ಅಲ್ಲಿ ನನ್ನ ಹಳೆಯ ಅಧ್ಯಾಪಕರು ಸಿಕ್ಕಿ

ದ್ದರು. ಅವರು ನನಗೆ ಮನೆಯಲ್ಲಿ ಕುಳಿತಿರುವುದೇಕೆ? ಏನಾದರೂ ಕೆಲಸಕ್ಕೆ ಸೇರು ಎಂದರು. ಇವರಿಗೆ ಅದು ಸರಿಯೆನ್ನಿಸಿತು."

"ಅರೆ! ಇದು ಎಂದಿನಿಂದ? ಹೆಂಗಸರು ಕೆಲಸಕ್ಕೆ ಸೇರುವುದೆಂದರೆ ಗಂಡಸರಿಗೆ ಅಪಮಾನ ಮಾಡಿದಂತೆ ಎಂಬುದು ನಾರಾಯಣನ ಭಾವನೆ ಯಿತ್ತು. 'ಏನೋ ಅನಾಥರಾದರೆ, ಅನಿರ್ವಾಹದಿಂದ ಸೇರಿದರೆ ಅದು ಕ್ಷಮ್ಯ. ಇಲ್ಲದಿದ್ದರೆ ಅದು ಸಮಾಜ ದ್ರೋಹ' ಎನ್ನುತ್ತಿದ್ದ."

"ಹೌದು, ಹಾಗೆಯೇ ಅನ್ನುತ್ತಿದ್ದರು. ಈಗ ಅವರ ಸಂಪಾದನೆ ಯಲ್ಲಿ ಮನೆಯ ಖರ್ಚು ಏಳುವುದಿಲ್ಲ ಅಂತ ಈ ಯೋಜನೆ."

"ಅಂದರೆ ನೀವು ಕೆಲಸಕ್ಕೆ ಸೇರುವುದು ಅನಿರ್ವಾಹವೆಂದಾಯ್ತು. ನೀವೇನು ಅಂದಿರಮ್ಮಾ ಆ ಮಾತಿಗೆ?"

"ಮನೆಯ ಗತಿ ಏನು? ಮಕ್ಕಳನ್ನು ನೋಡುವವರು ಯಾರು? ಅಂದೆ. ನಮ್ಮ ತಾಯಿಯವರಿಗೆ ಹೇಳಿ ಅವರನ್ನು ಕೆಲಸ ಬಿಟ್ಟುಬಿಡಲು ಒಪ್ಪಿಸಿದರು."

ಅನಂತ ಯೋಚನೆ ಮಾಡುತ್ತ ಕುಳಿತ ಒಂದು ಕ್ಷಣ. ಮಾಲತಿಯ ಮಡಿಲಿನಲ್ಲಿ ಲಕ್ಷ್ಮಣ ನಿದ್ರೆ ಹೋಗುತ್ತಿದ್ದ. ಅವಳು ಅವನನ್ನು ಎತ್ತಿ ಕೊಂಡು ನಿಂತು,

"ಇಲ್ಲೇ ಇರಿ; ಮಗುವನ್ನು ಮಲಗಿಸಿ ಬರುತ್ತೇನೆ" ಎಂದು ಹೇಳಿ ಒಳಕ್ಕೆ ಹೋದಳು.

ಅವಳು ಮತ್ತೆ ಹೊರಗೆ ಬರುತ್ತಲೇ ಅನಂತ ಹೇಳಿದ,

"ಅಮ್ಮಾ ನಾನೊಂದು ಮಾತು ಹೇಳಲೇ? ನೀವು ಸದ್ಯದ ಪರಿಸ್ಥಿತಿ ಯಲ್ಲಿ ನಾರಾಯಣನ ಮಾತಿಗೆ ಒಪ್ಪಿಕೊಳ್ಳುವುದೇ ಸರಿಯೆಂದು ತೋರು ತ್ತದೆ. ಅವನು ಎಂದೂ ಹಣಕಾಸಿನ ಅಡಚಣೆಯನ್ನು ಕಂಡರಿಯ ದವನು. ಈ ಮೂರುನಾಲ್ಕು ವರ್ಷದ ಅನುಭವದಿಂದ ಹೆಚ್ಚು ಅವನು ಕಲಿತಿಲ್ಲ. ಇನ್ನೂ ಸ್ವಲ್ಪ ಹುಡುಕುತನವೇ ಬಂದಿದೆ."

"ಹೌದು ನಿಜ" ಎಂದಳು ಮಾಲತಿ.

"ಆದರಿಂದ ಈಗ ನೀವು "ಬೇಡ ಕೆಲಸ" ಅಂದರೆ, "ಓ ನೋಡಿ ದೆಯಾ, ಎಲ್ಲ ಜವಾಬ್ದಾರಿಯನ್ನು ನನ್ನ ತಲೆಗೆ ಕಟ್ಟಿ ಎಲ್ಲರೂ ಹ್ದಾಯಾಗಿರಲು ಪ್ರಯತ್ನಿಸುತ್ತಾರೆ" ಅಂದುಕೊಂಡು ಕಿರಿಕಿರಿ ಮಾಡಿಯಾನು. ಅದರ ಬದಲು ನೀವು ಮನೆಯಲ್ಲಿ ಇಲ್ಲದೆ ಇದ್ದರೆ, ಸದಾ ಓದು, ಕೆಲಸಗಳಲ್ಲೇ ಇದ್ದರೆ ತನಗೆಷ್ಟು ಫಜೀತಿ, ಮನೆಯಲ್ಲೆಷ್ಟು ಅವ್ಯವಸ್ಥೆ ಎನ್ನುವುದು ಅವನಿಗೆ ತಿಳಿಯಲಿ, ಒಂದು ನಾಲ್ಕು ದಿನ. ಬಳಿಕ 'ಈ ಯೋಜನೆ ಸರಿಯಲ್ಲ, ಬೇರೆ ಪರಿಹಾರ ಹುಡುಕಬೇಕು ಈ ಸಮಸ್ಯೆಗೆ' ಎಂದು ಅವನಿಗೇ ತಿಳಿಯುತ್ತೆ."

"ನಾನು ಆಗಲೇ ಅಂದುಕೊಂಡೆ: ಹೇಗಾದರೂ ಆಗಲಿ, ಕೆಲಸ ಸಿಕ್ಕರೆ ಸೇರಿಬಿಡುವುದು ಎಂದು." ಎಂದಳು ಮಾಲತಿ.

"ಸರಿ" ಎಂದ ಅನಂತ, "ಅದೇನೋ ಸರಿಯಮ್ಮಾ. ಆದರೆ ನೀವು ಸರಿಯಾಗಿ ಆಹಾರ ತೆಗೆದುಕೊಂಡು, ವ್ಯಾಯಾಮ ತೆಗೆದುಕೊಂಡರೆ ತಾನೇ ನಿಮಗೆ ಶಕ್ತಿ ಬರುವುದು?"

"ಅದೇನು ತೆಗೆದುಕೊಳ್ಳಬೇಕು ನೀವೇ ಹೇಳಿ. ಇಷ್ಟೆಲ್ಲ ಉಪದೇಶ ಕೊಟ್ಟವರಿಗೆ ಅದೇನು ಕಷ್ಟವಿಲ್ಲ."

"ಇಲ್ಲ, ಹೇಳುತ್ತೇನೆ ಕೇಳಿ. ನಾನು ಹೇಳಿದಂತೆ ನಡೆದರೆ ಒಂದು ತಿಂಗಳಲ್ಲಿ ಸರಿಯಾಗಿಬಿಡುತ್ತೀರಿ ನೀವು" ಎಂದು ರಾಗವಾಗಿ ಹೇಳಿದ ಅನಂತ, "ಬೆಳಿಗ್ಗೆ ಎಂಟು ಗಂಟೆಗೆ ಏಳಬೇಕು, ಎದ್ದಕೂಡಲೇ ಮಕ್ಕಳನ್ನು ನಾರಾಯಣನ ಕೈಗೆ ಕೊಟ್ಟು ಅವನನ್ನು ಸ್ವಲ್ಪ ದಬಾಯಿಸಬೇಕು."

"ಏನೆಂದು?"

"'ಸ್ವಲ್ಪ ಎತ್ತಿಕೊಳ್ಳಿ ಮಕ್ಕಳನ್ನು. ಅವಕ್ಕೆ ಅಪ್ಪನ ಗುರುತೇ ಮರೆತುಹೋಗುತ್ತಿದೆ. ಎಳೇ ಮಕ್ಕಳನ್ನು ಎತ್ತಿದರೆ ನಿಮ್ಮ ಕೈಯೇನು ನೋಯುವುದಿಲ್ಲ' ಅಂತ ಪ್ರಾರಂಭಿಸಿ. ತಾನಾಗಿ ನಿಮಗೆ ಇನ್ನೇನೇನು ಅನ್ನಬಹುದು ಎಂದು ತೋಚುತ್ತದೆ."

"ಆಮೇಲೆ?"

"ಆಮೇಲೆ ಒಂದು ಕಾಲು ಸೇರು ಹಾಲನ್ನು ಕುಡಿಯಬೇಕು. ಅದಾದಮೇಲೆ ಎಳೆಬಿಸಿಲಿನಲ್ಲಿ ಸ್ವಲ್ಪ ತಿರುಗಾಡಿಕೊಂಡು ಬನ್ನಿರಿ ನಾರಾಯಣನೊಡನೆ. ಮಕ್ಕಳು ಮನೆಯಲ್ಲೇ ಇರಲಿ, ಹೇಗೂ ನಿಮ್ಮ ತಾಯಿ ಬೆಳಿಗ್ಗೆ ಕೊಂಚ ಹೊತ್ತು ಮನೆಯಲ್ಲಿರುತ್ತಾರೆ. ಬಳಿಕ ಊಟ ಮಾಡಿ. ಇವರಿಬ್ಬರಿಗೂ ಎರಡು ಏಟುಕೊಟ್ಟು ಮಲಗಿಸಿ, ನೀವೂ ನಿದ್ದೆಮಾಡಿ ನಾಲ್ಕು ಗಂಟೆಯವರೆಗೂ. ಆಮೇಲೆ ಕೈಲಾದರೆ ಎದ್ದು ಟೀ ಮಾಡಿಕೊಂಡು ಕುಡಿಯಿರಿ, ಅಥವಾ ಓವಲ್ಟೀನು ಮಾಡಿಕೊಂಡು ಕುಡಿದು ಯಾರಾದರೂ ನೆರೆಹೊರೆಯವರೊಂದಿಗೆ ಹರಟೆ ಹೊಡೆಯಿರಿ. ನಾರಾಯಣ ಮನೆಗೆ ಬರುತ್ತಲೂ ಅವನಿಗೊಂದಿಷ್ಟು ಟೀ ಕೊಟ್ಟು 'ಇನ್ನು ಈ ಮಕ್ಕಳನ್ನು ನೋಡಿಕೊಳ್ಳಿ, ಇಷ್ಟು ಹೊತ್ತೂ ಇವರೊಂದಿಗೆ ಒದ್ದಾಡಿ ನನಗೆ ಸಾಕಾಗಿ ಹೋಯಿತು' ಎಂದು ಅವನಿಗೆ ಅವರನ್ನು ಒಪ್ಪಿಸಿ ಬಿಸಲು ತಂಪುವವರೆಗೂ ಮಲಗಿರಿ."

"ನಿಜವಾಗಿ ಚೆನ್ನಾಗಿದೆ ನೀವು ಹೇಳುವುದು. ಹೀಗೆ ಮಾಡಿದರೆ ಶಕ್ತಿ ಬಂದರೂ ಬರಬಹುದು ಎಂದು ನನಗೆ ನಂಬಿಕೆ ಬರುತ್ತಿದೆ."

"ಖಂಡಿತ ಬರುತ್ತದೆಯಮ್ಮಾ. ಸಾಯಂಕಾಲ ಒಂದು ಪಾವು ಹಾಲು, ಎರಡು ಟೊಮೆಟೋ, ಒಂದು ಕಿತ್ತಲೆ ಹಣ್ಣು, ಎರಡು ಬಾಳೆ ಹಣ್ಣು ಸೇವಿಸಿ. ನಾರಾಯಣನಿಗೆ ಕೊಡಲು ಹೋಗಬೇಡಿ. ಅವನಿಗೆ ಬೊಜ್ಜು ಬಂದೀತು. ಬೇಕಾದರೆ ಸಂಜೆ ಮತ್ತೆ ತಿರುಗಾಡಲು ಹೋಗಿ. ಮನೆಗೆ ಬಂದು ಊಟಕ್ಕೆ ಮೊದಲು ಒಂದು ಅರ್ಧ ಗಂಟೆ ಮಲಗಿದ್ದು, ಊಟವಾದಮೇಲೆ ಏನೂ ಕೆಲಸ ಮಾಡದೆ ನಿದ್ರೆ ಮಾಡಿಬಿಡಿ. ಒಂದು ತಿಂಗಳಲ್ಲಿ ಈ ನಿಶ್ಶಕ್ತಿಯೆಲ್ಲಾ ಹೋಗಿಬಿಡದಿದ್ದರೆ ನಿಮಗೆ ನೂರು ರೂಪಾಯಿ ಕೊಡುತ್ತೇನೆ."

"ನೂರು ರುಪಾಯಿ! ಈಗಲೇ ಕೊಟ್ಟಿದ್ದರೆ ನಿಮ್ಮ ಸ್ನೇಹಿತರಿಗೆ ಉಪಕಾರವಾಗುತ್ತಿತ್ತು" ಎಂದಳು ಮಾಲತಿ.

ಅಷ್ಟುಹೊತ್ತಿಗೆ ವನಜಮ್ಮ ಮನೆಗೆ ಬಂದರು,

"ಅಮ್ಮಾ, ನನಗೆ ಅನಂತ್ ಉಪದೇಶ ಕೊಡುತ್ತಿದ್ದಾರೆ" ಎಂದಳು ಮಾಲತಿ.

"ಅಮ್ಮಾ, ಅವರ ಪ್ರಶ್ನೆಗಳಿಗೆಲ್ಲಾ ಸುಸೂತ್ರವಾಗಿ ಉತ್ತರ ಕೊಟ್ಟಿದ್ದೇನೆ. ಇದಕ್ಕಾಗಿ ನೀವು ನನಗೆ ಇನ್ನೊಂದು ಲೋಟ ಟೀ ಕೊಡಬೇಕು."

ಅನಂತ ಹೊರಡುವ ವೇಳೆಗೆ ಮಾಲತಿಯ ಮ್ಲಾನತೆಯೆಲ್ಲ ದೂರ ವಾಗಿ ಹಸನ್ಮುಖಿಯಾಗಿದ್ದಳು. ನಾರಾಯಣ ಮನೆಗೆ ಬರುತ್ತಲೇ ತಾನೇ ಪ್ರಶ್ನೆ ಮಾಡಿದಳು,

"ಆ ಕಾಗದಗಳನ್ನು ತಂದಿದ್ದೀರಷ್ಟೆ ?"

"ಓಹೋ ಅವನ್ನು ಮರೆಯುತ್ತೇನೆಯೇ ? ಮೊದಲು ಸ್ವಲ್ಪ ನನ್ನ ಹಸಿವು ಶಮನವಾಗಲಿ, ಬಳಿಕ ಇಬ್ಬರೂ ಕುಳಿತು ಅದರಲ್ಲಿ ಬರೆಯ ಬೇಕಾದುದನ್ನೆಲ್ಲ ಬರೆಯೋಣ" ಎಂದ ನಾರಾಯಣ.

"ಬೇಗ ಬರೆದಿಟ್ಟು ಸುತ್ತುವುದಕ್ಕೆ ಹೋಗೋಣ" ಮಾಲತಿ ಯೆಂದಳು.

ಅವನ ಉಪಹಾರ, ಟೀ ಆದಕೂಡಲೆ ಇಬ್ಬರೂ ಆ ಕಾಗದಗಳನ್ನು ಹರಡಿಕೊಂಡು ಕುಳಿತರು. ಒಂದೊಂದು ಪ್ರಶ್ನೆಯ ಮೇಲೂ ಅಖಂಡ ವಾಗಿ ಚರ್ಚೆ ನಡೆಸಿ ಉತ್ತರ ಬರೆದರು, ಅಂದರೆ ಉತ್ತರ ಬರೆದದ್ದು ಮಾಲತಿಯಾದರೂ ಒಕ್ಕಣೆ ನಾರಾಯಣನದೇ. ರುಜುಹಾಕಿ ಅವಕ್ಕೆ, ಅವನ್ನು ಒಳಕ್ಕೆ ತೆಗೆದಿಡುವ ವೇಳೆಗೆ ದೀಪ ಹಚ್ಚಿತು.

"ಏಳು, ತಿರುಗಾಡಲು ಹೋಗೋಣ ಇನ್ನು" ಎಂದ ನಾರಾಯಣ. ರಾಮುವನ್ನೂ ಕರೆದುಕೊಂಡೇ ಹೊರಟರು ಹೊರಗೆ. ಬೀದಿಯಲ್ಲೂ ನಾರಾಯಣನಿಗೆ ಅದೇ ಮಾತು.

"ನಾಳೆ ಇದನ್ನು ಟಪ್ಪಾಲಿಗೆ ಹಾಕಿದರೆ ಇನ್ನೂ ಎರಡು ತಿಂಗಳಿ ನಲ್ಲಿ ಕೆಲಸದ ವಿಷಯ ತಿಳಿಯುತ್ತದಂತೆ. ಅಲ್ಲಿಯವರೆಗೆ ಮನೆಯಲ್ಲಿ ಏನೇನು ವ್ಯವಸ್ಥೆ ಮಾಡಬೇಕೋ ಅವನ್ನೆಲ್ಲಾ ಮಾಡಿದರಾಯ್ತು"

"ಹುಂ" ಎಂದು ಮಾಲತಿ ಹೇಳಿದಳು, "ಇವತ್ತು ಮಧ್ಯಾಹ್ನ ಅನಂತ್ ಬಂದಿದ್ದರು"

"ಅವನಿಗೆ ಈ ಸಮಾಚಾರ ಹೇಳಿದೆಯಾ ?"

"ಹೇಳಿದೆ. ಅವರಿಗೆ ಆಶ್ಚರ್ಯವಾಯಿತು ಮೊದಲು. ಆಮೇಲೆ ನೀವು ಹೇಳುವಂತೆಯೇ ಕೆಲಸಕ್ಕೆ ಸೇರುವುದರಲ್ಲಿ ತಪ್ಪಿಲ್ಲ ಎಂದು ಅಭಿಪ್ರಾಯ ಕೊಟ್ಟರು."

"ಹಾಗಾದರೆ ಅವನಿಗೂ ಬುದ್ಧಿ ಇದೆ"

ಸ್ವಲ್ಪ ಹೊತ್ತಾದ ಮೇಲೆ ಅವನಿಗೆ ಏನೋ ಹೊಳೆಯಿತು.

"ಹತ್ತಿರದಲ್ಲಿಯೇ ಇರುವ ಹೈಸ್ಕೂಲು ಯಾವುದಕ್ಕಾದರೂ ಹಾಕಿದರೆ ಒಳ್ಳೆಯದು. ಇಲ್ಲದಿದ್ದರೆ ನೀನು ನಿತ್ಯ ಬಸ್ಸಿನಲ್ಲಿ ಹೋಗಿ ಬರಬೇಕಾಗುತ್ತದೆ"

ಮಾಲತಿಗೆ ನಗು ಬಂದಿತು,

"ಬೇರೆ ಊರಿಗೆ ಹಾಕಿದರೆ ?"

"ಹಾಗಾಗಲಾರದು" ಎಂದ ನಾರಾಯಣ.

ಅವನ ಕಣ್ಣು ಸಹಜವಾಗಿ ಒಮ್ಮೆ ಅವಳ ಕಾಲಿನ ಕಡೆಗೆ ಹೋಯಿತು,

"ಮಾಲಾ, ನಿನ್ನ ಚಪ್ಪಲಿಗಳು ಸವೆದು ಚಿಪ್ಪಾಗಿವೆ. ಈ ತಿಂಗಳು ದುಡ್ಡು ಕೈಗೆ ಬಂದೊಡನೆಯೇ ಜ್ಞಾಪಿಸು ಮೊದಲು ಒಳ್ಳೆಯದೊಂದು ಜೊತೆ ತೆಗೆಯೋಣ"

ಮುಂದಿನ ತಿಂಗಳಿನಲ್ಲಿ ಕಾದಿದ್ದ ನೂರು ಖರ್ಚುಗಳು ಮಾಲತಿಯ ನೆನಪಿಗೆ ಬಂದುವು..

"ಬಹುಶಃ ಬೇರೆ ಚಪ್ಪಲಿ ಬೇಕಾಗಲಾರದು. ಇವಕ್ಕೇ ಅಟ್ಟೆ ಹಾಕಿಸಿದರಾಯ್ತು. ಇನ್ನೂ ಮೂರು ತಿಂಗಳಿಲ್ಲ, ಇವನ್ನು ಕೊಂಡು. ಸದಾ ಹಾಕಿಕೊಳ್ಳುವುದರಿಂದ ಸವೆದಿದೆ"

"ಜುಗ್ಗಿ ನೀನು, ಕಾಸುಬಿಚ್ಚುವುದು ಎಂದರೆ ಪ್ರಾಣಸಂಕಟವಲ್ಲವೇ

ನಿನಗೆ?" ಎಂದು ನಕ್ಕ ನಾರಾಯಣ, "ಬಹುಶಃ ನಿನ್ನಲ್ಲಿ ಈಗ ಸೀರೆಗಳು ಕೂಡ ಹೆಚ್ಚಿಗೆ ಇರಲಾರವು"

"ಸುಮಾರಾಗಿ ಇವೆ, ಈಗ ಸಾಕು"

"ಅದೇನೋ ನನಗೆ ಗೊತ್ತಿಲ್ಲ. ರಾಮು ಹುಟ್ಟುವ ಮೊದಲಿಗೆ ಆಗಾಗ ಒಂದೊಂದು ಸೀರೆ ತರುತ್ತಿದ್ದೆ ನಿನಗೆ, ಇತ್ತೀಚೆಗೆ ಆ ಅಭ್ಯಾಸ ಪೂರ್ತಿ ಬಿಟ್ಟು ಹೋಯಿತು. ಈ ವರ್ಷವೆಲ್ಲಾ ನಿನಗೆ ಒಂದು ಸೀರೆಯನ್ನೂ ತರಲಿಲ್ಲ"

ಅವನ ಧ್ವನಿಯಲ್ಲಿ ತುಂಬಿ ತುಳುಕುತ್ತಿದ್ದ ಮಾರ್ದವ ಮಾಲತಿಯ ಕಣ್ಣುಗಳಲ್ಲಿ ನೀರು ಬರುವಂತೆ ಮಾಡಿತು,

"ಹೋಗಲಿ ಬಿಡಿ. ಹೊಸದುಡದಿದ್ದರೆ ದಿನ ಕಳೆಯುವುದಿಲ್ಲವೆನ್ನುತ್ತದೆಯೇ?" ಎಂದಳು.

"ಅಡವಿಯಲ್ಲಿ ಬಿಟ್ಟ ಮಕ್ಕಳಂತಾಗಿದ್ದೇವೆ ನಾವು" ಎಂದು ನಾರಾಯಣನೂ ಸುಮ್ಮನಾದ.

ಕಾಗದಗಳನ್ನು ಮರುದಿವಸ ಟಪ್ಪಾಲಿಗೆ ಹಾಕಿದರು. ಮಾಲತಿ ಸಾಧ್ಯವಾದರೆ ಮತ್ತೆ ಆರೋಗ್ಯಶಾಲಿಯಾಗಿಬಿಡಬೇಕೆಂದು ಮನಸ್ಸು ಮಾಡಿ ತನ್ನ ದೇಹದ ಆರೈಕೆಗೆ ಸ್ವಲ್ಪ ಮನಸ್ಸು ಕೊಟ್ಟಳು. ಅನಂತನು ಹೇಳಿದಷ್ಟು ಅಲ್ಲದಿದ್ದರೂ, ಸುಮಾರಾಗಿ ಹಾಲು ಹಣ್ಣು ನಿದ್ರೆಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟಳು. ನಾರಾಯಣನೂ ಮೊದಲಿಗಿಂತ ಹೆಚ್ಚು ಮುತುವರ್ಜಿವಹಿಸಿ ಅವಳು ರಾತ್ರೆ ಜಾಸ್ತಿ ನಿದ್ರೆಕೆಡದಂತೆ ಮಕ್ಕಳಿದ್ದಾಗ ತೂಗುವುದು ಮುಂತಾದುವನ್ನು ಮಾಡಲಾರಂಭಿಸಿದ. ಆಗಾಗ ಅನಂತ ಬಂದು ನೋಡುತ್ತಿದ್ದ.

"ಏನಮ್ಮಾ, ನನ್ನ ವೈದ್ಯ ಫಲಕಾರಿಯಾಗುತ್ತಿರುವಂತೆ ತೋರುತ್ತದೆ! ಶಕ್ತಿ ಸ್ವಲ್ಪಸ್ವಲ್ಪ ಬಂದಾಗ ಯಾರಿಗೂ ಅದರ ಸುಳಿವನ್ನು ಕೊಡಬೇಡಿ. ಕುಳಿತು, ಮಲಗಿ ಉಪಚಾರ ಮಾಡಿಸಿಕೊಳ್ಳಿ" ಎಂದು ಬುದ್ಧಿವಾದ ಹೇಳುತ್ತಲೂ ಇದ್ದ.

"ಆಗಲಿ" ಎಂದು ನಗುತ್ತಿದ್ದಳು ಮಾಲತಿ.

ಒಂದು ತಿಂಗಳ ನಂತರ ಕೆಲಸದ ಕರೆ ಬಂದಿತು ಮಾಲತಿಗೆ. ನಾರಾಯಣ ಹೇಳಿದಂತೆ ಹತ್ತಿರದಲ್ಲಿಯೇ ಇದ್ದ ಹೈಸ್ಕೂಲಿಗೆ ಹಾಕಿದ್ದರು ಮಾಲತಿಯನ್ನು.

"ನಾನು ಏನು ಹೇಳಿದ್ದೆ?" ಎಂದ ನಾರಾಯಣ, "ನಿಮ್ಮ ತಾಯಿ ಇನ್ನು ಅವರ ಕೆಲಸಕ್ಕೆ ನಮಸ್ಕಾರ ಹಾಕಿ ಮನೆಗೆ ಬಂದುಬಿಡಲಿ"

ಇತ್ತೀಚಿಗೆ ಬೆಣ್ಣೆಯಂತೆ ಮೃದುವಾಗಿದ್ದ ಅಳಿಯನಲ್ಲಿ ವನಜಮ್ಮನಿಗೆ ಮಮತೆ ತುಂಬಿ ಬಂದಿತು.

"ಆಗಲಿ. ಇವತ್ತೇ ರಾಜೀನಾಮೆ ಬರೆದು ಕೊಟ್ಟು ಬರುತ್ತೇನೆ" ಎಂದರವರು.

"ಈ ಸೋಮವಾರವೇ ಸೇರಿಬಿಡಬೇಕು" ಎಂದಳು ಮಾಲತಿ.

"ಹುಂ, ಹೌದು. ಅದನ್ನೇನು ಹೇಳುತ್ತೀ?" ಎಂದು ನಾರಾಯಣ ನಕ್ಕು, "ನನಗೆ ಜ್ಞಾಪಕಕ್ಕೆ ತರುತ್ತಿದ್ದೀಯೇನು?"

"ಏನನ್ನು?" ಮಾಲತಿ ಕೇಳಿದಳು.

ನಗುತ್ತಲೇ ನುಡಿದ ನಾರಾಯಣ,

"ಅಯ್ಯೋ ಪಾಪ! ನನಗೆ ತಿಳಿಯಲಿಲ್ಲವೆಂದು ತಿಳಿದೆಯೋ? ಹಾಗಾದರೆ ನೀನ- ಈಗ ನೀನು ಏನೂ ಹೇಳದೆಯೇ ನನ್ನನ್ನು ಪರೀಕ್ಷೆ ಮಾಡು"

ಮಾಲತಿಗೂ ನಗು ಬಂದಿತು,

"ಅದೇನು ಅನ್ನುತ್ತೀರೋ ನನಗೆ ತಿಳಿಯದು. ಇತ್ತೀಚಿಗೆ ತುಂಬ ವಿಚಿತ್ರ ಮನುಷ್ಯರಾಗುತ್ತಿದ್ದೀರಿ"

"ನನ್ನಲ್ಲಿ ನಿನಗೆ ಹೊಸ ಹೊಸತು ಕಾಣುತ್ತಿದೆಯನ್ನು ಹಾಗಾದರೆ"

"ಹುಂ. ಒಂದು ದಿನ ನಿಮ್ಮ ಗುರುತೇ ನನಗೆ ಸಿಗದೆ ಹೋಗಿಬಿಟ್ಟೀತು ಈ ಹೊಸತನದ ಹಾರಾಟದಲ್ಲಿ ಎಂದು ಅಂಜಿಕೆಯಾಗುತ್ತಿದೆ" ಎಂದಳು ಮಾಲತಿ.

ಸಂಜೆ ನಾರಾಯಣ ಮನೆಗೆ ಬರುವವೇಳೆಗೆ ಮಾಲತಿಯು ಹೆರಳು, ಅಲಂಕಾರ ಪೂರೈಸಿತ್ತು.

"ಅರೆ, ಆಗಲೇ ಸಿದ್ಧಳಾಗಿಬಿಟ್ಟಿದ್ದೀ! ನನಗೆ ಶ್ರಮ ಪರಿಹಾರಕ್ಕೆ ಒಂದು ಅರ್ಧಗಂಟೆ ಕೊಡು ಮಹರಾಯಿತಿ, ಈಗ ತಾನೇ ದುಡಿದು ಬೆಂಡಾಗಿ ಬಂದಿದ್ದೇನೆ" ಎಂದು ನಾರಾಯಣ ಅವಳನ್ನು ಬೇಡಿದ

"ಅಯ್ಯೋ! ನಿತ್ಯ ನೀವು ಮನೆಗೆ ಬರುತ್ತಲೂ ನಾನು ನಿಮ್ಮನ್ನು ಕಾಡುತ್ತೇನೆಯೇ? ಅರ್ಧಗಂಟೆಯುಲ್ಲದಿದ್ದರೆ ಒಂದು ಗಂಟೆ ಮಲಗಿ ಏಳಿ. ಹಾಸಿಗೆ ಹಾಸಿ ಕೊಡಲೇ?" ಎಂದು ಮಾಲತಿ ಕೇಳಿದಳು.

ನಾರಾಯಣ ಅವಳ ಮುಖಮುಖ ನೋಡಿ, "ಅಬ್ಬಾ! ಮಾತಿನ ರಭಸ ನೋಡಿ ನಿನಗೆ ಕೋಪ ಬಂದಿದೆಯೆಂದೇ ತಿಳಿದೆನಲ್ಲಾ ಮಾಲಾ! ನೀನು ಈಗ ಎದುರಿಗಿದ್ದುದು ಒಳ್ಳೆಯದಾಯ್ತು. ಇಲ್ಲದಿದ್ದರೆ ಇಷ್ಟು ಹೊತ್ತಿಗೆ ಮನೆಯಿಂದ ಓಡಿ, ನಿನ್ನ ಕೋಪ ಇಳಿಯಲು ಒಂದು ಗಂಟೆ ಅವಕಾಶ ಕೊಟ್ಟು ಬರುತ್ತಿದ್ದೆ ಮನೆಗೆ" ಎಂದು ನಗುತ್ತಾ ಸ್ನಾನದ ಮನೆಯ ಕಡೆಗೆ ಹೊರಟ.

"ಅಮ್ಮಾ, ಏನಮ್ಮಾ, ನಿನ್ನ ಅಳಿಯ ಬಹು ಸಡಗರ ಮಾಡುತ್ತಿದ್ದಾರೆ. ಅವರ ನಗು, ಸಂತೋಷಗಳಿಗೆ ಮಿತಿಯೇ ಇಲ್ಲವಲ್ಲ?" ಮಾಲತಿ ತಾಯಿಗೆ ಹೇಳಿದಳು.

"ಅವರೇನು ಹೇಳುತ್ತಾರೆ? ನೀನೂ ನಗು, ಸಂತೋಷವಾಗಿ ಇರು. ಅವರಲ್ಲಿ ತಪ್ಪೇನಿಲ್ಲಮ್ಮ ಮಾಲಾ!"

"ಓ! ಹಾಗಾದರೆ ಸರಿ" ಎಂದು ತಾಯಿಯನ್ನು ಅಣಗಿಸಿ ನಕ್ಕಳು ಮಾಲತಿ.

ನಾರಾಯಣ ತಿಂಡಿ ತಿನ್ನುವಾಗಲೂ ಒಳೊಳಗೇ ನಗುತ್ತಿದ್ದ. ಮಾಲತಿ ಕಂಡೂ ಕಾಣದಂತೆ ರಾಮಚಂದ್ರನಿಗೆ ಬಟ್ಟೆ ಹಾಕಿದಳು. ನಾರಾಯಣ ಹೇಳಿದ,

"ಮಾಲಾ, ರಾಮು ಇವತ್ತು ಅಜ್ಜಿಯ ಜೊತೆಗೇ ಇರಲಿ, ಅಷ್ಟು

ದೂರ ಕರೆದುಕೊಂಡು ಹೋಗಿ, ಆಮೇಲೆ ಬಸ್ಸು ಸಿಗದೆ ಇದ್ದರೆ ಎತ್ತಿಕೊಂಡು ಬರಬೇಕಾಗುತ್ತೆ."

"ಎಲ್ಲಿಗೆ ನಾವು ಹೋಗುವುದು ?" ಎಂದು ಕೇಳಿ ಹೊರಟಿದ್ದವಳು ತನ್ನ ಕುತೂಹಲವನ್ನು ಅಡಗಿಸಿಕೊಂಡು ಮಾಲತಿ ನುಡಿದಳು,

"ಸರಿ, ಒಳ್ಳೆಯದೇ ಆಯ್ತು. ಅಮ್ಮ ಅಂಗಡಿಗೆ ಹೋಗಿ ಪೆಪ್ಪರಮೆಂಟು ತರುತ್ತಾರೆ. ಅವರ ಜೊತೆಯಲ್ಲಿ ಹೋಗುವುದು ಬಿಟ್ಟು ರಾಮು ನಮ್ಮೊಂದಿಗೆ ಬರುವನೇ ? ಜಾಣ ಅವನು."

ಹತ್ತು ನಿಮಿಷದಲ್ಲಿ ಇಬ್ಬರೂ ಮನೆಯಿಂದ ಹೊರಟರು. ಸುಲಭವಾಗಿ ಬಸ್ಸು ಸಿಕ್ಕಿತು. ಬಸ್ಸಿನಿಂದ ಇಳಿದಮೇಲೆಯೂ ಮಾಲತಿಗೆ ಗೊತ್ತಿಲ್ಲ, ಎತ್ತ ಕಡೆ ಹೋಗುತ್ತಿರುವುದೆಂದು. "ಸಿನೇಮಾಗೆ ಕರೆದೊಯ್ಯುತಿದ್ದಾರೆ ಬಹುಶಃ" ಎಂದುಕೊಂಡಳು.

ಸಿನೇಮಾ ಮಂದಿರಗಳನ್ನು ದಾಟಿ ಚಿಕ್ಕಪೇಟೆಯ ಬಳಿ ಬಂದಾಗ ನಾರಾಯಣ ಕೇಳಿದ,

"ಮೊದಲು ಸೀರೆಯಂಗಡಿಗೆ ಹೋಗೋಣವೋ, ಅಥವಾ ಚಪ್ಪಲಿ ಅಂಗಡಿಗೆ ಹೋಗೋಣವೋ ಮಾಲಾ ?"

"ಛಿ" ಎಂದಳು ಮಾಲತಿ, "ಈಗ ಏತಕ್ಕೆ ಇವೆಲ್ಲಾ ? ನನ್ನಲ್ಲಿರುವುದೇ ಸಾಕು."

"ಈ ವೈರಾಗ್ಯದ ಮಾತುಗಳನ್ನು ಬಿಟ್ಟುಬಿಡು ಮಾಲಾ. ನನ್ನಲ್ಲಿ ದುಡ್ಡಿಲ್ಲವೆಂದು ತಿಳಿದು ಈ ಮಾತನ್ನು ಹೇಳುತ್ತಿದ್ದೀಯೋ ? ನೋಡಿಲ್ಲಿ" ಎಂದು ನಾರಾಯಣ ಜೇಬಿನಿಂದ ನೋಟುಗಳನ್ನು ತೆಗೆದು ತೋರಿಸಿದ, "ಅವಶ್ಯಕತೆ ಇದ್ದಾಗ ಕೊಂಡುಕೊಳ್ಳುವುದಕ್ಕೆ ಹಿಂಜರಿಯಕೂಡದು."

ಹಣವನ್ನು ನೋಡಿ ಮಾಲತಿಯ ಮನಸ್ಸು ಗಲಿಬಿಲಿಯಾಯಿತು,

"ಮತ್ತೆ ಸಾಲ ಮಾಡಿದ್ದಾರೆ. ಇವರಿಗೆ ಏನು ಹೇಳುವುದು ? ಈಗ ನಾನು ಸೀರೆ ಬೇಡವೆಂದರೂ ಇನ್ನೇನಾದರೂ ಉಪಯೋಗವಿಲ್ಲದ್ದಕ್ಕೆ ಇದು ಖರ್ಚಾಗಿಬಿಡುತ್ತದೆ" ಎಂದು.

"ಎಷ್ಟು ಹೊತ್ತು ಯೋಚನೆ ಮಾಡುವುದು ಮಾಲಾ? ನನ್ನ ಮಾತು ಕೇಳಿದರೆ ಮೊದಲು ಸೀರೆಯಂಗಡಿಗೆ ಹೋಗೋಣವೆನ್ನುತ್ತೇನೆ. ಚಪ್ಪಲಿಯಿಂದೇಕೆ ಪ್ರಾರಂಭಿಸಬೇಕು?" ಎಂದ ನಾರಾಯಣ.

"ನೀವು ಹೇಳಿದಂತೆ ಕೇಳುವುದು ಸುಲಭ ನನಗೆ" ಎಂದಳು ಮಾಲತಿ.

"ಸರಿ, ಹಾಗಿದ್ದರೆ ಸೀರೆಯಂಗಡಿ ಮೊದಲು" ಎಂದ ನಾರಾಯಣ.

ನಾರಾಯಣ ಇದಕ್ಕೆ ಮೊದಲು ಎಂದೂ ಮಾಲತಿಯನ್ನು ಅಂಗಡಿಗೆ ಕರೆದೊಯ್ದಿರಲಿಲ್ಲ. ತನಗಿಷ್ಟ ಬಂದದ್ದನ್ನು ತಂದು ಕೊಡುತ್ತಿದ್ದ. ಈಗ ಹಾಗಲ್ಲ. ಅವರ ಮುಂದೆ ಸೀರೆಗಳ ರಾಶಿಯೇ ಬೀಳುತ್ತಿತ್ತು. ಆ ರಾಶಿಯನ್ನು ನೋಡಿ ಮಾಲತಿ, "ಇವು ಬೇಡ, ಬೇರೆ ಅಂಗಡಿಯಲ್ಲಿ ನೋಡೋಣ" ಎಂದಾಗ ಅವನಿಗೆ ಸಂಕೋಚವೇ ಆಯಿತು.

ಆದರೆ ಅಂಗಡಿಯವರಿಗೆ ಇದು ಸಾಮಾನ್ಯ ತಾನೇ?

"ಚಿಂತೆಯಿಲ್ಲಾಮ್ಮ ಆದರೆ ನೀವು ಮತ್ತೆ ಇಲ್ಲಿಗೇ ಬರುತ್ತೀರಿ" ಎಂದುಬಿಡುತ್ತಿದ್ದರು.

"ಮಾಲಾ, ಅಷ್ಟು ತೆಗೆಸಿ ಒಂದೂ ಕೊಳ್ಳದಿದ್ದರೆ ನ್ಯಾಯವಲ್ಲ" ಎನ್ನುತ್ತಿದ್ದ ದಾರಿಯಲ್ಲಿ ನಾರಾಯಣ.

"ಅದು ನಿತ್ಯ ಕೊಳ್ಳುವವರ ಮಾತು. ನಮಗೆ ಆದಷ್ಟು ಕಡಿಮೆ ಬೆಲೆಗೆ ಆದಷ್ಟು ಉತ್ತಮ ಪದಾರ್ಥಬೇಕು. ಅದಕ್ಕೆ ನಾಲ್ಕಂಗಡಿ ಅಲೆಯದಿದ್ದರೆ ಆಗುವುದಿಲ್ಲ"

"ಲಲಿತೆಯೂ ಹೀಗೇ ಮಾಡುತ್ತಿದ್ದಳು" ಎಂದ ನಾರಾಯಣ ತಂಗಿಯನ್ನು ನೆನೆಸಿಕೊಂಡು.

"ನಿಮಗೆ ಬೇಸರವಾದರೆ ಹೇಳಿಬಿಡಿ. ನನಗೇನು ಎಂಥ ಸೀರೆಯಾದರೂ ಅಷ್ಟೆ" ಎಂದಳು ಮಾಲತಿ ಅವನ ಮುಖದ ಮೇಲಿನ ಪರಿವರ್ತನೆಯನ್ನು ಕಂಡು.

"ಇಲ್ಲ, ನಡಿ, ಮಾಲಾ. ಲಲಿತೆಯ ನೆನಪು ಬಂದಿತು ಅಷ್ಟೆ. ಅವಳು ಹೇಗೆ ನನ್ನನ್ನು ಮರೆತಳು!"

"ಮರೆತಿಲ್ಲ. ಅದೆಲ್ಲ ಅವಳಿಗೆ ಅಸಾಧ್ಯ" ಎಂದಳು ಮಾಲತಿ.

ಮತ್ತೆ ಇನ್ನೊಂದು ಅಂಗಡಿಯ ಒಳಹೊಕ್ಕಮೇಲೆ, ಸೀರೆಯಾರಿಸುವ ಗೊಂದಲದಲ್ಲಿ ನಾರಾಯಣನ ದುಗುಡ ಮಾಯವಾಯಿತು.

ನಾರಾಯಣನ ಹಠದಿಂದ ಮಾಲತಿ ಎರಡು ಒಳ್ಳೆಯ ಸೀರೆಗಳನ್ನೇ ಕೊಂಡುಕೊಂಡಳು. ಒಳ್ಳೇ ಚಪ್ಪಲಿ ಜೊತೆ ಹೊಲೆಯಲು ಹಾಕಿ ಅವರು ಮನೆಗೆ ಹಿಂದಿರುಗುವ ವೇಳೆಗೆ ಕತ್ತಲಾಗಿತ್ತು.

ಮನೆಯಲ್ಲಿ ಅನಂತ ಬಂದು ಕುಳಿತಿದ್ದ. ಮಾಲತಿಯನ್ನು ನೋಡಿದ ತಕ್ಷಣ ಕೇಳಿದ,

"ಎಂದು ತಿಂಡಿ ಹಾಕಿಸುತ್ತೀರಿ ನನಗೆ?"

ಮಾಲತಿ ನಕ್ಕಳು. ನಾರಾಯಣ ಹೇಳಿದ,

"ನಾಡಿದ್ದು ಭಾನುವಾರ ಇಲ್ಲಿಗೇ ಊಟಕ್ಕೆ ಬಂದುಬಿಡು. ಸಂಜೆಗೆ ಬೇಕಾದರೆ ಒಂದು ಸಿನೇಮಾಗೆ ಹೋಗೋಣ"

"ಏಕೆ, ಇನ್ನೂ ಜೇಬು ಖಾಲಿಯಾಗಲಿಲ್ಲವೇ? ನನಗೆ ಅಂಗಡಿ ಬೀದಿಯಲ್ಲೇ ಸುಳಿವು ಸಿಕ್ಕಿದ್ದರೆ ಚೆನ್ನಾಗಿತ್ತು" ಎಂದಳು ಮಾಲತಿ.

ಶನಿವಾರ, ಭಾನುವಾರ ವಿನೋದವಾಗಿಯೇ ಕಳೆದುವು. ಸೋಮವಾರ ಮಾಲತಿ ನಾರಾಯಣ ಅನಂತ ಇಬ್ಬರಿಂದಲೂ ಶುಭಾಶಯಗಳನ್ನು ಹೊಂದಿ, ತಾಯಿ ಕೊಟ್ಟ ದೇವರ ಪ್ರಸಾದವನ್ನು ಮುಡಿದು ಹೊರಟಳು.

ಸಾಯಂಕಾಲ ನಾರಾಯಣ ಮನೆಗೆ ಬರುವ ಮೊದಲೇ ಮಾಲತಿ ಮನೆಗೆ ಬಂದಳು,

"ಏನು ಅಂಥ ಕಷ್ಟವಾಗುವಂತೆ ತೋರುವುದಿಲ್ಲ. ಮುಖ್ಯೋಪಾಧ್ಯಾಯಿನಿ ರಾಜಮ್ಮ ತುಂಬ ಸರಸಿಯಾಗಿ ಕಾಣುತ್ತಾರೆ. "ಇವತ್ತಿನಿಂದಲೇ ತರಗತಿಗೆ ಹೋಗುವುದು ಪ್ರಾರಂಭವಾಗಲಿ" ಎಂದು ಹತ್ತು ನಿಮಿಷ ಒಂದು ತರಗತಿಗೆ ಕಳುಹಿಸಿದ್ದರು ಅಷ್ಟೆ. ಬಳಿಕ ಉಪಾಧ್ಯಾಯಿನಿಯರ ಕೊಠಡಿಗೆ ಕರೆದುಕೊಂಡುಹೋಗಿ ಎಲ್ಲರ ಪರಿಚಯ ಮಾಡಿಸಿ

ದೆರು. ಅಲ್ಲಿ ನನ್ನ ಜೊತೆಯಲ್ಲಿ ಓದಿದವರು ಮೂರು ಮಂದಿಯಿದ್ದಾರೆ, ಚಂಚಲಾ ಎಂದು ಬಹಳ ದಿನದ ಹಿಂದೆ ನಮ್ಮ ಮನೆಗೆ ಬರುತ್ತಿದ್ದಳಲ್ಲ? ಅವಳೊಬ್ಬಳು. ಇನ್ನಿಬ್ಬರು ವಿನತಾ, ಸೀತಮ್ಮ ಅಂತ. ಇಷ್ಟು ಹೊತ್ತೂ ಅವರ ಜೊತೆಯಲ್ಲಿ ಹರಟುತ್ತಿದ್ದೆ" ಎಂದು ಒಂದೇ ಸಮನೆ ತಾಯಿಗೆ ನಡೆದುದನ್ನೆಲ್ಲಾ ಹೇಳಿದಳು.

ನಾರಾಯಣನಿಗೂ ಮನೆಗೆ ಬಂದ ಮೇಲೆ ವಿಷಯವೆಲ್ಲ ತಿಳಿಯಿತು, "ತುಂಬಾ ಆಯಾಸವಾಗಲಿಲ್ಲವಲ್ಲ? ಬದುಕಿದೆ" ಎಂದ.

ಹಿಂದೇ ಅನಂತನೂ ಬಂದ.

"ನಮಸ್ತೇ ಮೇಡಂ, ಒಳಕ್ಕೆ ಬರಬಹುದೇ?" ಎಂದು ಕೀಚಲ ಧ್ವನಿಯಲ್ಲಿ ಹುಡುಗಿಯರ ಧ್ವನಿಯಂತೆ ಇದೆಯೆಂದು ಭಾವಿಸಿಕೊಂಡು ಕೇಳಿ ಒಳನುಗ್ಗಿದ, "ಹೇಗಿತ್ತು ಅರಿಯದ ಹುಡುಗಿಯರ ಮೇಲೆ ದರ್ಬಾರು?"

"ಹುಡುಗಿಯರ ಮೇಲೆ ದರ್ಬಾರು ಮಾಡಲು ಇನ್ನೂ ಅವಕಾಶ ಸಿಕ್ಕಿಲ್ಲ ಅವಳಿಗೆ. ಸ್ವಲ್ಪ ತಡೆ ಇವತ್ತು ಆಗಲೇ ಎರಡು ಗಂಟೆ ವರದಿ ಒಪ್ಪಿಸಿದ್ದಾಳೆ, ಇನ್ನು ಮಾತನಾಡಿದರೆ ನಾಳೆ ಅವಳಿಗೆ ರಜಾ ಬೇಕಾದೀತು ಗಂಟಲು ಕಟ್ಟಿ" ಎಂದ ನಾರಾಯಣ.

ಮಾಲತಿಗೆ ನಾಚಿಗೆಯಾಯಿತು. ಎದ್ದು ಒಳಕ್ಕೆ ಹೋದಳು.

ಮೊದಲೆರಡು ದಿನಗಳು ತಮಾಷೆಯಾಗಿ ಕಳೆದರೂ ಬಳಿಕ ಮಾಲತಿಗೆ ಕೆಲಸ ಬೇಕಾದಷ್ಟು ಬೀಳತೊಡಗಿತು. ಕಂತೆಗಟ್ಟಲೆ ಪುಸ್ತಕಗಳನ್ನು ತಿದ್ದಬೇಕಾಗುತ್ತಿತ್ತು, ಜೊತೆಗೆ ಬಿಡುವೇ ಇಲ್ಲದಂತೆ ಒಂದು ತರಗತಿ ಮುಗಿದರೆ ಇನ್ನೊಂದು ತರಗತಿಗೆ ಹೋಗಬೇಕಾಗುತ್ತಿತ್ತು. ಇದರ ಮಧ್ಯೆ ಪ್ರತಿಪಾಠಕ್ಕೂ ಟೀಕೆ ಟಿಪ್ಪಣಿಗಳನ್ನು ಬರೆಯಲೇಬೇಕೆಂಬ ನಿಯಮವೂ ತಿಳಿಯಿತು. ಶಾಲೆಯಲ್ಲಿ ಎಲ್ಲವನ್ನೂ ಮಾಡಲಾಗದಿದ್ದರೆ ಮನೆಗೆ ತೆಗೆದುಕೊಂಡು ಹೋಗುತ್ತಿದ್ದಳು. ಅಲ್ಲಿ ಅವಳು ಪುಸ್ತಕಗಳನ್ನು ತಿದ್ದುತ್ತ ಕುಳಿತರೆ ನಾರಾಯಣ ಬೇಸರಗೊಳ್ಳುತ್ತಿದ್ದ,

"ಶಾಲೆಯ ಕೆಲಸ ಶಾಲೆಯಲ್ಲಿ ಮುಗಿಸಬಾರದೇ ಮಾಲಾ? ನೀನು ಇದಕ್ಕೆ ಮಿತಿಮೀರಿದ ಪ್ರಾಮುಖ್ಯತೆಯನ್ನು ಕೊಡುತ್ತೀ"

"ಹಾಗೇನಿಲ್ಲ. ಆದರೆ ಆಯಾ ವಾರದ್ದು ಆಯಾ ವಾರದಲ್ಲಿಯೇ ಮುಗಿಯಬೇಕು. ಇಲ್ಲದಿದ್ದರೆ ಮುಂದಿನ ವಾರ ಹುಡುಗಿಯರಿಗೆ ಬರೆಯಲು ಪುಸ್ತಕ ಸಿಗುವುದಿಲ್ಲ"

"ಹಾಗಿದ್ದರೆ ಸರಸರನೆ ನೋಡಿ ಬೇಗ ಮುಗಿಸಬೇಕು. ಒಂದೊಂದನ್ನೂ ಒಂದೊಂದು ಗಂಟೆ ಹಿಡಿದಿರುತ್ತೀ ನೀನು?"

"ಅದು ಏಕೆಂದರೆ ನನಗೆ ಅಭ್ಯಾಸ ಕಡಿಮೆ. ನೋಡನೋಡುತ್ತ ವೇಗ ತಾನಾಗಿ ಬರುತ್ತದೆ"

"ಅದೇನೋ ನಿನಗೇ ಗೊತ್ತು. ಬಹುಶಃ ನನ್ನ ಜೊತೆಗಿಂತ ಅದೇ ನಿನಗೆ ಹೆಚ್ಚು ಸಂತೋಷವನ್ನು ಕೊಡಬಹುದು"

ಹೀಗೇ ಎರಡು ನಿಮಿಷದಲ್ಲಿ ಮಾತು ವಿರಸಕ್ಕೆ ತಿರುಗುತ್ತಿತ್ತು. ಮಾಲತಿ ಖಿನ್ನಳಾಗಿಬಿಡುತ್ತಿದ್ದಳು. ಒಂದೊಂದು ಬಾರಿ ಅಳುವೂ ಬರುತ್ತಿತ್ತು.

"ಇದೇಕೆ ಹೀಗೆ ಮಾತನಾಡುತ್ತೀರಿ? ನನ್ನ ಜಾಗದಲ್ಲಿ ನೀವಿದ್ದಿದ್ದರೆ ಇನ್ನೇನು ಮಾಡುತ್ತಿದ್ದಿರಿ?" ಎಂದು ಕೇಳುತ್ತಿದ್ದಳು.

ನಾರಾಯಣ ಅದಕ್ಕೆ ಒಂದು ಸಲ ಹೇಳಿದ,

"ನಾನಾಗಿದ್ದರೆ ರಾತ್ರೆ ಸ್ವಲ್ಪ ಹೆಚ್ಚು ಹೊತ್ತು ಎದ್ದಿದ್ದೋ ಇಲ್ಲವೇ ಬೆಳಿಗ್ಗೆ ಹೊತ್ತಿಗೆ ಮುಂಚೆ ಎದ್ದೋ ನನ್ನ ಕೆಲಸ ನಾನು ಮಾಡಿಕೊಳ್ಳುತ್ತಿದ್ದೆ"

ಮಾಲತಿ ಅವನು ಹೇಳಿದಂತೆಯೇ ಮಾಡಲು ಯತ್ನಿಸಿದಳು. ಆದರೆ ಮನಸ್ಸು ಎದ್ದಿರಲು ಆಶಿಸಿದರೂ ಸೋತ ದೇಹ ಅದಕ್ಕೆ ಅವಕಾಶ ಕೊಡುತ್ತಿರಲಿಲ್ಲ ರಾತ್ರೆ ಹತ್ತು ಗಂಟೆಯ ವರೆಗೆ ಎದ್ದಿರುವುದೇ ಪ್ರಯಾಸಕರವಾಗಿತ್ತು. ಬೆಳಗಿನ ಝಾವ ಏಳುವುದು—ಆ ತೂಕಡಿಕೆಯಲ್ಲಿ—ಏನೂ ಉಪಯೋಗವಿರಲಿಲ್ಲ. ಆದರೂ ಹಾಗೂ ಹೀಗೂ ನಾರಾಯಣ ಮನೆಗೆ ಬರುವ ವೇಳೆಗೆ ಅದಷ್ಟು ಮುಗಿಸಲು ನೋಡುತ್ತಿದ್ದಳು. ಅವನು

ಬಂದ ಕೂಡಲೇ ಬೇಗಬೇಗನೆ ಹೆರಳು ಹಾಕಿಕೊಂಡು ನಗುಮುಖದಿಂದ ಅವನನ್ನು ಎಬ್ಬಿಸುತ್ತಿದ್ದಳು,

"ಬೇಗ ಏಳಿ, ಹೊರಗಡೆ ಹೋಗೋಣ. ಇವತ್ತು ಕೊಂಚ ಚೆನ್ನಾಗಿ ಸುತ್ತಿಕೊಂಡು ಬರೋಣ."

"ಇವತ್ತು ನಿನ್ನ ಕೆಲಸ ಬೇಗ ಮುಗಿಯಿತೇ ?"

"ಓಹೋ ಮುಗಿಸಿಬಿಟ್ಟೆ."

"ಹಾಗಾದರೆ ನಿತ್ಯ ಮುಗಿಸಬಹುದು ಎಂದಾಯಿತು ಅಲ್ಲವೇ ಮಾಲಾ ?"

ಆಗ ಮಾಲತಿ ಅಂದುಕೊಳ್ಳುತ್ತಿದ್ದಳು, "ಹುಂ ಆಯಿತು. ಸಿಕ್ಕಿ ಕೊಂಡುಬಿಟ್ಟೆ" ಆದರೂ ಸರಳವಾಗಿ ಉತ್ತರ ಕೊಟ್ಟು ಪಾರಾಗಲು ಯತ್ನಿಸುತ್ತಿದ್ದಳು,

"ಇಲ್ಲ. ಒಂದೊಂದು ಬಾರಿ ಸಾಧ್ಯವಾಗುತ್ತದೆ. ಆಗ ಮುಗಿಸು ತ್ತೇನೆ."

ನಾರಾಯಣ ನಂಬುತ್ತಿದ್ದನೋ ಇಲ್ಲವೋ ಅಂತೂ ಅವಳು ಬಿಡು ವಾಗಿದ್ದಾಗ ಮನೆಗೆ ಕಳೆ ಬರುತ್ತಿತ್ತು. ಎಲ್ಲರೂ—ವನಜಮ್ಮ ಕೂಡ— ಒಟ್ಟಿಗೆ ಸುತ್ತಾಡಿಕೊಂಡು ಬಂದು ವಿನೋದದಿಂದ ಸಂಜೆ ಕಳೆಯು ತ್ತಿದ್ದರು.

ಒಂದು ದಿನ ಬೆಳಿಗ್ಗೆ ಮಾಲತಿ ಹೇಳಿದಳು,

"ಇವತ್ತು ಹೊತ್ತಿಗೆ ಮುಂಚೆ ಬಂದುಬಿಡುತ್ತೇನೆ, ಕಬ್ಬನ್ ಪಾರ್ಕಿಗೆ ಹೋಗೋಣ."

ಸಾಯಂಕಾಲ ನಾರಾಯಣ ಮನೆಗೆ ಬಂದಾಗ ಎಲ್ಲರೂ ಸಿದ್ಧವಾ ಗಿರುತ್ತಾರೆಂದು ನಿರೀಕ್ಷಿಸಿದ್ದ. ಆದರೆ ಇನ್ನೂ ಮಾಲತಿಯೇ ಬಂದಿರಲಿಲ್ಲ.

"ಮಕ್ಕಳಿಗೆ ಬಟ್ಟೆ ಹಾಕಿಬಿಟ್ಟರೆ ಮಾಲಾ ಬಂದಕೂಡಲೆ ಹೊರಡ ಬಹುದು" ಎಂದ ನಾರಾಯಣ.

ಮಕ್ಕಳು ಸಿದ್ಧರಾದರು. ಇನ್ನೂ ಮಾಲತಿ ಬರಲಿಲ್ಲ. ಎಲ್ಲರೂ ಬಾಗಿಲಿನಲ್ಲಿಯೇ ಕುಳಿತು ಕಾಯುತ್ತಿದ್ದರು.

ಮಾಲತಿ ಮನೆಗೆ ಬಂದಾಗ ಕತ್ತಲಾಗಿತ್ತು. ಅವಳನ್ನು ಕಂಡ ಕೂಡಲೆ ನಾರಾಯಣ ಎದ್ದ,

"ನಾನು ಹೀಗೇ ಹೋಗಿ ಒಂದಿಷ್ಟು ಸುತ್ತಾಡಿಕೊಂಡು ಬರುತ್ತೇನೆ."

"ನಾನು ?" ಎಂದ ರಾಮು.

"ನೀನು ಮಾಲತಿಯ ಹತ್ತಿರ ಹೋಗು. ಅವಳು ನಿನ್ನನ್ನು ಕಬ್ಬನ್ ಪಾರ್ಕಿಗೆ ಕರೆದುಕೊಂಡು ಹೋಗುತ್ತಾಳೆ."

"ನಾನು ಬರುವುದು ತಡವಾಯಿತು. ಆದರೆ ಸುಮ್ಮನೆ ಹಾಗೆಯೇ ಸುತ್ತಾಡಲು ತಡವಿಲ್ಲವಲ್ಲ ? ನಡೆಯಿರಿ ಎಲ್ಲರೂ ಹೋಗೋಣ" ಎಂದಳು ಮಾಲತಿ.

ನಾರಾಯಣ ಹಾಗೇ ಕುಳಿತುಕೊಂಡ. ಮಾಲತಿ ಕೈಯಲ್ಲಿದ್ದ ಪುಸ್ತಕವನ್ನು ಒಳಗಡೆ ಹಾಕಿ ಬಂದಳು,

"ಹುಂ, ಏಳಿ. ಬಾ ಅಮ್ಮಾ"

ವನಜಮ್ಮ ತಲೆಯಲ್ಲಾಡಿಸಿ ಹೇಳಿದರು,

"ಅದಾಗದು ಮಾಲಾ. ಈಗತಾನೇ ಬಂದಿದ್ದೀ, ಮೊದಲು ಒಂದಿಷ್ಟು ತಿಂಡಿ ತಿನ್ನು. ಹೇಗೂ ತಡವಾಗಿದೆ; ಐದು ನಿಮಿಷದಲ್ಲಿ ಏನೂ ಕೊಳ್ಳೆ ಹೋಗುವುದಿಲ್ಲ."

ಮಾಲತಿ ನಾರಾಯಣನನ್ನು ನೋಡಿದಳು. ಅವನಿಗೆ ಏನನ್ನಿಸಿತೋ ?

"ನಿಜ, ಹೋಗು, ನಾವಿಲ್ಲೇ ಇರುತ್ತೇವೆ. ಬೇಗ ತಿಂಡಿ ತಿಂದು ಬಾ, ಹೋಗೋಣ."

ಮಾಲತಿ ಒಳಕ್ಕೆ ಹೋಗಿ ತಿಂಡಿ ತೆಗೆದುಕೊಂಡು ಹಿಂದಿರುಗಿ ಬಂದಳು,

"ಇವತ್ತು ನಾಲ್ಕು ಗಂಟೆಗೇ ನಾನು ಮನೆಗೆ ಬರಲು ಹೊರಟೆ...."

"ಏನೂ ಹೇಳಬೇಡ ಮಾಲಾ, ಬರಲಿಲ್ಲ ಹೇಗೂ. ಅಷ್ಟೇತಾನೇ ?"

ಅವನ ಧ್ವನಿಯಲ್ಲಿ ತುಂಬ ಬೇಸರವಿತ್ತು.

"ನಿಮಗೆ ಸಿಟ್ಟು ಬಂದೀತು ಎಂದುಕೊಂಡೆ ನಾನು. ಆದರೆ ಇನ್ಸ್‌ಪೆಕ್ಟರು ಬರುತ್ತಾರೆಂದು ಹೇಳಿದರು ರಜಾ ತೆಗೆದುಕೊಂಡಿದ್ದವರಿಗೂ ಸಹ ಹೇಳಿಕಳುಹಿಸಿ ಕರೆಸಿದರು. ಅದನ್ನು ನೋಡಿ ನನಗೆ, 'ಮನೆಗೆ ಹೋಗುತ್ತೇನೆ' ಎಂದು ಹೇಳಲು ಬಾಯಿ ಬರಲಿಲ್ಲ."

ನಾರಾಯಣ ಸುಮ್ಮನಿದ್ದ. ವನಜಮ್ಮ ಕೇಳಿದರು,

"ಬಂದಿದ್ದರೇನು ಅವರು?"

"ಬರಲಿಲ್ಲ. ಆರು ಗಂಟೆಯವರೆಗೂ ಅವರಿಗಾಗಿ ಕಾದೆವು. ಬಳಿಕ........" ಎಂದು ಮಾಲತಿ ನಿಟ್ಟುಸಿರನ್ನು ಬಿಟ್ಟಳು.

"ಎಷ್ಟು ಆಯಾಸಗೊಂಡಿದ್ದೀ ತಾಯಿ? ಸುತ್ತಾಡಲು ಬರುವೆಯೆನ್ನುವಿಯಲ್ಲ?"

ಮೌನದಿಂದ ಕುಳಿತಿದ್ದ ನಾರಾಯಣನ ಕಡೆಗೊಮ್ಮೆ ನೋಡಿ ಮಾಲತಿ ನುಡಿದಳು,

"ಆಯಾಸವಿಲ್ಲಮ್ಮ, ಬರೀ ಬೇಸರ ಅಷ್ಟೆ. ಏಳಿ, ಹೋಗೋಣ ಇನ್ನು."

ಮನೆಯಿಂದ ಹೊರಟರು. ಯಾರಿಗೂ ಮಾತು ಬೇಕಿರಲಿಲ್ಲ. ನಾರಾಯಣ ಚಿಕ್ಕಮಗುವನ್ನು ಎತ್ತಿಕೊಂಡು ಮುಂದೆ ಮುಂದೆ ಹೋಗುತ್ತಿದ್ದ. ಮಾಲತಿ ನಡೆಯಲಾರದೆ ನಡೆಯುತ್ತಿದ್ದಳು. ಇನ್ನು ವನಜಮ್ಮ ಅವರಿಗೆ ಏನೋ ದುಃಖ ಕರುಳನ್ನು ಕಿವುಚುತ್ತಿತ್ತು. ಮೊಮ್ಮಗನ ಕೈ ಹಿಡಿದು ಮಾತನಾಡಿದರೆ ಅದೆಲ್ಲಿ ಈಚೆಗೆ ಬರುವುದೋ ಎಂದು ಆಕೆ ಇವರನ್ನು ಹಿಂಬಾಲಿಸುತ್ತಿದ್ದರು.

ಆ ರಾತ್ರಿಯ ಊಟವೂ ಬರಿಯ ಶಾಸ್ತ್ರದ ಊಟವಾಯಿತು. ನಾರಾಯಣ ಊಟವಾಗುತ್ತಲೇ ಮಲಗಿಬಿಟ್ಟ. ಮಾಲತಿಗೆ ಮನಸ್ಸಿಲ್ಲದಿದ್ದರೂ ಮರುದಿನದ ಪಾಠದ ಕ್ರಮ ಬರೆಯುವುದು ಇತ್ತು. ಅದನ್ನು ಮಾಡುತ್ತ ಕುಳಿತಳು. ಅದು ನಿಧಾನವಾಗಿ ಸಾಗಿತು. ಅವಳು ಅವತ್ತು ಮಲಗುವಾಗ ಹನ್ನೆರಡು ಗಂಟೆ ಹೊಡೆದುಬಿಟ್ಟಿತ್ತು.

ಮರುದಿವಸ ಬೆಳಿಗ್ಗೆಯ ಹೊತ್ತಿಗೆ ನಾರಾಯಣನ ಅಸಮಾಧಾನ ಸ್ವಲ್ಪ ಕಡಿಮೆಯಾಗಿತ್ತು. ಮಾಲತಿ ಕಾಫಿಯನ್ನು ತಂದುಕೊಟ್ಟಾಗ ನಸ ನಗೆಯಿಂದ ಹೇಳಿದ,

"ಇವತ್ತು ಬರಬಹುದು ನಿಮ್ಮ ಇನ್ಸ್‌ಪೆಕ್ಟರು."

"ಏನೋ ಯಾರಿಗೆ ಗೊತ್ತು?" ಎಂದಳು ಮಾಲತಿ, "ಆದರೆ ಪುನಃ ಸಿಟ್ಟಾಗುವಿರೇನು ?"

ನಾರಾಯಣ ಗಟ್ಟಿಯಾಗಿ ನಕ್ಕ.

"ನೆನ್ನೆ ಮಾತನಾಡಲಿಲ್ಲವೆಂದು ಹೇಳುತ್ತಿದ್ದೀಯಾ ಮಾಲಾ? ನೆನ್ನೆ ನನಗೆ ಸಿಟ್ಟು ಬಂದಿರಲಿಲ್ಲ. ಆಶಾಭಂಗವಾದಂತೆ ಆಗಿ ಮನಸ್ಸು ಮುದುರಿಕೊಂಡಿತ್ತು. ನಾಲ್ಕು ಗಂಟೆಯಿಂದ ನಿನಗಾಗಿ ಕಾದು ಕುಳಿತಿದ್ದೆ ಮಾಲಾ. ನೀನು ಬಂದೊಡನೆ ಏಕೋ ನನಗೆ ಸಹಜರೀತಿಯಿಂದ ಇರಲಾಗಲಿಲ್ಲ."

"ನೀವು ಹಾಗೆ ಮಾಡಿದ್ದು ನನಗೆ ಅರ್ಧಜೀವಹೋದಂತೆ ಆಯಿತು. ಸದ್ಯ ಈಗ ನಿಮಗೆ ಕೋಪ ಇಲ್ಲ ತಾನೇ ?"

"ಇಲ್ಲ, ನಿನ್ನ ಮೇಲೆ ಕೋಪ ಎಂದೂ ಬರುವುದಿಲ್ಲ ಮಾಲಾ. ಅದೂ ನೆನ್ನೆ ನಿನ್ನ ತಪ್ಪು ಸ್ವಲ್ಪವೂ ಇರಲಿಲ್ಲ."

"ಅಬ್ಬ! ಅಂತೂ ಪ್ರಸನ್ನರಾದಿರಿ"

"ಇನ್ನು ಮೇಲೆ ಮಾಲಾ, ನಿನ್ನ ಜೊತೆಯಲ್ಲಿ ನಾನು ಹೀಗೆ ವರ್ತಿಸಿದರೆ ನನ್ನ ಕೋಟನ್ನು ಹಿಡಿದು ಕೇಳು, "ನನ್ನ ತಪ್ಪೇನು? ಹೇಳು ಮೊದಲು" ಅಂತ.

"ಆಗಲಿ" ಎಂದಳು ಮಾಲತಿ.

ಮಾಲತಿ ಹೀಗೆ ಮನೆಯಲ್ಲಿ ಒದ್ದಾಟಪಡುವುದು ಶಾಲೆಯಲ್ಲಿ ಯಾರಿಗೂ ತಿಳಿದಿರಲಿಲ್ಲ. ಅವಳಾದರೂ ಅಷ್ಟೆ. ಆ ವಾತಾವರಣದಲ್ಲಿ ಮನೆಯ ಅಶಾಂತತೆ ಮರೆತು ಎಲ್ಲರೊಡನೆ ಒಂದಾಗಿ ಬೆರೆಯುತ್ತಿದ್ದಳು. ಆದರೆ ಸಂಜೆ ನಾಲ್ಕೂವರೆಯಾಯಿತೆಂದರೆ ಅವಳಿಗೆ ಮನೆಯ ಕಡೆ ಗಮನ ತಿರುಗುತ್ತಿತ್ತು.

"ಓ ಮಾಲತಿದೇವಿ ಅಂತರ್ಮುಖರಾದರು" ಎಂದು ತಮಾಷೆ ಮಾಡುತ್ತಿದ್ದರು ಎಲ್ಲರೂ.

"ಹೌದು ಮತ್ತೆ ಅವರು ನಮ್ಮಂತೆ ಎಂದು ತಿಳಿದಿರಾ? ಮನೆಯಲ್ಲಿ ಇಬ್ಬರು ಕಾದಿರುತ್ತಾರೆ ಸುತ್ತೋದಕ್ಕೆ ಗಾಳಿ ವಿಹಾರಕ್ಕೆ—ಕರೆದುಕೊಂಡು ಹೋಗಲು"

"ಅಲ್ಲದೆ ಚಿಕ್ಕಮಗು!"

"ತಾಯಿ ಬೆಳಗಿನಿಂದ ಬಿಟ್ಟಿರುತ್ತಾರೆ"

ಅಂತೂ ತಲೆಗೊಂದು ಮಾತನಾಡಿ ಮಾಲತಿಯನ್ನು ಕೀಟಲೆ ಮಾಡದೆ ಅವಳನ್ನು ಮನೆಗೆ ಹೋಗಲು ಬಿಡುತ್ತಿರಲಿಲ್ಲ

ಒಂದು ಬಾರಿ ಮಾಲತಿ ಶಾಲೆಯಿಂದ ಹೊರಡುವ ಹೊತ್ತಿಗೆ ಸರಿಯಾಗಿ ರಾಜಮ್ಮ, ಮುಖ್ಯೋಪಾಧ್ಯಾಯಿನಿ ಸಿಕ್ಕಿದರು,

"ಏನು ಇಷ್ಟು ಬೇಗನೆ ಮನೆಗೆ ಹೊರಟಿರಾ? ಆಟವಾಡುವು ದಿಲ್ಲವೇ?" ಎಂದರವರು. ಮಾಲತಿ ವಿನಯದಿಂದ ಹೇಳಿದಳು,

"ಇಲ್ಲ, ಹೋಗಬೇಕು. ಚಿಕ್ಕಮಗುವನ್ನು ಬಿಟ್ಟುಬಂದಿದ್ದೇನೆ".

"ಓ! ನನಗೆಲ್ಲಾ ಗೊತ್ತು. ನೀವೊಬ್ಬರೇ ಸಂಸಾರಸ್ಥರು ಇಷ್ಟು ಜನ ಉಪಾಧ್ಯಾಯಿನಿಯರಲ್ಲಿ ಎನ್ನುವಂತೆ ಆಡುತ್ತೀರಿ. ಇವತ್ತು ನಿಮ್ಮನ್ನು ಮನೆಗೆ ಹೋಗಲು ಬಿಡುವುದಿಲ್ಲ. ಸ್ವಲ್ಪ ಆಟ ಆಡಿಯೇ ಹೋಗಬೇಕು ನೀವು"

"ಇವತ್ತು ಬೇಡ. ನಾಳೆ ಆಡೋಣ. ನಾನು ಮನೆಯಲ್ಲಿ ಹೇಳಿ ಬರುತ್ತೇನೆ"

"ಅಬ್ಬಬ್ಬ! ಬಹಳ ಹೆದರುವಂತೆ ಕಾಣುತ್ತದೆ ಮನೆಯನ್ನು ಕಂಡರೆ! ನನಗೆ ಗೊತ್ತಮ್ಮಾ, ಮನೆಯಲ್ಲಿ ಅವರು ನೀವು "ಕೂಡು" ಅಂದರೆ ಕೂಡುತ್ತಾರೆ, "ನಿಲ್ಲು" ಎಂದರೆ ನಿಲ್ಲುತ್ತಾರೆ ಅಂತ ಆಗುವುದಿಲ್ಲ. ಇವತ್ತು ಇರಲೇಬೇಕು ನೀವು. ನಾಳೆ ಹೇಳಿ ಬನ್ನಿ, ನಾಳೆಯೂ ಇರಿ, ಬೇಡವೆನ್ನುವುದಿಲ್ಲ."

ಅಷ್ಟು ಹೊತ್ತಿಗೆ ಉಳಿದ ಉಪಾಧ್ಯಾಯಿನಿಯರೂ ಬಂದರು,

"ಸಿಕ್ಕಿಬಿದ್ದಿಲ್ಲ ಇವತ್ತು! ಪಾಪ! ಚಿಂತೆಯಿಲ್ಲ ಮಾಲತಿದೇವಿ. ರಾತ್ರಿಹೊತ್ತು ತಿರುಗಾಡುವುದಕ್ಕೆ ತಂಪಾಗಿರುತ್ತೆ" ಎಂದು ಹಾಸ್ಯಮಾಡಿದನು. ಅವತ್ತು ಆಟ ಮುಗಿದು ಮಾಲತಿ ಮನೆಗೆ ಬರಲಾಗಿದ್ದು ದೀಪಹಚ್ಚಿದ ಮೇಲೇ. ಮನೆಯಲ್ಲಿ ನಾರಾಯಣನಿರಲಿಲ್ಲ.

"ಇಷ್ಟೇ ತಾನೇ ಹೊರಗೆ ಹೋದರು. ಅವರಿಗೆ ತುಂಬ ಕೋಪ ಬಂದಿದೆ ಮಾಲಾ. ನೀನು ಬೇಗನೆ ಮನೆಗೆ ಬರಬಾರದೆ?" ಎಂದರು ಪದ್ಮಜಮ್ಮ.

"ನಾನೇನು ಮಾಡಲಮ್ಮ? ರಾಜಮ್ಮ ಬಿಡಲಿಲ್ಲ" ಎಂದಳು ಮಾಲತಿ

ನಾರಾಯಣ ರಾತ್ರಿ ಒಂಭತ್ತು ಗಂಟೆಗೆ ಮನೆಗೆ ಬಂದ. ಬಂದವನೇ ನೆಟ್ಟಗೆ ಹೋಗಿ ಮಲಗಿದ

ಮಾಲತಿ ಅವನ ಕೊಠಡಿಯೊಳಗೆ ಹೋಗಿ ಒಂದು ಕುರ್ಚಿ ಎಳೆದು ಕುಳಿತುಕೊಂಡು ಹೇಳಿದಳು,

"ಇವತ್ತು "ಕೋಟು ಹಿಡಿದು ಸಿಲ್ಲಿಸಿ ಕೇಳು" ಅಂದಿರಿ. ನಾನು ಅಷ್ಟು ಸಲಿಗಗೂ ಹೋಗದೆ ಕೇಳುತ್ತೇನೆ, ಹೇಳಿ. ಏಕಿಷ್ಟು ಕೋಪ?"

ನಾರಾಯಣ ಈ ಮಾತನ್ನು ಕೇಳಿದೊಡನೆಯೇ ನಗುವನೆಂದು ಅವಳು ಭಾವಿಸಿದ್ದಳು, ಅವನು ನಗಲಿಲ್ಲ. ಸ್ವಲ್ಪ ಹೊತ್ತು ಸುಮ್ಮನಿದ್ದು ಬಳಿಕ ಕೇಳಿದ, —

"ಎಷ್ಟು ಹೊತ್ತಿಗೆ ಬಂದೆ ಮನೆಗೆ?"

"ಹತ್ತಿರ ಹತ್ತಿರ ಏಳುಗಂಟೆ".

"ಸರಿ. ಏತಕ್ಕೆ ಅಷ್ಟು ಹೊತ್ತು?"

ಪ್ರಶ್ನೆ ಬಂದಮೇಲೆ ಉತ್ತರ ಹೇಳುವುದು ಕಷ್ಟವಾಗಲಿಲ್ಲ ಮಾಲತಿಗೆ. ಶಾಲೆಯಲ್ಲಿ ಎಲ್ಲರೂ ಅವಳನ್ನು ಹಾಸ್ಯಮಾಡುವ ರೀತಿಯನ್ನು ಕೇಳಿದಾಗ ಅವನ ಹುಬ್ಬುಗಂಟು ತುಸು ಬಿಚ್ಚಿತು.

"ಮತ್ತೆ ಇನ್ನು ಹೇಗಿರಬೇಕಂತೆ? ನಿಜವಾದ ಸಂಸಾರಸ್ಥರು

ಮನೆಗೆ ಬರದೆ ಆಟಕ್ಕೆ ನಿಲ್ಲುವರೇ? ಎಷ್ಟು ಜನ ಸಂಸಾರಸ್ಥರಿದ್ದಾರೆ ನಿಮ್ಮ ಶಾಲೆಯ ಉಪಾಧ್ಯಾಯಿನೀ ವರ್ಗದಲ್ಲಿ?"

"ಹತ್ತು ಹನ್ನೆರಡು ಮಂದಿ ಇದ್ದಾರೆ"

"ಪಾಪ! ಅವರ ಮನೆಗಳ ಅವಸ್ಥೆ ಬಹಳ ಚೆನ್ನಾಗಿರಬೇಕು ಇಂಥ ತಾಯಿಯರು, ಪತ್ನಿಯರು ಇದ್ದಮೇಲೆ!" ಎಂದು ನಾರಾಯಣ ಹೇಳಿದ, "ನಮ್ಮ ಮನೆಯ ಸೌಖ್ಯ ಉಳಿಯಬೇಕಾದರೆ ಮಾಲತಿ, ನೀನು ಅವರನ್ನು ಅನುಸರಿಸಕೂಡದು"

"ಅನುಸರಿಸುತ್ತೀನೆಯೆ? ಹೀಗೆ ಒದ್ದಾಡಿಸಿದರೆ ಏನು ಮಾಡಲಿ?"

"ಅನಿವಾರ್ಯವಾಗದಿದ್ದರೆ ಬಂದುಬಿಡು ಅಷ್ಟೇ" ಸಣ್ಣಗೆ ನಗುತ್ತ ನಾರಾಯಣ ಹೇಳಿದ.

ಮಾಲತಿಯ ತಲೆಯ ಮೇಲಿಂದ ಒಂದು ಭಾರ ಇಳಿಸಿದಂತಾಯಿತು. ಸಮಾಧಾನದಿಂದ ಎದ್ದಳು.

ಆದರೆ ಮಾಲತಿ ಎಷ್ಟು ಪ್ರಯತ್ನಪಟ್ಟರೂ ಒಂದೊಂದು ಬಾರಿ ಅವಳು ಶಾಲೆಯಲ್ಲೇ ಹೆಚ್ಚು ಹೊತ್ತು ನಿಲ್ಲಬೇಕಾಗುತ್ತಿತ್ತು. ಆಗ ಮುಂಚೆಯೇ ಮನೆಯಲ್ಲಿ ಹೇಳಿಬಿಡುತ್ತಿದ್ದಳು.

ಒಂದು ಬಾರಿ ಹೈಸ್ಕೂಲಿನ ಮೂರನೆ ತರಗತಿಯವರು ಉಪಾಧ್ಯಾಯ ವರ್ಗಕ್ಕೆ ತಿಂಡಿಯನ್ನೇರ್ಪಡಿಸಿದ್ದರು. ಅವತ್ತು ಮನೆಯಿಂದ ಹೊರಡುವಾಗ ಮಾಲತಿಗೆ ಮರೆತುಹೋಯಿತು, "ಬರುವುದು ಹೊತ್ತಾಗುತ್ತೆ" ಎಂದು ಹೇಳಲು. ಶಾಲೆಯಲ್ಲಿ ನೆನಪಿಗೆ ಬಂದಿತು. ಆಳೊಬ್ಬನನ್ನು ಕಳುಹಿಸಿ ತಿಳಿಸಲು ಯತ್ನಿಸಿದಳು. ಅದೂ ಸಾಧ್ಯವಾಗಲಿಲ್ಲ. ಮನೆಗೆ ಹೊರಟುಬಿಡೋಣವೆಂದರೆ ಹುಡುಗಿಯರು ಬಿಡಬೇಕಲ್ಲ?

ಹರಟೆಯ ಮಧ್ಯೆ ತಿಂಡಿ ತಿನ್ನುವುದು ಆರುಗಂಟೆಯವರೆಗೂ ನಡೆಯಿತು. ಅದಾದಮೇಲೆ ಹುಡುಗಿಯರು "ನಾಟಕ" "ನೃತ್ಯ" ಎಂದು ಏನೇನೋ ಕಾರ್ಯಕ್ರಮ ಹಾಕಿಕೊಂಡಿದ್ದರು.

ಮಾಲತಿಗೆ ಮನಸ್ಸಿನಲ್ಲಿ ಆತಂಕ ತುಂಬಿಕೊಂಡುಬಿಟ್ಟಿತ್ತು. ಎಲ್ಲ

ರಂತೆ ನಗುನಗುತ್ತ ಇರಲು ಸಾಧ್ಯವಾಗದಿದ್ದರೂ, ಇತರರು ಹಾಸ್ಯಮಾಡಿ ಯಾರೆಂಬ ಭಯದಿಂದ ಹಸನ್ಮುಖಿಯಾಗಿರಲು ಯತ್ನಿಸುತ್ತಿದ್ದಳು.

ಹುಡುಗಿಯರು ಸುಮಾರಾಗಿ ಚೆನ್ನಾಗಿಯೇ ನಾಟಕವನ್ನು ಆಡಿದರು. ನೃತ್ಯ ಪ್ರಾರಂಭವಾಯಿತು.

ಅಷ್ಟು ಹೊತ್ತಿಗೆ ಯಾರೋ ಬಂದು ಮಾಲತಿಯನ್ನು ಕರೆದರು,

"ನಿಮ್ಮನ್ನು ಯಾರೋ ಹುಡುಕಿಕೊಂಡು ಬಂದಿದ್ದಾರೆ"

ಜೊತೆಯಲ್ಲಿ ಕುಳಿತಿದ್ದವರ ನಗುವನ್ನು ಲಕ್ಷಿಸದೆ ಮಾಲತಿ ತಟ್ಟನೆದ್ದು ಹೊರಗಡೆ ಹೋದಳು.

ಉಪಾಧ್ಯಾಯಿನಿಯರ ಕೊಠಡಿಯ ಬಳಿಯಲ್ಲಿ ಎಲ್ಲೋ ನೋಡುತ್ತ ನಾರಾಯಣ ನಿಂತಿದ್ದ.

"ಓ! ನೀವೇ ಇರಬೇಕು ಎಂದುಕೊಂಡೆ"

ನಾರಾಯಣನಿಗೆ ನಗು ಬಂದಿತು,

"ಇನ್ನು ಯಾರು ಬರುತ್ತಾರೆ ನಿನಗಾಗಿ? ನಾನು. ಇಲ್ಲವೆ ನಿಮ್ಮಮ್ಮ. ಇನ್ನು ಕೆಲವು ವರ್ಷಗಳಾದ ಮೇಲೆ ನಿನ್ನ ಕುಮಾರರು."

"ಕೋಪ ಬರಲಿಲ್ಲವೆ?" ಮಾಲತಿ ಕೇಳಿದಳು,

"ನಿನ್ನ ಮುದಿಸ್ನೇಹಿತೆಯರನ್ನು ದಬಾಯಿಸಿ ಆಟದಿಂದ ನಿನ್ನನ್ನು ತಿರುಗಾಟಕ್ಕೆ ಕರೆದುಕೊಂಡು ಹೋಗಲು ಬಂದೆ. ಈಗ........ಬರುತ್ತೀಯೋ ಇಲ್ಲವೇ ಇನ್ನೂ ಇರುತ್ತೀಯೋ?"

"ಇನ್ನೇನು ಇರುವುದು? ಮನೆಗೆ ಹೋಗೋಣ" ಎಂದಳು ಮಾಲತಿ.

ನಿಧಾನವಾಗಿ ಮನೆಯಕಡೆ ಹೊರಟರು ಇಬ್ಬರೂ. ದಾರಿಯಲ್ಲಿ ನಾರಾಯಣ ಹೇಳಿದ,

"ನನಗೆ ಕೋಪ ಬರಲಿಲ್ಲವೇ ಎಂದು ವಿಚಾರಿಸಿದಿ ಮಾಲಾ. ನಾನು ಇವತ್ತು ಮನಸ್ಸು ಮಾಡಿದ್ದೇನೆ. ನಾನು ಇನ್ನುಮೇಲೆ ನಿನ್ನ ಮೇಲೆ ಸ್ವಲ್ಪ ಅಸಮಾಧಾನವನ್ನೂ ತೋರಿಸುವುದಿಲ್ಲ"

"ನೋಡೋಣ ಎಷ್ಟು ದಿವಸ ಇರುತ್ತೆ ಆ ಮನಸ್ಸು ಎಂದು"

"ಹಾಗೇ ಅಂತ ನನ್ನನ್ನ ರೇಗಿಸಲು ಹೋಗಬೇಡ ನೀನು ಮಾಲಾ"

"ಉಂಟೆ? ನನಗೆ ನಾಲ್ಕುದಿನ ಬದುಕಿರಲು ಆಶೆ ಇದೆ" ಎಂದಳು ಮಾಲತಿ.

ಅಳಿಯ ಮನೆಯಿಂದ ಹೊರಟಾಗ ಚಿಂತಿತರಾಗಿದ್ದ ವನಜಮ್ಮ ಪ್ರಸನ್ನತೆಯಿಂದ ಮನೆಗೆ ಬಂದ ಇವರಿಬ್ಬರನ್ನೂ ನೋಡಿ ಸಮಾಧಾನ ಪಟ್ಟು, ಎಲೆ ಹಾಕಿದರು.

ನಾರಾಯಣನ ನಿಶ್ಚಯವನ್ನು ಪರೀಕ್ಷಿಸುವ ಸಂದರ್ಭ ಮತ್ತೆ ಬರುವಂತೆ ಕಾಣಲಿಲ್ಲ.

ಮಾಲತಿ ಕೆಲಸಕ್ಕೆ ಸೇರಿ ನಾಲ್ಕು ತಿಂಗಳಾಗಿದ್ದುವು. ನಾರಾಯಣ ನಿಗೆ ಒಂದು ದಿನ ಇದ್ದಕ್ಕಿದ್ದಂತೆ ಒಂದು ಪತ್ರ ಬಂದಿತು. ಅದನ್ನು ಬರೆದವರು ನಾರಾಯಣನ ಬಹು ದೂರದ ಸೋದರ ಮಾವಂದಿರೊಬ್ಬರು "...... ...... ನೀನು ಗೋವಿಂದಪ್ಪನವರೊಡನೆ ಜಗಳವಾಡಿದ್ದು ತಿಳಿಯಿತು. ಎಲ್ಲಿದ್ದೀಯೆಂದು ಗೊತ್ತಾಗುವುದು ತಡವಾಯಿತು. ನಿನ್ನ ಯೋಗಕ್ಷೇಮವನ್ನು ತಿಳಿಯಲು ತುಂಬ ಆತುರವಾಗಿದೆ, ಬೇಗ ತಿಳಿಸು .......ನನ್ನ ಅಳಿಯ ರಾಘವಯ್ಯ ಬೆಂಗಳೂರಿನಲ್ಲಿದ್ದಾರೆ. ಅವರಿಗೂ ಬರೆದಿದ್ದೇನೆ. ಅವರು ಬಂದು ನಿನ್ನನ್ನು ನೋಡಿದರೆ ಸರಿ, ಇಲ್ಲವಾದರೆ ನೀನೇ ಅವರನ್ನು ಹೋಗಿ ನೋಡು. ನಮ್ಮ ತಮ್ಮವರು ಗೊತ್ತಿದ್ದರೆ ಒಳ್ಳೆಯದು........" ಎಂದು ಮುಂತಾಗಿ ಬರೆದಿದ್ದರು. ಪತ್ರದ ಕೆಳಗೆ ರಾಘವಯ್ಯನವರ ವಿಳಾಸವೂ ಇತ್ತು.

"ತಾಯಿ ತಂಗಿಯರೇ ದೂರವಾದಮೇಲೆ ಇನ್ನುಳಿದ ನೆಂಟಸ್ಥಿಕೆಯಿಂದ ನನಗೇನು? ಮನೆಗೆ ಬಂದರೆ ಯಾರಾದರೂ ಆಗ ಮಾತನಾಡ ಬೇಕಾಗುತ್ತೆ; ಅದಕ್ಕೆ ನನ್ನದೇನು ಆಕ್ಷೇಪಣೆ ಇಲ್ಲ. ಆದರೆ ನಾನು ಇವರಿಗೆ ಪತ್ರ ಬರೆಯೋದೂ ಇಲ್ಲ ಅವರನ್ನು ಹೋಗಿ ನೋಡುವುದೂ ಇಲ್ಲ". ಎಂದ ನಾರಾಯಣ.

"ಹಾಗೆಲ್ಲ ಅನ್ನಬಾರದು. ಒಂದು ಕಾಗದ ಬರೆದರೆ ಏನು ಹೋಗುತ್ತೆ? ಅವರು ನಿಮಗೆ ಬರೆದ ಪ್ರಾರ್ಥನೆಗೆ ನೀವು ಉತ್ತರ ಬರೆಯಬೇಕು" ಎಂದಳು ಮಾಲತಿ.

"ಕನಸು ನಿನಗೆ" ಎಂದು ಸುಮ್ಮನಾಗಿಬಿಟ್ಟ ನಾರಾಯಣ.

ಕಾಗದ ಬಂದು ಎರಡುಮೂರು ದಿನಗಳಾದಮೇಲೆ ರಾಘವಯ್ಯ ಎನ್ನುವವರೇ ಬಂದರು.

ಅವರು ಬಂದಾಗ ನಾರಾಯಣ ಮನೆಯಲ್ಲಿರಲಿಲ್ಲ; ಮಾಲತಿಯೂ ಇರಲಿಲ್ಲ. ಅವರು ವನಜಮ್ಮನಿಗೇ ಹೇಳಿಹೋದರು,

"ಈ ಭಾನುವಾರ ಇಬ್ಬರೂ ನಮ್ಮ ಮನೆಗೆ ಊಟಕ್ಕೆ ಬರಬೇಕು ಎಂದು ಕರೆದೆನೆಂದು ಹೇಳೀಮ್ಮ. ಆದರೆ ಮತ್ತೊಮ್ಮೆ ಬರುತ್ತೇನೆ. ಇಲ್ಲದಿದ್ದರೆ ಇದೇ ಹಸ್ತಪೂರ್ವಕವಾದ ಆಹ್ವಾನವೆಂದು ತಿಳಿದು ಬರಬೇಕೆಂದು ಹೇಳಿ."

ವನಜಮ್ಮ ಹೇಳಿದ ಮಾತನ್ನು ಕೇಳಿ ಮಾಲತಿಗೆ ಸ್ವಲ್ಪ ಸಂತೋಷವೇ ಆಯಿತು. "ಎಷ್ಟು ಒಳ್ಳೆಯ ಜನ? ಮುಖ ನೋಡುವುದಕ್ಕೆ ಮುಂಚೆ ಊಟಕ್ಕೆ ಕರೆದಿದ್ದಾರೆ ನೀವು ಆಗುವುದಿಲ್ಲವೆನ್ನ ಕೂಡದು" ಎಂದು ನಾರಾಯಣನಿಗೆ ಹೇಳಿದಳು.

ಅವನಿಗೆ ಇಷ್ಟವಿರಲಿಲ್ಲವಾದರೂ ಮಾಲತಿಯ ಮನಸ್ಸನ್ನು ನೋಯಿಸಲಾರದೆ ಒಪ್ಪಿಕೊಂಡ,

"ಆಗಲಿ, ಭಾನುವಾರತಾನೇ ಹೋಗೋದು! ಅದಕ್ಕೆ ಈಗಲಿಂದ ಪೀಠಿಕೆ ಹಾಕುವುದೇನು?"

ಈ ಮಧ್ಯೆ ಅನಂತನ ಮದುವೆಯೊಂದು ನಿಶ್ಚಯವಾಯಿತು. ಅವನು,

"ಒಳ್ಳೆಯ ಮಾತಿನಿಂದ ಇಬ್ಬರೂ ನಾಲ್ಕು ದಿನ ರಜೆ ತೆಗೆದುಕೊಂಡು ಬಂದಿರೋ ಸವು. ಇಲ್ಲದಿದ್ದರೆ ವರನೇ ಹೋಗುವುದಿಲ್ಲ ಮದುವೆಗೆ" ಎಂದು ಬೆದರಿಕೆ ಹಾಕಿದ್ದ.

"ನೀವು ಕರೆಯದೆ ಇದ್ದರೂ ಬರುತ್ತಿದ್ದೆವು. ಇನ್ನು ಈಗ ಬಿಡುತ್ತೇವೆಯೇ?" ಎಂದು ಮಾಲತಿ ಜ್ಞಾಪನೆ ಕೊಟ್ಟಿದ್ದಳು.

"ಯಾರಾದರೂ ಕರೆದರೆ ಸಾಕೆಂದು ಕಾದಿರುತ್ತೀ ನೀನು ಮಾಲಾ. ಕೈ ತುಂಬ ಕೆಲಸ, ಎಲ್ಲ ಕಡೆಗೂ ಹೋಗುವ ಆಸೆ" ಎಂದು ಹಾಸ್ಯ ಮಾಡಿದ ನಾರಾಯಣ.

ಭಾನುವಾರ ಮಾಲತಿ-ನಾರಾಯಣ ಇಬ್ಬರೂ ರಾಘವಯ್ಯನವರ ಮನೆಗೆ ಹೊರಟರು. ಅವರ ಮನೆಯೂ ಮಲ್ಲೇಶ್ವರದಲ್ಲಿ ಇತ್ತು. ದೊಡ್ಡ ಮನೆ, ಸುತ್ತಲೂ ತೋಟ, ಬಾಗಿಲ ಬಳಿ ಜವಾನ.

ಸ್ವತಃ ರಾಘವಯ್ಯನವರೇ ಬಂದು ಇವರನ್ನು ಸ್ವಾಗತಿಸಿದರು, ಒಳಕ್ಕೆ ಕರೆದುಕೊಂಡು ಹೋಗಿ ಕೂಡಿಸಿದರು,

"ಮುಖತಃ ನಮ್ಮನಮಗೆ ಪರಿಚಯ ಕಡಿಮೆಯಾದ್ದರಿಂದ ನೀವು ಬರುವಿರೋ ಇಲ್ಲವೋ ಎಂದು ನನಗೆ ಅನುಮಾನ ಬಂದುಬಿಟ್ಟಿತ್ತು. ಮತ್ತೆ ಬರೋಣವೆಂದರೆ ಏನೋ ಅಸಂದರ್ಭ ಒದಗಿತು........" ಎಂದು ಬಾಯ್ತುಂಬ ಮಾತನಾಡಿದರು.

ನಾರಾಯಣನೂ ಮಾತಿನಲ್ಲಿ ಏನು ಕಡಿಮೆ ಇಲ್ಲ.

"ನೀವು ಮನೆಯವರೆಗೂ ಬಂದು ಕರೆದಿರುವಾಗ ಬರದಿರಲು ನಮಗೆ ಸಾಧ್ಯವೇ? ಮಾಲಾ, ಅದೇ ಹೇಳಿಬಿಟ್ಟಳು, ಈ ಆಹ್ವಾನ ತಿರಸ್ಕೃತವಾಗತಕ್ಕದ್ದಲ್ಲವೆಂದು"

"ಮಾಲಾ ಯಾರು?" ಆತ ಕೇಳಿದರು.

ಅವರ ಧ್ವನಿಯಲ್ಲಿ ಒಂದು ವಿಧವಾದ ಕಂಡೂ ಕಾಣದಂತಿದ್ದ ತೀಕ್ಷ್ಣತೆಯಿತ್ತು. ಮಾಲತಿಗೆ ಇದು ವ್ಯಕ್ತವಾದರೂ ನಾರಾಯಣನಿಗೆ ತಿಳಿಯಲಿಲ್ಲ.

"ನನ್ನ ಪತ್ನಿ ಮಾಲತಿ ಇವಳು. ಮಾಲಾ ಎಂದು ನಾನು ಕರೆಯುತ್ತೇನಷ್ಟೆ."

ರಾಘವಯ್ಯ ವೃದ್ಧರೆಂದೇ ಹೇಳಬಹುದಾಗಿತ್ತು. ನಾರಾಯಣನಿಗೆ ಅವರಲ್ಲಿ ಸಂಕೋಚಪಡಲು ಏನೂ ಕಾರಣ ಸಿಗಲಿಲ್ಲ.

"ಸಂತೋಷ ಸೌಖ್ಯದಿಂದ ಇರಿ. ಅಷ್ಟುತಾನೇ ಮುಖ್ಯ?" ಎಂದು ಯಾರನ್ನೋ ಸಮಾಧಾನ ಪಡಿಸುವಂತೆ ಅವರು ಹೇಳಿದರು, "ನನಗೂ ಒಬ್ಬನೇ ಮಗ. ಅವನಿಗೆ ಉತ್ತಮಳಾದ ಕನ್ಯೆ ಸಿಗಬೇಕು. ಅದೇ ಕಷ್ಟ."

"ನನಗೆ ಕಷ್ಟವಾಗಲಿಲ್ಲ" ಎಂದು ನಾರಾಯಣ ನಕ್ಕ.

ಓರೆಗಣ್ಣಿನಲ್ಲಿ ಮಾಲತಿಯ ಕಡೆ ನೋಡಿ ರಾಘವಯ್ಯ ನುಡಿದರು,

"ಸ್ವಾಮಿಯ ಲೀಲೆ ವಿಚಿತ್ರವಾದದ್ದು"

ಮಾಲತಿಗೆ ಈ ಮಾತು ಪ್ರಾರಂಭಿಸಿದಾಗಲೇ ಅನ್ನಿಸತೊಡಗಿತು, "ನಾನು ಬರಬಾರದಾಗಿತ್ತು" ಎಂದು. ಈಗಲಂತೂ "ಛೇ! ಬಂದದ್ದು ತಪ್ಪು" ಎನ್ನಿಸಿಬಿಟ್ಟಿತು.

ನಾರಾಯಣನಿಗೆ ಅವರ ಮಾತಿನಲ್ಲಿದ್ದ ವಕ್ರತೆ ತಿಳಿಯಲಿಲ್ಲ.

"ನಿಮ್ಮ ಹುಡುಗನೆಲ್ಲಿ?" ಎಂದು ಕೇಳಿದ.

"ಬರುತ್ತಾನೆ. ಅವನೂ, ನನ್ನ ತಂಗಿಯ ಮಗಳು ಲೀಲೆ ಇಬ್ಬರೂ ಮನೆಯ ಹಿಂದೆ ಆಟವಾಡುತ್ತಿದ್ದಾರೆ"

ಅವರು ಮಾತನಾಡುತ್ತಿದ್ದಂತೆ ಟೆನ್ನಿಸ್ ಬ್ಯಾಟುಗಳನ್ನು ಹಿಡಿದು ಆ ಹುಡುಗ ಹುಡುಗಿಯರು ಪ್ರವೇಶಿಸಿದರು.

ಹುಡುಗಿ ಮಾಲತಿಯ ವಯಸ್ಸಿನವಳೇ ಇರಬಹುದು. ಶೀಡಿ ಸೀರೆಯನ್ನುಟ್ಟು ಸೆರಗನ್ನು ನೆರಿಗೆ ಹಿಡಿದು ಒಂದು ಭುಜದ ಕೊನೆಯಿಂದ ಇಳಿಬಿಟ್ಟಿದ್ದಳು. ತಲೆಗೂದಲನ್ನು ಸುರುಳಿ ಮಾಡಿ, ಪಿನ್ನುಗಳಿಂದ ಚಿತ್ರವಿಚಿತ್ರವಾಗಿ ಬಂಧಿಸಿ ಕರಿಯ ಬಲೆಯೊಂದರೊಳಗೆ ಸುರುಳಿಯನ್ನು ಸೇರಿಸಿದ್ದಳು. ಉಡುಪು ಅವಳಿಗೆ ಚೆನ್ನಾಗಿ ಒಪ್ಪಿತ್ತು. ನಾರಾಯಣನ ಕಣ್ಣಿಗೆ ಅವಳು ಸುಂದರಿಯಾಗಿಯೇ ಕಂಡಳು,

"ಸುಂದರಿ! ಆದರೆ ಮಾಲಾ ಈ ಅಲಂಕಾರದಲ್ಲಿ ಇನ್ನೂ ಸುಂದರಳಾಗಿಯೇ ಕಾಣುತ್ತಾಳೆ" ಎಂದುಕೊಂಡು ಮಾಲತಿಯ ಮುಖವನ್ನು ನೋಡಿದ.

ಅವನ ಭಾವವನ್ನು ಅವಳು ಗ್ರಹಿಸಿದ್ದಳು. ಅದರಿಂದ ಅವನು ಅವಳ ಕಡೆ ನೋಡಿದೊಡನೆ ಅವಳಿಗೆ ನಗು ಬಂತು.

ಲೀಲೆ ಬಂದು ತನ್ನ ಸೋದರ ಮಾವನ ಪಕ್ಕದಲ್ಲಿ ನಿಂತು ಹೇಳಿದಳು,

"ಪರಿಚಯ ಮಾಡಿಸು, ಮಾವ"

"ಅದಕ್ಕೇನಮ್ಮ ?" ಎಂದರು ರಾಘವಯ್ಯ, "ಇವರು, ಗೋವಿಂದಪ್ಪನವರ ಮಗ ನಾರಾಯಣ್, ಅವರು ಇವರ ಪತ್ನಿ ಮಾಲತೀದೇವಿ: ಸ್ವಾಮಿ ನಿಮಗೆ ಹೇಳಿದೆನಲ್ಲ, ಇವಳು ನನ್ನ ಸೋದರ ಸೊಸೆ ಲೀಲೆ. ಅವನು ನನ್ನ ಏಕಮಾತ್ರ ಪುತ್ರ ಜನಾರ್ಧನ"

"ನಮಸ್ತೆ" ಎಂದು ಲೀಲಾ ಒಂದು ಕುರ್ಚಿಯ ಮೇಲೆ ನಾರಾಯಣನ ಹತ್ತಿರ ಕುಳಿತಳು.

"ನಿಮ್ಮ ಹುಡುಗನಿಗೆ ಕನ್ಯೆ ಸಿಗಲಿಲ್ಲವೆಂದಿರಿ" ಹಾಸ್ಯವಾಗಿ ನಾರಾಯಣ ರಾಘವಯ್ಯನವರನ್ನು ಆಕ್ಷೇಪಿಸಿದ.

"ಓ! ಲೀಲೆಯನ್ನು ಕುರಿತು ಈ ಮಾತು ಹೇಳುತ್ತೀರಾ? ಇಬ್ಬರಿಗೂ ಜೋಡಿ ಎಲ್ಲದರಲ್ಲೂ ಸರಿಯಾಗಿದೆ. ಆದರೆ, ಲೀಲೆ ಅವನಿಗಿಂತ ಒಂದು ವರ್ಷ ದೊಡ್ಡವಳು. ಅದೊಂದೇ ಸರಿಯಲ್ಲ. ಅದೂ ಅಲ್ಲದೆ ಅವನು ನಮ್ಮ ಕಾಲದ ದೃಷ್ಟಿಯಿಂದ ವಿವಾಹಕ್ಕೆ ಯೋಗ್ಯನಾದ ವರನಾದರೂ ಈ ಕಾಲಕ್ಕೆ ಇನ್ನೂ ಹಸುಳೆ"

"ಇನ್ನೊಂದು ವಿಚಾರವೇನೆಂದರೆ ಈ ಲೀಲಾ ಮಹಾ ಗಂಡುಬೀರಿ, ಇವಳನ್ನು ಮದುವೆಯಾಗುವವನಿಗೆ ಬುದ್ಧಿಯಿಲ್ಲ" ಎಂದ ಜನಾರ್ಧನ.

"ನೀನು ಶುದ್ಧ ಹೆಣ್ಣಿಗರಾವು ಎಂಬುದನ್ನೂ ಹೇಳು. ಅದನ್ನೇಕೆ ಬಿಡುತ್ತೀ ?" ಎಂದಳು ಲೀಲೆ.

"ಬಂದವರೆದುರಿಗೆ ಜಗಳವಾಡುವುದೇ ?" ಎಂದರು ರಾಘವಯ್ಯ, "ಮಗು, ಲೀಲಾ ಒಳಕ್ಕೆ ಹೋಗಿ ನೋಡು ಅಡಿಗೆ ಸಿದ್ಧವಾಯಿತೇ ಎಂದು"

ಒಂದೇ ಹಾರಿಗೆ ಒಳಕ್ಕೆ ಹೋದಳು ಲೀಲಾ. ಒಂದು ಕ್ಷಣದಲ್ಲಿ ಹಿಂದಿರುಗಿ ಬಂದು ಹೇಳಿದಳು,

"ಎಲೆ ಹಾಕಿದ್ದೂ ಆಗಿದೆ ಮಾವ."

"ಹಾಗಾದರೆ ಇನ್ನು ಊಟಕ್ಕೆ ಏಳೋಣ" ಎಂದರು ರಾಘವಯ್ಯ.

ಪಂಕ್ತಿಯಲ್ಲಿ ಲೀಲೆ ಮಾಲತಿಯ ಪಕ್ಕದಲ್ಲಿ ಕುಳಿತಳು. ಜನಾರ್ಧನ ನಾರಾಯಣನ ಬಳಿ ಕುಳಿತ. ರಾಘವಯ್ಯನವರು ಸ್ವಲ್ಪ ದೂರದಲ್ಲಿ ಬೇರೆ ಕುಳಿತರು.

"ಎಲ್ಲಿದೆ ನಿಮ್ಮ ಮನೆ?" ಲೀಲೆ ವಿಚಾರಿಸಿದಳು.

"ಇಲ್ಲೇ ಕಾಡಮಲ್ಲೇಶ್ವರ ದೇವಸ್ಥಾನದ ಬಳಿಯಲ್ಲಿ... ...." ಮನೆಯ ಗುರುತನ್ನು ವಿವರಿಸಿ ಹೇಳಿದಳು ಮಾಲತಿ.

"ನಾನು ನನ್ನ ಗೆಳತಿಯೊಬ್ಬಳ ಮನೆಗೆ ಹೋಗುವಾಗ ಅದೇ ಮಾರ್ಗದಲ್ಲಿ ಬರುತ್ತೇನೆ. ಎಂದಾದರೂ ನಿಮ್ಮ ಮನೆಗೂ ಬರುತ್ತೇನೆ"

"ಓಹೋ ಆಗತ್ಯವಾಗಿ ಬನ್ನಿ"

"ಅಯ್ಯೋ! ಮನೆಗೆ ಲೀಲೆಯನ್ನು ಕರೆದವರುಂಟೇ?" ಎಂದ ಜನಾರ್ಧನ, "ಮಹಾ ಲೂಟಿಗಾತಿ ಅವಳು"

"ಅವರಿಗೆ, ಲೂಟಿ ಮಾಡಲು ಆಸಕ್ತಿ ಹುಟ್ಟುವುದಕ್ಕೆ ನಮ್ಮಲ್ಲೇನೂ ಇಲ್ಲ" ಎಂದ ನಾರಾಯಣ.

"ಅದು ನನಗೆ ತಿಳಿಯದು, ಆಸಾಮಿ ನಂಬಿಕೆಗೆ ಅರ್ಹವಲ್ಲವೆಂದು ತಿಳಿಸುವುದು ನನ್ನ ಕೆಲಸ. ಮಾಡಿಬಿಟ್ಟಿದ್ದೇನೆ. ಇನ್ನು ಅದರ ಉಪಯೋಗ ನಿಮಗೆ ಸೇರಿದ್ದು" ಎಂದ ಜನಾರ್ಧನ.

"ಆಹಾ ಜನ್ನ! ನಿನ್ನ ಕಿವಿಯನ್ನು ಹಿಂಡಲು ನನ್ನ ಕೈಗಳು ಹಾತೊರೆಯುತ್ತಿವೆ" ಎಂದಳು ಲೀಲಾ.

ಜನಾರ್ಧನ ಮುಖ ಸೊಟ್ಟ ಮಾಡಿದ,

"ಅಬ್ಬ! ಗಂಡುಬೀರಿ!"

"ಜನಾರ್ಧನ, ಹುಚ್ಚು ಹುಚ್ಚಾಗಿ ಹರಟಬೇಡ" ಎಂದು ಅವನನ್ನು ಬೈದು ರಾಘವಯ್ಯ ನಾರಾಯಣನಿಗೆ ಉಪಚಾರ ಹೇಳಿದರು.

"ಈ ಹುಡುಗರ ಹಂಟಿಯಲ್ಲಿ ಊಟದ ಶಾಸ್ತ್ರ ಮಾಡಿ ಎದ್ದು ಬಿಡಬೇಡೀಪ್ಪ. ನಿಧಾನವಾಗಿ ಸರಿಯಾಗಿ ಊಟಮಾಡಬೇಕು"

ಲೀಲಾ ಮಾಲತಿಗೆ ಹೇಳಿದಳು,

"ತಮಗೂ ಹೇಳಿದ ಮಾತದು. ಏನು ಗುಬ್ಬಚ್ಚಿ ಊಟ ನಡೆಸಿದ್ದೀರಿ? ನಮಗೆ ರಾಕ್ಷಸ ಊಟ ಅಭ್ಯಾಸವಾಗಿದೆ. ನೀವು ಹೀಗೆ ಮಾಡಿದರೆ ನಮಗೆ ನಾಚಿಕೆಯಾಗುತ್ತದೆ"

ಮಾಲತಿಗೆ ಈ ಒರಟು ಮಾತಿನ ಹುಡುಗಿಯಲ್ಲಿ ಒಂದು ವಿಧವಾದ ಆದರ ಮೂಡಿತು ಅವಳ ಮನಸ್ಸಿನಲ್ಲಿದ್ದ ಕಿರಿಕಿರಿಯೂ ಕಡಿಮೆಯಾಯಿತು.

ಜನಾರ್ಧನ ಹೇಳಿದ,

"ನಿಮ್ಮನ್ನು ಕಾಣಬೇಕೆಂದು ತಾತ ಅಪ್ಪಾಜಿಗೆ ಆಗಲೇ ಎರಡು ಕಾಗದ ಬರೆದರು. ನಿಮಗೂ ಬರೆದಿದ್ದರೇನೋ ಅಲ್ಲವೆ?"

ರಾಘವಯ್ಯ ಹೇಳಿದನು,

"ಬರೆದಿರಬೇಕು. ಈ ಶರೀಳು ಸಂಬಂಧದವರ ಸ್ಥಿತಿಯೇ ಇಷ್ಟು. ತುಂಬ ಕಕುಲಾತಿಯಿಂದ ಮೊದಲು ನಿಮ್ಮ ಯೋಗಕ್ಷೇಮವನ್ನು ತಿಳಿಸಲು ಕೋರಿದ್ದರು. ನಾನು ಉತ್ತರ ಬರೆಯಲು ಸ್ವಲ್ಪ ತಡ ಮಾಡಿದೆ. ಹಿಂದೆಯೇ ಇನ್ನೊಂದು ಪತ್ರ ಬಂದಿತು."

ನಾರಾಯಣನಿಗೆ ನಗು ಬಂದಿತು,

"ಇಷ್ಟು ದಿನಗಳ ಮೇಲೆ ಈ ಅನಾಥನಲ್ಲಿ ಏನಿಷ್ಟು ದಯೆ?"

"ಇಷ್ಟು ದಿನಗಳು ಅನ್ನುತ್ತೀರಿ. ಅವರಿಗೆ ನಿಮ್ಮ ವಿಳಾಸ ತಿಳಿಯುವುದು ಕಷ್ಟವಾಯಿತು. ಯಾರುಯಾರನ್ನು ವಿಚಾರಿಸಿ ವಿಫಲರಾದರು ಗೊತ್ತಿಲ್ಲ ನಿಮಗೆ. ಮೊನ್ನೆ ಎಲ್ಲಿದ್ದೀರೆಂಬುದು ತಿಳಿಯಿತಂತೆ. ನನಗೆ ಬರೆದರು'' ಎಂದರು ರಾಘವಯ್ಯ.

"ನನಗೂ ಬರೆದಿದ್ದರು. ಆದರೆ ಅವರ ನೆನಪೇ ಇಲ್ಲ ನನಗೆ. ಏನು ಸಂಬಂಧ ಹುಡುಕಿಕೊಂಡು ಹೋಗುವುದು ಎಂದು ಸುಮ್ಮನಿದ್ದೆ" ನಾರಾಯಣ ಹೇಳಿದ.

ಜನಾರ್ಧನ ಅವನ ಮಾತಿಗೆ ತಲೆದೂಗಿದ,

"ಸರಿಯಾಗಿ ಮಾಡಿದಿರಿ. ನೀವಿರುವುದೆಲ್ಲಿ ಎಂಬುದು ನನಗೆ ಗೊತ್ತಿರದಿದ್ದರೂ ನನಗೆ ಹೇಳಿದ್ದರೆ ಎರಡು ದಿನಗಳಲ್ಲಿ ಪತ್ತೆ ಮಾಡುತ್ತಿದ್ದೆ. ನಾನು ಬೊಂಬಾಯಿಗೆ ಈಗ್ಗೆ ಒಂದು ವರ್ಷದ ಹಿಂದೆ ಹೋಗಿದ್ದೆನಲ್ಲ? ಆಗ ತಾತನಿಗೆ ಈ ವಿಷಯದಲ್ಲಿ ಎಳ್ಳುಕಾಳಿನಷ್ಟೂ ಆಸಕ್ತಿ ಇರಲಿಲ್ಲ. ಆಗ ಕರುಳು ಬಾಧಿಸಲಿಲ್ಲವೇಕೆ? ಕಷ್ಟಪಟ್ಟಿದ್ದರಲ್ಲಿ ನನಗೆ ನಂಬಿಕೆಯಿಲ್ಲ. ಈಗ ಇದ್ದಕ್ಕಿದ್ದಂತೆ......."

"ಜನಾರ್ಧನ!" ರಾಘವಯ್ಯ ಮಗನನ್ನು ಎಚ್ಚರಿಸಿದರು. "ನಿನಗೆ ನಾಲಿಗೆ ಹತೋಟಿ ತಪ್ಪುತ್ತಿದೆ. ದೊಡ್ಡವರ ಮಾತಿನಲ್ಲಿ ತಲೆ ಹಾಕಬೇಡವೆಂದು ನಾನು ಎಷ್ಟು ಬಾರಿ ನಿನಗೆ ಹೇಳಿದ್ದೇನೆ?"

"ಅದು ಸರಿಯಪ್ಪ" ಜನಾರ್ಧನ ನಗುತ್ತಲೇ ಉತ್ತರಕೊಟ್ಟ, "ಆದರೆ ಇದರಲ್ಲೇನೋ ಇದೆ. ಅಮ್ಮ ಊರಿಗೆ ಬಂದರೆ ಎಲ್ಲ ವಿಷಯಗಳೂ ನನ್ನೊಬ್ಬನಿಗಾದರೂ ತಿಳಿಯುತ್ತೆ."

"ಅವನದು ಒಡಕು ಬಾಯಿ, ನನಗೆ ಎಲ್ಲವನ್ನೂ ಹೇಳದಿದ್ದರೆ ಅವನಿಗೆ ತಡೆಯುವುದಿಲ್ಲ. ಆದ್ದರಿಂದ ಅವನಿಗೆ ತಿಳಿದದ್ದು ನನಗೂ ತಿಳಿದೀತು." ಎಂದಳು ಲೀಲಾ ಮೆಲ್ಲಗೆ ಮಾಲತಿಯೊಡನೆ, "ನನಗೂ ಜನಾರ್ಧನ ಹೇಳಿದಂತೆ ಅವರ ತಾತ ಬರೆದಿರುವುದರಲ್ಲಿ ಏನೋ ಇದೆಯೆನ್ನಿಸುತ್ತೆ"

ರಾಘವಯ್ಯ ಮಗನಿಗೆ ಹೇಳಿದರು,

"ಮಗು ನೀನು ಆ ಇಂಗ್ಲೀಷ್ ಪತ್ತೇದಾರಿ ಕಥೆಗಳನ್ನು ಓದಿ ಓದಿ ತಲೆ ಕೆಡಿಸಿಕೊಂಡಿದ್ದೀ. ಅದಕ್ಕೇ ನಿನಗೆ ಕಂಡ ಪ್ರತಿಯೊಂದು ಸನ್ನಿವೇಶದಲ್ಲೂ ಒಂದು ಸಮಸ್ಯೆ ಇದ್ದಂತೆ ತೋರುತ್ತದೆ"

"ಇರಬಹುದು" ಎಂದ ನಾರಾಯಣ, "ಹೀಗಾಗುವುದು ಸಹಜವೆಂದು ಕೇಳಿದ್ದೇನೆ."

"ನನ್ನ ಮಾವನವರ ಸ್ವಭಾವ ನನಗೆ ಗೊತ್ತು. ಒಳಗಡೆ ಅನೇಕ ವಿಚಾರಗಳು ಮಥಿಸುತ್ತಿದ್ದರೂ ಮೇಲೆ ನೋಡುವವರಿಗೆ ಏನೂ ಕಾಣು

ವುದಿಲ್ಲ. ಅವರನ್ನು ಎಷ್ಟೋ ಜನ ಕಠಿಣರೆಂದು ತಿಳಿಯುತ್ತಾರೆ. ಆದರೆ ಅವರ ಮನಸ್ಸು ಬೆಣ್ಣೆಯಷ್ಟು ಮೃದು" ಎಂದರು ರಾಘವಯ್ಯ.

"ಇವೆಲ್ಲಾ ನಿನಗೆ ಹೇಗೆ ತಿಳಿಯಿತಪ್ಪಾ? ನನಗೆ ಬಹಳ ಹೊಸ ದಾಗಿ ಕಾಣುತ್ತವೆ" ಎಂದ ಜನಾರ್ದನ.

ಲೀಲಾ ಮಾಲತಿಗೆ ಹೇಳಿದಳು,

"ಮಾವ ವಿಚಿತ್ರವಾಗಿ ಮಾತನಾಡುತ್ತಿದ್ದಾರೆ. ಜನ್ನನ ತಾತ ಬಹಳ ಬುದ್ಧಿಶಾಲಿಗಳೆಂದು ಕೇಳಿದ್ದೇನೆ. ಆದರೆ ಬೆಣ್ಣೆ ಗಿಣ್ಣೆ ಸುಳ್ಳು."

ಹರಟೆಯಲ್ಲಿ ಊಟ ನಿಧಾನವಾಗಿ ಮುಗಿಯಿತು. ಬಳಿಕ ಎಲ್ಲರೂ ಸಿಂಗರಿಸಿದ ನಡುಮನೆಯಲ್ಲಿ ಕುಳಿತು ತಾಂಬೂಲವನ್ನು ಹಾಕಿಕೊಂಡರು.

ರಾಘವಯ್ಯ ಹೇಳಿದರು,

"ಇನ್ನು ಹತ್ತು ನಿಮಿಷ ನನಗೆ ವಿಶ್ರಾಂತಿ ಬೇಕು. ನೀವು ಚಿಕ್ಕ ವರು. ನಾನು ಇಲ್ಲದಿದ್ದರೆ ಬೇಸರಪಡಲಾರಿರಿ. ಅಲ್ಲದೆ ನಾನು ಬೇಗ ಬಂದುಬಿಡುತ್ತೇನೆ."

"ಒಳ್ಳೆಯದಪ್ಪ, ಅವರಿಗೆ ನಾವು ಹೇಗೂ ಮನೆ ತೋರಿಸಬೇಕು, ನಮ್ಮ ಆಟದ ಮೈದಾನವನ್ನು ತೋರಿಸಬೇಕು...." ಎಂದ ಜನಾರ್ದನ, "ಆಮೇಲೆ ಸಾಧ್ಯವಾದರೆ ಒಂದು ಆಟ ಆಡಬೇಕು........"

"ಒಳ್ಳೆಯದು ಹಾಗಿದ್ದರೆ. ಆದರೆ ಹುಚ್ಚುಹುಚ್ಚಾಗಿ ನಿಮಗೆ ಸಲ್ಲದ ಮಾತುಗಳನ್ನಾಡಬೇಡಿ" ಎಂದು ರಾಘವಯ್ಯ ಮಲಗಲು ಹೋದರು.

ಮೊದಲು ಮನೆಯನ್ನು ನೋಡಲು ಕರೆದುಕೊಂಡು ಹೋದರು ಲೀಲೆ ಹಾಗೂ ಜನಾರ್ದನರು. "ನಮ್ಮ ಮನೆಯನ್ನು ಬಂದವರಿಗೆ ತೋರಿಸುವುದೊಂದು ಹೆಮ್ಮೆಯ ಕೆಲಸ ನಮಗೆ" ಎಂದ ಜನಾರ್ದನ.

ಅವನ ಮಾತು ಸಹಜವಾಗಿತ್ತು. ಹೊಸ ರೀತಿಯಲ್ಲಿ ಕಟ್ಟಿದ ಮನೆ, ಪ್ರತಿಯೊಂದು ಕೊಠಡಿಯೂ ಅಚ್ಚುಕಟ್ಟಾಗಿತ್ತು. ನಯವಾದ ಸುಣ್ಣ ಹಚ್ಚಿದ ಗೋಡೆಗಳು, ಬಿಳಿಯ ಬಿಲ್ಲೆಗಳನ್ನು ಹಾಕಿದ ನೆಲ, ಗೋಡೆ ಯೊಳಗೆ ಕಟ್ಟಿದ ಬೀರುಗಳು, ಅವುಗಳ ಬಾಗಿಲಿಗೆ ಹಾಕಿದ್ದ ನಿಲುವು

ಗನ್ನಡಿಗಳು ಇತ್ಯಾದಿ ಮನೆ ಕಟ್ಟಿದವರ ನಿಪುಣತೆಯನ್ನು ತೋರ್ಪಡಿಸಿದರೆ ಪ್ರತಿಯೊಂದು ಕೊಠಡಿಯ ಬಾಗಿಲಿಗೆ ಹಾಗೂ ಕಿಟಕಿಗಳಿಗೆ ಇಳಿಬಿಟ್ಟ ತೆರೆಗಳು, ಸಾಮಾನುಗಳನ್ನಿರಿಸಿದ ಓರಣ ಮನೆಯಲ್ಲಿ ಪ್ರತಿಯೊಬ್ಬರ ಅಭಿರುಚಿಯೂ ಉತ್ತಮವಾದದ್ದೆಂದು ಸಾರುತ್ತಿತ್ತು.

"ಇಷ್ಟು ದೊಡ್ಡ ಮನೆಗೆ ಇರುವವನೊಬ್ಬನೇ ಆಳು. ಆದರಿಂದ ನಮ್ಮ ಕೆಲಸಗಳು ಬಹುಮಟ್ಟಿಗೆ ನಮ್ಮ ಮೇಲೇ ಬೀಳುತ್ತವೆ'' ಎಂದು ಹೇಳಿದಳು ಲೀಲಾ,

ಮನೆ ನೋಡಿ ಮುಗಿಸಿ ಟೆನ್ನಿಸ್ ಆಟದ ಮೈದಾನಕ್ಕೆ ಹೋದರು.

"ಒಂದಾಟ ಆಡಿದರೇ ಇದರ ಸ್ವಾರಸ್ಯ ತಿಳಿಯುವುದು" ಎಂದು ಜನಾರ್ದನ ನಾಲ್ಕು ಬ್ಯಾಟುಗಳನ್ನು ತೆಗೆದುಕೊಂಡು ಬಂದ.

ಮಾಲತಿ ಅವನ್ನು ನೋಡಿ ತುಸು ನಕ್ಕು ಹೇಳಿದಳು,

"ನನಗೆ ಈ ಆಟ ಬರದು.''

ನಾರಾಯಣನೂ ಹೇಳಿದ, "ನನಗೆ ಅಭ್ಯಾಸ ಬಿಟ್ಟುಹೋಗಿದೆ.''

"ಚಿಂತೆಯಿಲ್ಲ ಬನ್ನಿ, ನಾವು ಹೇಳಿಕೊಡುತ್ತೇವೆ'' ಎಂದು ಜನಾರ್ದನ ಹೇಳಿದ.

ಲೀಲೆ ಅವನನ್ನು ತಡೆದು ಹೇಳಿದಳು,

"ಸುಮ್ಮನಿರು, ಎಲ್ಲಾ ಇವತ್ತೇ ಆಗಬೇಕೇ? ಇನ್ನೊಂದು ದಿನ ಆಡಿದರೆ ಆಯಿತು."

ಮನಸ್ಸಿಲ್ಲದಿದ್ದರೂ ಜನಾರ್ದನ ಅವಳ ಮಾತಿಗೆ ಒಪ್ಪಿದ,

"ಹಾಗಾದರೆ ಇಲ್ಲಿಯೇ ಕುಳಿತಿರಿ. ಒಳಕ್ಕೆ ಹೋಗಿ ರೇಡಿಯೋ ಹಾಕಿ ಬರುತ್ತೇನೆ. ಸಂಗೀತದ ಹಿನ್ನೆಲೆಯಲ್ಲಿ ಈ ವಾತಾವರಣದಲ್ಲಿ ಹರಟೆ ಚೆನ್ನಾಗಿರುತ್ತದೆ."

ಹರಟೆಯಲ್ಲಿ ಹೊತ್ತು ಹೋದುದೇ ತಿಳಿಯಲಿಲ್ಲ ಯಾರಿಗೂ. ಸಿನೇಮಾ ಸಂಗೀತ, ರಾಜಕೀಯ ಒಂದೊಂದಾಗಿ ಬಂದು ಹೋದುವು ಅವರ ಮಾತಿನಲ್ಲಿ. ರಾಘವಯ್ಯ ಎರಡು ಗಂಟೆ ಚೆನ್ನಾಗಿ ನಿದ್ರೆಮಾಡಿ

ಎದ್ದು, ಮುಖಮಾರ್ಜನಗಳನ್ನು ತೀರಿಸಿಕೊಂಡು ಆಳನ್ನು ಕಳುಹಿಸಿದರು; ಅವನು ಬಂದು ಇವರನ್ನು ಕರೆದ.

ಟೀ ತೆಗೆದುಕೊಂಡಾದಮೇಲೆ ನಾರಾಯಣ ಎದ್ದ.

“ಇನ್ನು ನಾವು ಹೊರಡುತ್ತೇವೆ.”

“ಈಗಲೇ ಏನವಸರ? ಬಿಸಲು ತಂಪಲಿ” ಲೀಲೆ ಹೇಳಿದಳು.

“ಇಲ್ಲ, ಈಗಾಗಲೇ ಬಹಳ ಹೊತ್ತು ಮೀರಿ ನಿಂತಿದ್ದೇವೆ” ಎಂದ ನಾರಾಯಣ.

ರಾಘವಯ್ಯ ಬಾಗಿಲವರೆಗೂ ಬಂದು ಬೀಳ್ಕೊಂಡರು,

“ಇನ್ನು ಪರಿಚಯವಾಯಿತಲ್ಲ? ಆಗಾಗ ಬಂದು ಹೋಗುತ್ತಿರಿ.”

“ನೀವೂ ನಮ್ಮ ಮನೆಗೆ ಬರಬೇಕು” ಎಂದು ಮಾಲತಿ ಆಹ್ವಾನಿಸಿದಳು.

ದಾರಿಯಲ್ಲಿ ಮಾಲತಿ ಹೇಳಿದಳು,

“ಲೀಲಾ ಒಳ್ಳೆಯ ಹುಡುಗಿಯಾಗಿ ಕಾಣುತ್ತಾಳೆ.”

“ಅಂದರೆ? ಅವಳು ನಿಜವಾಗಿ ಒಳ್ಳೆಯವಳಲ್ಲದೆ ಇರಬಹುದು ಎಂದು ನಿನ್ನ ಅಭಿಪ್ರಾಯವೆ?” ಎಂದು ಕೇಳಿದ ನಾರಾಯಣ.

“ಛೀ ಇದೇನು ಹೀಗೆ ಹೇಳುತ್ತೀರಿ?”

“ಒಳ್ಳೆಯದು ಬಿಡು. ಯಾರು ಒಳ್ಳೆಯವರಾದರೇನು, ಯಾರು ಕೆಟ್ಟವರಾದರೇನು ನಮಗೆ?”

ಮಾಲತಿಗೆ ಸ್ವಲ್ಪ ಆಶ್ಚರ್ಯವಾಯಿತು. ಅವರ ಮನೆಯಲ್ಲಿರುವವರೆಗೂ ಸಮಾಧಾನದಿಂದಿದ್ದ. ಈಗೇತಕ್ಕೆ ಇಷ್ಟು ಮಾತು ಜೇಡದಂತೆ ಆಡುತ್ತಿದ್ದಾನೆಯೋ ಅವಳಿಗೆ ತಿಳಿಯಲಿಲ್ಲ. “ಏನೋ ನನಗ ಅರ್ಥವಾಗದ ವಿಷಯ ಇವರದು” ಎಂದುಕೊಂಡು ಸುಮ್ಮನಾದಳು.

ಮನೆಗೆ ಬಂದಮೇಲೆ ನಾರಾಯಣ ಹೇಳಿದ,

“ಅವರ ಮನೆಗೆ ಹೋಗಿದ್ದಾಗ ನನ್ನ ಹಳೆಯ ಜೀವನ ನೆನಪಿಗೆ ಬಂದಿತು ಮಾಲಾ. ನಮ್ಮ ಮನೆ ನೆನಪಿದೆಯೋ ನಿನಗೆ? ಒಳ್ಳೇ ಅನುಕೂಲವಾದ ಮನೆ. ಪ್ರತಿಯೊಬ್ಬರಿಗೂ ಪ್ರತ್ಯೇಕ ಕೊಠಡಿಗಳಿದ್ದುವು.

ಮನೆ ತುಂಬ ಎಷ್ಟು ಒಳ್ಳೊಳ್ಳೆಯ ಮರದ ಸಾಮಾನು, ಮೆತ್ತೆಯ ಕುರ್ಚಿಗಳು, ನಿಲುವುಗನ್ನಡಿಗಳು ಇದ್ದುವು?"

"ಇವರ ಮನೆಗೆ ಯಾವ ಭಾಗದಲ್ಲೂ ಕಡಿಮೆಯಿರಲಿಲ್ಲ" ಎಂದಳು ಮಾಲತಿ.

ನಾರಾಯಣನ ಮನಸ್ಸು ಆ ದಿನಗಳನ್ನು ನೆನೆದು ಉದ್ವಿಗ್ನ ವಾಯಿತು.

"ಆಗ ನಮಗೆ ಯಾವ ಭಾಗದಲ್ಲೂ ಕಡಿಮೆಯಿರಲಿಲ್ಲ. ನಾನೆಷ್ಟು ಖರ್ಚುಮಾಡಲಿ ಅದಕ್ಕೆ ಅಪ್ಪ ತಡೆ ಹಾಕುತ್ತಿರಲಿಲ್ಲ. ನಿತ್ಯ ಟೆನ್ನಿಸ್ ಆಡುವುದು ಅಭ್ಯಾಸ ಬಿದ್ದುಹೋಗಿತ್ತು. ವಾರಕ್ಕೊಂದು, ಎರಡು ಸಿನೆಮಾ, ಎಷ್ಟು ಹೊತ್ತಿಗೆ ಮನೆಗೆ ಬರಲಿ ಬಿಸಿಬಿಸಿ ತಿಂಡಿ, ಅಡಿಗೆ ಇಟ್ಟುಕೊಂಡು ಅಮ್ಮ ಕಾದಿರುತ್ತಿದ್ದರು. ಏನೋ ಸೌಖ್ಯ, ತೃಪ್ತಿ ಮನೆಯಲ್ಲಿ ತುಂಬಿ ತುಳುಕುತ್ತಿತ್ತು. ಈಗ ನನಗೆ ಏನಾಯಿತು ಮಾಲಾ? ಜ್ವರ ಬಂದಂತೆ ಇರುತ್ತದೆ ಬಹುಶಃ"

ಮಾಲತಿಗೆ ಉತ್ತರ ಹೇಳಲು ತೋಚಲಿಲ್ಲ. ನಾರಾಯಣನಿಗೆ ಉತ್ತರದ ಅವಶ್ಯಕತೆಯಿರಲಿಲ್ಲ. ಅವಳಿಗೆ ತಾವು ಆಗ ಮಾಡುತ್ತಿದ್ದು ದನ್ನು ಎಷ್ಟು ಹೇಳಿದರೂ ಅವನಿಗೆ ತೃಪ್ತಿಯಿಲ್ಲ. ತಾಯಿ ತಂಗಿಯರ ನೆನಪು ಅವನ ಹೃದಯವನ್ನು ಕಲಕುತ್ತಿತ್ತು. ರಾತ್ರಿ ಪೂರ್ತಿ ಅದೇ ಮಾತಾಯಿತು.

ಮಾಲತಿಯ ಶಾಲೆಯಲ್ಲಿ ಪರೀಕ್ಷೆಗಳು ಪ್ರಾರಂಭವಾದುವು. ಪಾಠ ಗಳಿಗೆ ಟೀಕೆ ಟಿಪ್ಪಣಿ ಬರೆಯುವುದು ತಪ್ಪಿತೆಂದು ಮಾಲತಿಗೆ ಸಂತೋಷ ವಾಯಿತು. ಮನೆಯಲ್ಲಿದ್ದಾಗ ಯಾವುದೊಂದು ಯೋಚನೆಯೂ ಇಲ್ಲದೆ ಗೆಲುವಿನಿಂದ ಇರಲಾರಂಭಿಸಿದಳು. ಒಂದು ವಾರ ಒಂದು ದಿನದಂತೆ ಕಳೆದುಹೋಯಿತು.

ಪರೀಕ್ಷೆಯ ಕೊನೆಯ ದಿನ ಪರೀಕ್ಷೆ ಮುಗಿದಮೇಲೆ ಹುಡುಗಿ ಯರಿಗೆ ಮನೆಗೆ ಹೋಗಲು ಮನಸ್ಸಿರಲಿಲ್ಲ. ಉಪಾಧ್ಯಾಯಿನಿಯರನ್ನು ಸುತ್ತುವರಿದು ನಿಂತು ಹರಟೆಗೆ ಆರಂಭಿಸಿದರು. ಉಪಾಧ್ಯಾಯಿನಿಯರೂ

ಉತ್ಸಾಹದಿಂದ ಅವರೊಡನೆ ಮಾತನಾಡುತ್ತಿದ್ದರು. ಮಾಲತಿಗೆ ಇನ್ನೂ ಹೊತ್ತಾಗಿಲ್ಲವೆಂದೇ ಭಾವನೆ. ನಿಧಾನವಾಗಿ ತವರಾಷೆಯಾಗಿ ಅವರಿಗೆ ಉತ್ತರ ಕೊಡುತ್ತ ಕೀಟಲೆ ಮಾಡುತ್ತ ಸ್ವಲ್ಪ ಹೆಚ್ಚು ಹೊತ್ತು ನಿಂತು ಬಿಟ್ಟಳು. ಮಾತಿನ ಮಧ್ಯೆ ತಟ್ಟನೆ ಏಕೋ ಗಡಿಯಾರದ ಕಡೆ ನೋಡಿ ದಳು, ಆರು ಗಂಟೆಯಾಗಿ ಹತ್ತು ನಿಮಿಷವಾಗಿತ್ತು. ಲಗುಬಗೆಯಿಂದ ಎದ್ದಳು.

ದಾರಿ ಎಷ್ಟು ಬೇಗ ನಡೆದರೂ ಮನೆ ತಲಪುವ ವೇಳೆಗೆ ಕತ್ತಲಾಗೇ ಬಿಟ್ಟಿತು. "ಛೇ ಏಕೆ ಮತ್ತೆ ಮತ್ತೆ ಹೀಗಾಗುತ್ತಿದೆ! ಹೊತ್ತಿನ ಮೇಲೆ ಗಮನವಿಡದೆಹೋದೆನಲ್ಲ! ಇನ್ನು ಇವರಿಗೆ ಎಷ್ಟು ಸಿಟ್ಟು ಬಂದಿರು ತ್ತದೆಯೋ!" ಎಂದು ಮನಸ್ಸಿನಲ್ಲಿಯೇ ಕಳವಳಪಡುತ್ತ ಮಾಲತಿ ಮನೆ ಯನ್ನು ಪ್ರವೇಶಿಸಿದಳು.

ಮನೆಯಲ್ಲಿ ವನಜಮ್ಮ ಮಕ್ಕಳು ಮಾತ್ರವೇ ಇದ್ದರು.

"ಅಳಿಯಂದಿರು ಇನ್ನೂ ಮನೆಗೆ ಬಂದಿಲ್ಲ" ಎಂದರು ವನಜಮ್ಮ.

ಮಾಲತಿ ನಿಟ್ಟುಸಿರನ್ನು ಬಿಟ್ಟಳು.

"ಸದ್ಯ ಬದುಕಿದೆ ಅಮ್ಮ. ಅವರು ಬಂದು ರೇಗಿಕೊಂಡು ಕುಳಿ ತಿರುವುದಕ್ಕಿಂತ ಎರಡು ನಿಮಿಷ ತಡವಾಗಿ ಬರುವುದೇ ವಾಸಿ" ಎಂದು ತಾಯಿಗೂ ಹೇಳಿದಳು.

ನಾರಾಯಣ ಅವತ್ತು ಮನೆಗೆ ಬಂದಾಗ ಎಂಟೂವರೆ ಗಂಟೆ ಯಾಗಿತ್ತು. ಮಾಲತಿ ನಗುನಗುತ್ತ ಅವನು ಬಟ್ಟೆ ಬದಲಾಯಿಸಿಕೊಳ್ಳು ತ್ತಲೂ ಎಲೆ ಹಾಕಿದಳು. ಬಹುಶಃ ಅವಳು ಸಿಟ್ಟಾಗಿರಬಹುದೆಂದು ಅವನು ಎಣಿಸಿದ್ದ. ಈಗ ಅವಳ ನಗುಮುಖವನ್ನು ಕಂಡು ಅವನ ಮನಸ್ಸಿಗೆ ಹಗುರಾಯಿತು.

"ರಾಮುವಿಗೆ ನಾನೇ ಊಟಮಾಡಿಸುತ್ತೇನೆ. ಅವನನ್ನು ಇಲ್ಲಿ ಕೊಡು" ಎಂದು ರಾಮುಚಂದ್ರನನ್ನು ಎತ್ತಿಕೊಂಡು ಅವನಿಗೆ ಊಟ ಮಾಡಿಸಿ, ಬಳಿಕ ತಾನು ಊಟಕ್ಕೆ ಕುಳಿತ.

"ಲಕ್ಷ್ಮಣ ಆಗಲೇ ನಿದ್ರೆ ಮಾಡಿಬಿಟ್ಟನೇ ಮಾಲಾ? ಅವನನ್ನು ಹತ್ತು ಗಂಟೆಯವರೆಗೂ ನಿದ್ರೆಹೋಗಲು ಅವಕಾಶ ಕೊಡಬಾರದು. ಇಲ್ಲದಿದ್ದರೆ ರಾತ್ರೆ........" ಎಂದು ಸಲಹೆಕೊಟ್ಟ.

ಮಾಲತಿ ಊಟ ಮುಗಿಯುವವರೆಗೂ ಏನೂ ಹೇಳಲಿಲ್ಲ. ಅವ ನಾಡುತ್ತಿದ್ದ ಮಾತುಗಳನ್ನು ಕೇಳಿಕೊಂಡು ಸುಮ್ಮನೆ ಮುಗುಳ್ನಗೆ ನಗು ತ್ತಿದ್ದಳು. ಆಮೇಲೆ ಸ್ವಲ್ಪ ಒಳಗಿನ ಕೆಲಸದಲ್ಲಿ ತಾಯಿಗೆ ಸಹಾಯ ಮಾಡಿ ಅವನಿದ್ದಲ್ಲಿಗೆ ಬಂದಳು,

"ಸರಿಯಾಗಿ ನೋಡಿದರೆ ಇವತ್ತು ನಾನು ನಿಮ್ಮ ಮೇಲೆ ಕೋಪಿಸಿ ಕೊಳ್ಳಬೇಕು."

"ನಿಜ ಮಾಲಾ. ನನಗೆ ನಿಜವಾಗಿ ಹೆದರಿಕೆ ಆಗುತ್ತಿತ್ತು ಮನೆಗೆ ಬಂದಾಗ. ಆದರೆ" ಎಂದು ನಕ್ಕ ನಾರಾಯಣ, "ನೀನು ನನಗಿಂತ ಸಾವಿರಪಾಲು ವಾಸಿ."

"ಓ, ತಡೆಯಿರಿ ನಾನು ಕೇಳಬೇಕಾದುದು ಸ್ವಲ್ಪ ಇದೆ. ಮನೆಗೆ ಬರಲ್ಲು ಏತಕ್ಕೆ ಇಷ್ಟು ತಡವಾಯಿತು?"

"ನೀನು ಕೇಳದಿದ್ದರೂ ಅದನ್ನು ನಾನೇ ನಿನಗೆ ಹೇಳುತ್ತಿದ್ದೆ" ಎಂದ ನಾರಾಯಣ, "ಎಂದಿನಂತೆ ಐದು ಗಂಟೆಗೇ ಮನೆಗೆ ಬರಲು ಹೊರ ಟಿದ್ದೆ. ದಾರಿಯಲ್ಲಿ ಲೀಲಾ ಸಿಕ್ಕಿದಳು. ಅಬ್ಬ! ಮಾಲಾ, ಅವಳು ಸತ್ಯವಾಗಿ ಗಂಡುಬೀರಿ."

"ಏತಕ್ಕೋ? ಒಂದೂ ಬಿಡದೆ ಹೇಳಿ."

"ಹೇಳದೆ? ನಾನು ಅವಳನ್ನು ಮೊದಲು ನೋಡಲೇ ಇಲ್ಲ. ಆದರೆ ಅವಳು ಬಿಡಬೇಕಲ್ಲ? ನನ್ನ ಹೆಸರು ಹಿಡಿದು ಗಟ್ಟಿಯಾಗಿ ಕೂಗಿ ದಳು. ಹಿಂದಿರುಗಿ ನೋಡಿದೆ. "ಎಲ್ಲಿಗೆ ಹೋಗುತ್ತಿದ್ದೀರಿ? ಮನೆಗೆ ಬನ್ನಿರಿ" ಎಂದು ನಿಂತಲ್ಲಿನಿಂದ ಕೂಗಿ ಹೇಳಿದಳು. "ಈಗ ಆಗುವು ದಿಲ್ಲವಮ್ಮ, ಇನ್ನೊಂದು ದಿನ ಬರುತ್ತೇನೆ" ಎಂದು ನಾನನ್ನುತ್ತಿರುವಾ ಗಲೇ ಹತ್ತಿರಕ್ಕೆ ಬಂದು, "ಒಳ್ಳೆಯ ಮಾತಿನಿಂದ ಬರುವಿರೋ? ಎಳೆದು ಕೊಂಡು ಹೋಗಲೋ? ನಮ್ಮ ಸೋದರತ್ತೆ ಅವರ ತಂಗಿಯ ಮಗಳನ್ನು

ಕರೆದುಕೊಂಡು ಬಂದಿದ್ದಾರೆ, ಅವರ ಪರಿಚಯ ಮಾಡಿಸಬೇಕು ನಿಮಗೆ" ಎಂದು ನನ್ನ ಸೈಕಲ್ಲಿನ ಮುಂಭಾಗವನ್ನು ಹಿಡಿದು ನಿಂತುಕೊಂಡಳು. ಅವಳ ಲಜ್ಜೆಗೇಡಿತನದಿಂದ ನನಗೇ ನೋಡಿದವರು ಏನು ತಿಳಿದುಕೊಂಡಾರು ಎಂದು ನಾಚಿಕೆಯಾಯಿತು. "ಒಳ್ಳೆಯದು ಹೋಗೋಣವ್ಮಾ ನಿಮ್ಮ ಮನೆಗೆ, ಅದಕ್ಕೇನು ?'' ಎಂದು ಅವರ ಮನೆಗೆ ಹೋದೆ. ಅಲ್ಲಿ ನಿಜವಾಗಿಯೂ ರಾಘವಯ್ಯನವರ ಪತ್ನಿ ರಾಜಮ್ಮ, ಆಕೆಯ ತಂಗಿಯ ಮಗಳು ನೀರಜ ಬಂದಿದ್ದರು.''

"ಹೇಗಿದ್ದಾರೆ ಅವರು ?"

"ಯಾರು ರಾಜಮ್ಮನವರೇ ? ಏನೋ ಇದ್ದಾರೆ. ಆದರೆ ನೀರಜ ಒಳ್ಳೇ ಸ್ಫುರದ್ರೂಪಿಯಾದ ಹುಡುಗಿ. ಸುಸಂಸ್ಕೃತಳೆಂದೂ ತೋರುತ್ತೆ."

"ಮನೆಗೆ ಕರೆಯಬೇಕಾಗಿತ್ತು."

"ಅದು ನನಗೆ ತೋಚಲಿಲ್ಲ. ಸ್ವಲ್ಪಹೊತ್ತು ಅವರೊಡನೆ ಮಾತನಾಡುವಷ್ಟರಲ್ಲಿ ಎಂಟು ಗಂಟೆಯಾಗಿಬಿಟ್ಟಿತು. ಮನೆಗೆ ಬಂದುಬಿಟ್ಟೆ."

"ಪಾಪ, ಗಡಿಯಾರದಂತಹ ನೀಚವಸ್ತು ಇನ್ನೊಂದಿಲ್ಲ, ಅಲ್ಲವೇ ?"

"ಓಹೋ ನಿನಗೆ ಒಳಗೇ ಸ್ವಲ್ಪ ಕೋಪ ಬಂದಿದೆ!"

"ಕೋಪ ಇಲ್ಲ, ಆದರೆ ನೀವು ಇನ್ನೊಂದು ಸಲ ನಾನೇನಾದರೂ ಸ್ವಲ್ಪ ನಿಧಾನವಾಗಿ ಮನೆಗೆ ಬಂದರೆ ಕೋಪಿಸಿಕೊಂಡು ಗುಂ! ಅಂತ ಕುಳಿತುಕೊಳ್ಳಿ, ಆಗ ಮಾಡುತ್ತೇನೆ"

ನಾರಾಯಣ ನಸುನಕ್ಕು ಸುಮ್ಮನಾದ

ನಾರಾಯಣ ಮೊದಲನೆಯ ಬಾರಿ ಆಕಸ್ಮಿಕವಾಗಿ ಮಾಲತಿಗೆ ತಿಳಿಸದೆ ರಾಘವಯ್ಯನವರ ಮನೆಗೆ ಹೋದದ್ದು ಕೊನೆಯ ಬಾರಿಯಾಗಲಿಲ್ಲ. ಮತ್ತೆ ಅವನು ಹೋಗಿ ಬಂದ ಮೇಲೆ ಮಾಲತಿಗೆ ಆ ವಿಚಾರವನ್ನು ಹೇಳುವುದು ಅವಶ್ಯಕವೆಂದು ಅವನಿಗೆ ಅನ್ನಿಸಲೂ ಇಲ್ಲ.

ನೀರಜೆಯನ್ನು ಪ್ರಥಮದಲ್ಲಿ ಅವನು ಕಂಡಾಗಲೇ ಅವಳು ಅವನನ್ನು ಟೆನ್ನಿಸ್ ಆಟಕ್ಕೆ ಆಹ್ವಾನಿಸಿದಳು,

"ಈಗ ನಾವು ಮೂವರಾಗಿ ಬಿಟ್ಟಿದ್ದೇವೆ. ಇಬ್ಬರಾಡುತ್ತಿದ್ದಾಗ ಉಳಿದೊಬ್ಬರು ಮಿಕಿಮಿಕಿ ನೋಡುತ್ತ ಕೊಡಬೇಕಾಗಿದೆ. ನಿಮಗೆ ಹೇಗೂ ಆಟ ಬರುತ್ತದೆಯಂತಲ್ಲ? ನೀವೇಕೆ ಬಂದು ಈ ಬಿಕ್ಕಟ್ಟನ್ನು ಪರಿಹರಿಸಬಾರದು?"

ಲೀಲೆ ತುಂಟತನದಿಂದ ನೀರಜೆಗೆ ಹೇಳಿದಳು,

"ನೀರಜಾ, ಅವರು ನಿತ್ಯ ಸಂಜೆಯ ಹೊತ್ತು ಪತ್ನೀಸಮೇತರಾಗಿ ಗಾಳಿಸವಾರಿ ಹೋಗುತ್ತಾರೆ. ಅದನ್ನು ಬಿಟ್ಟು ಈ ನೀರಸವಾದ ಆಟಕ್ಕೆ ಅವರು ಬರುವರೇ? ಎಂದಿಗೂ ಇಲ್ಲ"

ಈ ಮಾತಿನಿಂದ ನಾರಾಯಣನಿಗೆ ಲಜ್ಜೆಯಾದಂತಾಗಿ ತಕ್ಷಣ ಉತ್ತರ ಕೊಟ್ಟುಬಿಟ್ಟ,

"ಲೀಲಾ, ನಿನಗೇನು ಗೊತ್ತು ನನ್ನ ದಿನಚರಿ? ಟೆನ್ನಿಸ್ ಆಟ ನನಗೆ ಅತ್ಯಂತ ಪ್ರಿಯವಾದ ಆಟ. ಅದನ್ನು ಆಡಲು ಅವಕಾಶ ಸಿಕ್ಕರೆ ಬಿಡುತ್ತೇನೆಯೆ?"

"ಹಾಗಾದರೆ ನಾಳೆ ಬರುವಿರಾ?" ನೀರಜೆ ಕೇಳಿದಳು.

"ಖಂಡಿತ ಬರುತ್ತೇನೆ"

ಮಾತು ಕೊಟ್ಟಿದ್ದರಿಂದ ಅವನು ಮತ್ತೆ ಅವರ ಮನೆಗೆ ಹೋಗ ಬೇಕಾಯಿತು. ಆದರೆ ಅದರಿಂದ ಅವನಿಗೆ ಬೇಸರವೇನೂ ಆಗಲಿಲ್ಲ. ಅವನಿಗೆ ಆಟದ ಅಭ್ಯಾಸ ಬಿಟ್ಟು ಹೋಗಿದ್ದರೂ ಆಟ-ಆಟಕ್ಕೆ ಅವನ ಕೈ ಕುದುರಿತು. ಅವನ ಜೊತೆಗಾಡುತ್ತಿದ್ದ ನೀರಜೆ ಒಳ್ಳೆ ಆಟಗಾತಿ ಬೇರೆ. ಆದ್ದರಿಂದ ಮೊದಲು ಸೋತರೂ, ಎರಡನೇ, ಮೂರನೇ, ನಾಲ್ಕನೇ ಆಟಗಳಲ್ಲಿ ಇವರೇ ಗೆದ್ದರು,

"ಭೇಷ್! ಒಳ್ಳೆಯ ಜೊತೆಗಾರರಿರುವುದೂ ಒಂದು ಅದೃಷ್ಟ" ಎಂದು ನೀರಜೆ ಅವನಿಗೆ ಶಹಭಾಸುಗಿರಿಯನ್ನೂ ಕೊಟ್ಟಳು.

"ಇನ್ನು ಮನೆಯಕಡೆ ಹೋಗಬೇಕು'' ಎಂದು ಎದ್ದ ನಾರಾಯಣ.

ನೀರಜೆ ನಗುತ್ತ ಅವನನ್ನು ನಿರೋಧಿಸಿದಳು,

"ಆಟ ಆಡಿದ ಕೂಡಲೆ ಮೈ ಬೆವರಿರುವಾಗ ಈ ತಣ್ಣಗಿನ ಗಾಳಿ

ಯಲ್ಲಿ ಮನೆಗೆ ಹೋಗುವಿರಾ? ಚೆನ್ನಾಯಿತು. ನಾಳೆ ನೆಗಡಿ ಬರಲಿ. ಆ ಮೇಲೆ ನನ್ನನ್ನು ತಾನೇ ನೀವು ಬೈದುಕೊಳ್ಳುವುದು? ಒಳಕ್ಕೆ ನಡೆಯಿರಿ ಮೊದಲು"

ಅವಳ ಆತ್ಮೀಯತೆಯಿಂದ ಅವನಿಗೆ ಸಂತೋಷವಾಯಿತು,

"ಒಳಗೇನೋ ಬರುತ್ತೇನೆ, ನಿಮ್ಮ ಮಾತಿಗೆ ವಿರೋಧ ಹೇಳುವುದಿಲ್ಲ. ಆದರೆ ತಿಂಡಿ ಸಮಾರಾಧನೆ ಬೇಡ"

"ಕೇಳಿದ ಪ್ರಶ್ನೆಗೆ ಉತ್ತರಕೊಡುವುದು ಮಾತ್ರ ಇಟ್ಟುಕೊಂಡರೆ ನೀವು, ನಿಮಗೇ ಅದರಿಂದ ಕ್ಷೇಮವಾದೀತು'' ಎಂದಳು ನೀರಜೆ.

ಎಲ್ಲರೂ ಒಳಕ್ಕೆ ಹೋಗಿ ಕುಳಿತುಕೊಳ್ಳುತ್ತಲೇ ತಿಂಡಿ ಬಂದೇ ಬಂದಿತು.

ತಿಂಡಿಯ ತಟ್ಟೆಯನ್ನು ಹತ್ತಿರ ಎಳೆದುಕೊಳ್ಳುತ್ತಾ ಜನಾರ್ಧನ ಹೇಳಿದ,

"ಈಗ ನೀವಿಬ್ಬರು ಹೆಂಗಸರು ಹಾಡಬಾರದೇಕೆ? ರೇಡಿಯೋವಿನಲ್ಲಿ ಈಗ ಒಳ್ಳೆಯ ಸಂಗೀತವಿಲ್ಲ. ನನಗೆ ಏನಾದರೂ ಕೇಳಬೇಕೆನ್ನಿಸುತ್ತಿದೆ"

"ಅದಕ್ಕೇನು ಆಗಲಿ'' ಎಂದು ನೀರಜೆ, "ಲೀಲಾ ನೀನೂ ಹಾಡುವಿಯಷ್ಟೆ?" ಎಂದಳು.

"ಇಲ್ಲವಮ್ಮಾ ಇಲ್ಲ. ಇವತ್ತು ನನಗೆ ಹಾಡಲು ಸ್ಫೂರ್ತಿಯಿಲ್ಲ. ಅದರಲ್ಲೂ ನಿನ್ನ ಕೋಕಿಲ ಕಂಠದ ಮುಂದೆ ನನ್ನ ಧ್ವನಿಯೆಲ್ಲಿರುತ್ತದೆಯೋ? ನಾನು ಹಾಡುವುದಿಲ್ಲ ನೀರಜ. ನಿನಗೆ ಮನಸ್ಸಿದ್ದರೆ ನೀನ ಹಾಡು" ಎಂದಳು ಲೀಲಾ.

ನೀರಜ ತ್ಯಾಗರಾಜ ಕೀರ್ತನೆಯೊಂದನ್ನು ತುಂಬ ಚೆನ್ನಾಗಿಯೇ ಹಾಡಿದಳು. ಅವಳ ಕಂಠ ಕೋಕಿಲ ಕಂಠವೋ ಅಲ್ಲವೋ, ಹಾಡು ಮಾತ್ರ 'ಮತ್ತೆ ಕೇಳಬೇಕು' ಎನ್ನಿಸುವಷ್ಟು ಹಿತವಾಗಿತ್ತು.

ಕೀರ್ತನೆ ಮುಗಿಯುತ್ತಲೇ ಜನಾರ್ಧನ ಕೇಳಿದ,

"ಈಗ ಹಿಂದೀ ಸಿನೇಮಾ ಹಾಡೊಂದು....''

ನೀರಜ ಒಂದು ಕ್ಷಣವೂ ತಡಮಾಡದೆ ಅವನ ಇಚ್ಛೆಯನ್ನು ಪೂರ್ಣಮಾಡಿ ನಾರಾಯಣನನ್ನೂ ತಣಿಸಿದಳು.

ಹೊರಡುವಾಗ ನಾರಾಯಣನೇ ಕೇಳಿದ,

"ನಾಳೆಯೂ ಆಟ ಉಂಟೋ ?"

"ನೀವು ಬಂದರೆ ನನಗೂ ಉಂಟು" ಎಂದಳು ನೀರಜ ಗಟ್ಟಿಯಾಗಿ ನಗುತ್ತ.

ಮನೆಗೆ ಬಂದ ಕೂಡಲೆ ಮಾಲತಿ ಕೇಳಿದಳು,

"ಎಲ್ಲಿಗೆ ಹೋಗಿದ್ದಿರಿ ?"

"ಎಲ್ಲಿಗೂ ಇಲ್ಲ ಮಾಲಾ. ಇನ್ನು ಮೇಲೆ ಸಂಜೆಯ ಹೊತ್ತು ಸ್ವಲ್ಪ ಆಟಕ್ಕೆ ಹೋಗೋಣ ಎಂದುಕೊಂಡಿದ್ದೇನೆ" ಎಂದು ನಗುತ್ತ ಹೇಳಿ, "ನೀನು ಇದನ್ನು ವಿರೋಧಿಸುವುದಿಲ್ಲವೆಂದು ಗೊತ್ತು ನನಗೆ"

ಮಾಲತಿಗೆ ಅವನ ಅರಳಿದ ಮುಖವನ್ನು ನೋಡಿ ಹಾಸ್ಯಮಾಡಲು ಮನಸ್ಸು ಬರಲಿಲ್ಲ.

"ಬಹಳ ದೂರ ಹೋಗುವಿರೇನು ?"

"ಇಲ್ಲ ಮಾಲಾ, ಇಲ್ಲೇ ಹತ್ತಿರದಲ್ಲಿಯೇ ಒಬ್ಬರ ಮನೆಯಲ್ಲಿ ಆಡುತ್ತೇವೆ"

ಸಹಜವಾಗಿ ಈ ಮಾತು ಅವನ ಬಾಯಿಯಿಂದ ಬಂದುಬಿಟ್ಟಿತು.

ಮಾಲತಿಗೆ ಅವನು ಏನನ್ನಾದರೂ ಮುಚ್ಚಿಟ್ಟಿರಬಹುದೆಂಬ ಶಂಕೆ ಬರಲಿಲ್ಲ. ಅವನು ಹೇಳಿದ್ದನ್ನು ಒಪ್ಪಿಕೊಂಡುಬಿಟ್ಟಳು.

ರಾಘವಯ್ಯನವರ ಮನೆಯಲ್ಲಿ ನಿತ್ಯ ಹಬ್ಬದಂತಿರುತ್ತಿತ್ತು. ಏಳೆಂಟು ಬಾರಿ ಹೋದ ಮೇಲೆ ಅವನೂ ಅವರ ಮನೆಯವನೇನೋ ಎನ್ನುವಂತೆ ವರ್ತಿಸುತ್ತಿದ್ದ. ರಾಘವಯ್ಯನವರು ಅಷ್ಟಾಗಿ ಚಿಕ್ಕವರೊಡನೆ ಬೆರೆಯುತ್ತಿರಲಿಲ್ಲ. ರಾಜಮ್ಮನವರಿಗೆ ಏನೋ ಹೊಲಿಗೆ ಕೆಲಸಗಳು ಸದಾ ಇರುತ್ತಿದ್ದವು. ಅಲ್ಲದೆ ಅವರು "ನಿಮ್ಮ ಜೊತೆಯಲ್ಲಿ ನಾನಿದ್ದರೆ ನನಗೂ ಸರಿಹೋಗದು, ನಿಮಗೂ ಸಂಕೋಚ. ಆದ್ದರಿಂದ ಊಟ ತಿಂಡಿಗಳ ಸಮಯದಲ್ಲಿ ಒಟ್ಟಿಗೆ ಸೇರುತ್ತೇವಲ್ಲ? ಉಳಿದ ಸಮಯಗಳಲ್ಲಿ ನಿಮ್ಮ

ಹಾಡಿಗೆ ನೀವಿರಿ'' ಎಂದು ಹೇಳಿಬಿಟ್ಟಿದ್ದರು. ಈ ಹುಡುಗರಿಗೆ ಬೇಕಾದುದೂ ಅಷ್ಟೆ.

ಸಾಯಂಕಾಲದ ಹೊತ್ತಿನಲ್ಲಿ ನಾರಾಯಣನ ಮನಸ್ಸು ಪ್ರಫುಲ್ಲವಾಗಿ ಇರತೊಡಗಿತು. ಬೆಳಗಿನ ಹೊತ್ತಿನಲ್ಲಿಯೂ ಮೊದಲಿಗಿಂತ ಹೆಚ್ಚು ಉಲ್ಲಾಸದಿಂದ ಇರುತ್ತಿದ್ದ. ಮಾಲತಿಗೆ ಅವನ ಈ ಪರಿವರ್ತನೆಯನ್ನು ನೋಡಿ ಹರ್ಷವಾದರೂ ಒಂದೊಂದು ಸಲ ಕಷ್ಟವಾಗುತ್ತಿತ್ತು ಕೂಡ. ಅವಳಿಗೆ ಇದೀಗ ತಾನೇ ತರಗತಿಯ ಪರೀಕ್ಷೆಗಳು ಮುಗಿದು ಉತ್ತರ ಪತ್ರಿಕೆಗಳು ರಾಶಿರಾಶಿಯಾಗಿ ಬಂದಿದ್ದುವು. ಪಬ್ಲಿಕ್ ಪರೀಕ್ಷೆ ಇನ್ನೇನು ಶುರುವಾಗಲಿತ್ತು. ಇದರ ಮಧ್ಯೆ ನಾರಾಯಣನ ಉತ್ಸಾಹವನ್ನು ಪುರಸ್ಕರಿಸುವುದಕ್ಕೆ ಅವಳಿಗೆ ಬಿಡುವಾಗುತ್ತಲೇ ಇರಲಿಲ್ಲ.

ನಾರಾಯಣನಿಗೆ ತಾನು ನಿತ್ಯ ರಾಘವಯ್ಯನವರ ಮನೆಗೆ ಹೋಗಿ ಬರುತ್ತಿದ್ದರೂ ಅದನ್ನು ಮಾಲತಿಗೆ ಹೇಳಲು ಏನೋ ಅಳುಕು.

ಸಂಜೆಯ ಹೊತ್ತಿನ ಆನಾದರವನ್ನು ಮುಚ್ಚಲೋಸುಗ ಮಿಕ್ಕ ಹೊತ್ತಿನಲ್ಲಿ ಮಾಲತಿಯ ಮೇಲೆ ಅಭಿಮಾನದ ಮಳೆಗರೆಯಲು ಯತ್ನಿಸುತ್ತಿದ್ದ. ಅವಳು ಅದರಿಂದ ಹಿಂದೆಗೆಯಲು ಯತ್ನಿಸಿದರೆ ಅವನಿಗೆ ಕೆನ್ನೆಗೆ ಏಟು ತಿಂದಂತೆ ಅಪಮಾನದ ಅನುಭವವಾಗುತ್ತಿತ್ತು.

"ಬಿಳಿಚಿಕೊಂಡು ಹೋಗುತ್ತಿದ್ದೀ ಮಾಲಾ? ನಿನಗೆ ನಿನ್ನ ಪೋಷಣೆಯನ್ನು ಹೇಗೆ ಮಾಡಿಕೊಳ್ಳಬೇಕೆಂಬುದೇ ತಿಳಿಯದು. ಇನ್ನು ಮೇಲೆ ನಾನೇ ಅದನ್ನು ವಹಿಸಿಕೊಳ್ಳುತ್ತೇನೆ" ಎಂದು ಹೇಳಿ ನಾಲ್ಕಾರು ಶೀಶೆ ಔಷಧಿಗಳನ್ನು ತಂದಿರಿಸಿದ. ಬೆಳಗ್ಗೆಯೊಮ್ಮೆ, ರಾತ್ರೆಯೊಮ್ಮೆ, ತಾನೇ ಅವನ್ನು ಅಳೆದು ಅವಳಿಗೆ ಕುಡಿಸುವುದು ಬೇರೆ. ಆದರೆ ಇದಕ್ಕೆ ಮಾಲತಿ ಏನೂ ಹೇಳಲಿಲ್ಲ. ಅವನು ಔಷಧಿ ಕೊಟ್ಟಾಗ ನಗುಮುಖದಿಂದಲೇ ಕುಡಿಯುತ್ತಿದ್ದಳು. ಅವಳಿಗೆ ಬೇಡವೆನ್ನಿಸಿದುದು ಬೆಳಗಿನ ಹೊತ್ತಿನ ತಿರುಗಾಟ. "ವೈದ್ಯರ ಪ್ರಕಾರ ಸಂಜೆಯ ಹೊತ್ತು ತಿರುಗಾಡಿಕೊಂಡು ಬರುವುದಕ್ಕಿಂತ ಬೆಳಗಿನ ಎಳೆಬಿಸಲಿನಲ್ಲಿ ಸುತ್ತಾಡಿಕೊಂಡು ಬರುವುದೇ ಉತ್ತಮವಾದುದು. ಹೇಗೂ ನಮಗೆ ಆಗ ಬಿಡುವಿದ್ದೇ

ಇರುತ್ತದೆ. ಹೋಗೋಣ'' ಎಂದು ನಾರಾಯಣ ಸೂಚಿಸಿದಾಗ ತಮಾಷೆಗೆ ಹೇಳುತ್ತಾನೆಂದು ತಿಳಿದು,

''ಓಹೋ ಆಗಲಿ, ಆದರೆ ನೀವು ಏಳುಗಂಟೆಗೆ ಮುಂಚೆ ಏಳಲಾಗುವುದಿಲ್ಲವಲ್ಲ?'' ಎಂದು ಹಾಸ್ಯ ಮಾಡಿದಳು.

ಆದರೆ ನಾರಾಯಣ ಮರುದಿನ ಆರುಗಂಟೆಗೇ ಎದ್ದು ಅವಳನ್ನೂ ಎಬ್ಬಿಸಿದ. ತಾನೇನಾದರೂ ಹೇಳಿದರೆ ಅವನ ಮನಸ್ಸಿಗೆ ಬೇಸರವಾದೀ ತೆಂದು ಮಾಲತಿ ಸುಮ್ಮನೆ ಎದ್ದು ಸಿದ್ಧಳಾದಳು.

ಅವರು ಮನೆಯನ್ನು ಬಿಡುವ ವೇಳೆಗೆ ಆರೂವರೆಯಾಗಿತ್ತು. ನಾರಾಯಣ ಅವಳಿಗೆ ಏನೇನೋ ರಾಜಕೀಯ ಗೂಢಗಳನ್ನೆಲ್ಲಾ ಹೇಳುತ್ತ ಬೇಗ ಬೇಗನೇ ಕಾಲು ಹಾಕುತ್ತಿದ್ದ. ಅವನ ಜೊತೆಯಲ್ಲಿ ನಡೆಯುವುದು ಮಾಲತಿಗೆ ಸ್ವಲ್ಪ ಕಷ್ಟವೇ ಆಯಿತು. ಒಂದು ಅರ್ಧಗಂಟೆ ಯಾದ ಮೇಲೆ ಅವಳು ಹೇಳಿದಳು,

"ಇನ್ನು ಹಿಂದಿರುಗೋಣ''

"ಏನು? ಆಗಲೇ ಆಯಾಸವೇ? ಇಷ್ಟು ನೀನು ನಿಶ್ಶಕ್ತಳಾಗಿರು ವುದು ನನಗೆ ಗೊತ್ತಿರಲಿಲ್ಲ'' ಎಂದ ನಾರಾಯಣ, "ಅಥವಾ ನಿನಗೆ ಹಸಿವಾಗಿರಬಹುದು. ಇಲ್ಲೇ ಹೋಟಲಿನಲ್ಲಿ ಒಂದೊಂದು ಲೋಟ ಕಾಫಿ ಕುಡಿದು ಮುಂದೆ ಹೋಗೋಣ''

"ಅಯ್ಯೋ ಬೇಡ. ಆಗಲೇ ಬಿಸಿಲೇರುತ್ತಿದೆ'' ಎಂದಳು ಮಾಲತಿ

"ಬಿಸಲು!" ನಾರಾಯಣ ಗಟ್ಟಿಯಾಗಿ ನಕ್ಕುಬಿಟ್ಟ.

ಹೊಟೇಲಿಗೆ ಹೋಗಿ ಅಲ್ಲಿ ಎರಡು ನಿಮಿಷ ಕುಳಿತಿದ್ದರಿಂದ ಮಾಲತಿಯ ಆಯಾಸ ಸ್ವಲ್ಪ ಪರಿಹಾರವಾಯಿತು. ಮತ್ತೆ ಹೊರಟರು. ಮಾಲತಿ ನಾರಾಯಣ ಎಷ್ಟು ನಗುತ್ತ ಹರಟುತ್ತಿದ್ದನೋ ತಾನೂ ಹಾಗೆಯೇ ಇರಲು ಹಠದಿಂದ ಯತ್ನಮಾಡುತ್ತಿದ್ದಳು, ಹಾಗೂ ಹೀಗೂ ವಿಜಯಿಯೂ ಆದಳು.

"ಏನೊ ಹೇಳಿದೆ ನಾನು ಮಾಲಾ? ನಿನಗೆ ಹಸಿವಾಗಿತ್ತು ಅಷ್ಟೆ"

ಎಂದು ಹಾಸ್ಯಮಾಡಿದ ನಾರಾಯಣ, "ಏನು ಬುದ್ಧಿ ನಿನ್ನದು ಮಾಲಾ! ಹಸಿವಿಗೂ ಆಯಾಸಕ್ಕೂ ವ್ಯತ್ಯಾಸ ತಿಳಿಯುವುದಿಲ್ಲವಲ್ಲ ನಿನಗೆ?"

ಚಿಕ್ಕ ಹುಡುಗನಂತೆ ಉಬ್ಬಿಉಬ್ಬಿ ಮಾತನಾಡುತ್ತಿದ್ದ ಅವನನ್ನು ನೋಡಿ ಮಾಲತಿಗೆ ತನ್ನ ಮೇಲೇ ಕೋಪಬಂದಿತು. ಕಳ್ಳನಗೆಯಿಂದ ಹೇಳಿದಳು,

"ನನಗೆ ಗೊತ್ತಾಗದೆ ಇರುವುದು ನಿಮಗೆ ಗೊತ್ತಾಗುತ್ತದೆ, ನಿಮಗೆ ಸುಳಿವು ಸಿಗದೆ ಇರುವುದೆಷ್ಟೋ ನನಗೆ ತಿಳಿದಿದೆ. ಅಲ್ಲಿಗೆ ನಮ್ಮದು ಆದರ್ಶ ಜೋಡಿಯಾಯಿತು"

ಅವಳ ಮಾತು ಸರಳವಾಗಿದ್ದರೂ ಅವನು ಕೊಂಚ ಅಪ್ರತಿಭನಾಗಿ ಕೇಳಿದ,

"ಏನು, ಏನು ತಿಳಿದಿದೆ ನಿನಗೆ ಮಾಲಾ? ಯಾರಾದರೂ ಏನಾದರೂ ಹುಚ್ಚುಹುಚ್ಚಾಗಿ ನನ್ನ ವಿಷಯ ಹೇಳುತ್ತಿದ್ದಾರೇನು?"

ಈಗ ಮಾಲತಿಗೆ ನಿಜವಾಗಿ ನಗು ಬಂದಿತು,

"ಹೀಗೇ ನೀವು ನನ್ನ ಆರೈಕೆ ಮಾಡತೊಡಗಿದರೆ ಯಾರಾದರೂ ಏನಾದರೂ ಹೇಳಿಯೇ ಹೇಳುತ್ತಾರೆ"

ನಾರಾಯಣ ಸೂಕ್ಷ್ಮವಾಗಿ ಅವಳ ಕಡೆಗೆ ನೋಡಿದ. ಅವಳ ಮುಖದಲ್ಲಿ ಸ್ವಲ್ಪವೂ ಬಿಂಕದ ಛಾಯೆಯಿರಲಿಲ್ಲವೆಂದು ಕಂಡು ಬಂದಿತು. ತಕ್ಷಣ ಅವನ ಮನಸ್ಸು ನಿರಾಳವಾಗಿ ನಗುನಗುತ್ತ ಮಾತನಾಡ ತೊಡಗಿದ.

ಅವರು ಮನೆಗೆ ಬಂದಾಗ ಒಂಭತ್ತು ಗಂಟೆಯಾಗಿತ್ತು. ನಾರಾಯಣ ಊಟಮಾಡಿ ಕೆಲಸಕ್ಕೆ ಪ್ರಸನ್ನನಾಗಿಯೇ ಹೊರಟ. ಆದರೆ ಮಾಲತಿ ಸೋತು ಹೋಗಿದ್ದಳು.

"ಅಮ್ಮಾ, ಇವತ್ತು ಶಾಲೆಯಲ್ಲಿ ಪರೀಕ್ಷೆಯಿಲ್ಲದುದು ನನ್ನ... .... ಎಂದು ಉಸಿರ್ಗರೆದಳು.

ಸಂಜೆಯೂ ನಾರಾಯಣ ರಾಘವಯ್ಯನವರ ಮನೆಯಿಂದ ಬಂದಾಗಲೇ "ಏನೋ ಕಾರ್ಯಕ್ರಮ ಹಾಕಿಕೊಂಡು ಬಂದಿದ್ದಾರೆ" ಎನ್ನಿಸಿತು ಮಾಲತಿಗೆ.

ನಾರಾಯಣ ಊಟ ಮುಗಿಸುವವರೆಗೆ ಏನೂ ಹೇಳಲಿಲ್ಲ. ಬಳಿಕ ತಾನೇ ರಾಮುವನ್ನು ಭುಜದ ಮೇಲೆ ಹಾಕಿಕೊಂಡು ತಟ್ಟಿ ಮಲಗಿಸಿದ. ಒಂಭತ್ತು ಗಂಟೆಯ ಹೊತ್ತಿಗೆ ಎರಡು ಮಕ್ಕಳೂ ನಿದ್ರಿಸಿದುವು.

"ಮಾಲಾ ಬೇಗ ಸಿದ್ಧಳಾಗು, ಹೀಗೇ ಒಂದಿಷ್ಟು ಓಡಾಡಿಕೊಂಡು ಬರೋಣ" ಎಂದು ಆಗ ಹೇಳಿದ.

"ಹೊತ್ತು ಬಹಳವಾಗಲಿಲ್ಲವೇ ?" ಎಂದಳು ಮಾಲತಿ.

"ತುಂಬ ದೂರ ಹೋಗದಿದ್ದರಾಯಿತು" ಎಂದ ನಾರಾಯಣ.

ರಾಶಿ ಬಿದ್ದಿದ್ದ ಉತ್ತರ ಪತ್ರಿಕೆಗಳ ಕಡೆಗೊಮ್ಮೆ ನೋಡಿ, ಮಾಲತಿ ಬಟ್ಟೆ ಬದಲಾಯಿಸಲು ಹೋದಳು.

ಹತ್ತು ಗಂಟೆಯವರೆಗೂ ನಿಧಾನವಾಗಿ ತಿರುಗಾಡುತ್ತಿದ್ದು ಆಮೇಲೆ ಮನೆಗೆ ಬಂದರು. ಇನ್ನೂ ನಾರಾಯಣನ ಉತ್ಸಾಹ ಕುಗ್ಗಿರಲಿಲ್ಲ. ಹಾಸಿಗೆಯ ಮೇಲೆ ಉರುಳಿಕೊಂಡು ಮಾಲತಿಯನ್ನು ಕೂಗಿದ,

"ಮಾಲಾ, ಎಲ್ಲಿ ಒಂದು ಹಾಡು ಹೇಳು"

ಮಾಲತಿಗೆ ಎಲ್ಲಿಲ್ಲದ ಸಂಕೋಚವಾಯಿತು,

"ಇದೇನಿದು ಎಂದೂ ಇಲ್ಲದ ಬೆಚ್ಚರ ? ನಾನು ಹಾಡು ಹೇಳುತ್ತೇನೆಂದು ನಿಮಗೆ ಯಾರು ಹೇಳಿದರು ?"

"ಯಾರೇಕೆ ಹೇಳಬೇಕು ಮಾಲಾ ? ನಿನ್ನ ಧ್ವನಿ ಒಳ್ಳೇ ಇಂಪಾಗಿದೆ. ಅದರಿಂದ ನಿನಗೆ ಹಾಡಲು ಬರುವುದೆಂದು ತಿಳಿದಿದ್ದೆ"

ಮಾಲತಿ ನಕ್ಕಳು, ನಾರಾಯಣ ಕೇಳಿದ,

"ನಿನಗೆ ಸಂಗೀತದಲ್ಲಿ ಅಭಿರುಚಿ ಇಲ್ಲವೇ ಮಾಲಾ ?"

"ಇಲ್ಲದೆ ಏನು ?" ಮಾಲತಿ ಹೇಳಿದಳು, "ಏನೋ ಇದುವರೆಗೂ ಅದನ್ನು ಕಲಿಯಬೇಕೆಂದು ನನಗೆ ತೋಚಿರಲಿಲ್ಲ"

"ಹಾಗಿದ್ದರೆ ಸರಿ" ಎಂದ ನಾರಾಯಣ.

ಮರುದಿನ ಏಳುವಾಗಲೇ ಏನೋ ಅಲಸಿಕೆ ಮಾಲತಿಗೆ, ನಾರಾಯಣ ಆಗಲೇ ಹೊರಗೆ ಹೊರಡಲು ಸಿದ್ಧನಾಗಿದ್ದ,

"ಏಳು ಮಾಲಾ ಹೊತ್ತಾಯಿತು"

"ಇವತ್ತು ಸುತ್ತಲು ಹೋಗಬೇಕೇ?"

"ಇವತ್ತು! ನಿತ್ಯ ಹೋಗಬೇಕು"

ಮಾಲತಿ ಅರೆ ಮನಸ್ಸಿನಿಂದ ನುಡಿದಳು,

"ಉತ್ತರ ಪತ್ರಿಕೆಗಳನ್ನು ತಿದ್ದಬೇಕು. ನಾಳೆಯಿಂದ ಪಬ್ಲಿಕ್ ಪರೀಕ್ಷೆ ಪ್ರಾರಂಭವಾಗುತ್ತದೆ. ಮಧ್ಯಾಹ್ನದ ಹೊತ್ತು ಪುರಸೊತ್ತು ಸಿಗುವುದಿಲ್ಲ."

''ಈ ಕೆಲಸಕ್ಕೆ ಬಾರದ ಕೆಲಸವನ್ನು ಸಂಜೆಯ ಹೊತ್ತು ಮಾಡು ಮಾಲಾ"

''ಈ ತಿರುಗಾಟದಲ್ಲಿ ನನಗೆ ತುಂಬಾ ಸುಸ್ತಾಗಿ, ದಿನವೆಲ್ಲಾ ಒಂದು ತರಹ ಇರುತ್ತೆ. ಯಾವುದನ್ನು ಮಾಡುವುದಕ್ಕೂ ಆಸಕ್ತಿ, ಉತ್ಸಾಹಗಳೇ ಇರುವುದಿಲ್ಲ"

ನಾರಾಯಣನಿಗೆ ಸ್ವಲ್ಪ ಸಿಟ್ಟು ಬಂದಿತು.

"ಯಾರಿಗಾಗಿ ನಾನು ಹೇಳುವುದು ಮಾಲಾ? ಏಕೋ ನನ್ನ ಮಾತು ಅಂದರೆ ನಿನಗೆ ಮೊದಲಿನಷ್ಟು ವಿಶ್ವಾಸವಿಲ್ಲ''

ಮಾಲತಿಗೆ ಈ ಮಾತಿನಿಂದ ತುಸು ದುಃಖವೇ ಆಯಿತು. ಮಾತನಾಡದೆ ಎದ್ದು ಐದು ನಿಮಿಷಗಳಲ್ಲಿ ಸಿದ್ಧಳಾಗಿ ಬಂದಳು,

"ಹುಂ, ನಾನು ಸಿದ್ಧಳಾಗಿದ್ದೇನೆ"

''ಇಷ್ಟು ಕೋಪದಿಂದ ಹೋದರೆ ವೈಗೆ ವಿರೋಧವಾಗುತ್ತದೆಯಷ್ಟೆ"

"ಕೋಪವಿಲ್ಲ" ಮಾಲತಿ ನಗುವನ್ನು ಮುಖದ ಮೇಲೆ ಎಷ್ಟೋ ಕಷ್ಟದಿಂದ ತಂದುಕೊಂಡು ಹೇಳಿದಳು, ''ನೀವೀಗ ದೊಡ್ಡ ವೈದ್ಯರಾಗಿ ಬಿಟ್ಟಿದ್ದೀರಿ. ನಿಮಗಾಗಿಯಾದರೂ ನೀವು ಕೊಟ್ಟ ಔಷಧ ಉಪಚಾರಗಳನ್ನು ತೆಗೆದುಕೊಳ್ಳಬೇಕು. ಏನು ಮಾಡುವುದು?"

ಅವಳ ಉಪಮಾನ ನಾರಾಯಣನಿಗೆ ಒಪ್ಪಿಗೆಯಾಯಿತು. ಅವನ ಸಿಟ್ಟು ಕರಗಿತು.

ಏಳೆಂಟು ದಿನಗಳು ಹೀಗೆ ಕಳೆದಮೇಲೆ ನಾರಾಯಣ ಇದ್ದಕ್ಕಿದ್ದಂತೆ ಒಂದು ದಿನ ಹೇಳಿದ,

"ಮಾಲಾ, ನಿನಗೆ ವೀಣೆ ಹೇಳಿಕೊಡಲು ಸಂಗೀತ ವಿದ್ವಾಂಸರೊಬ್ಬರಿಗೆ ಹೇಳಿದ್ದೇನೆ"

ಮಾಲತಿ ಅವಾಕ್ಕಾದಳು.

"ಏನು, ಸಂತೋಷವಾಯಿತು ತಾನೇ?"

"ಇದಕ್ಕೆಲ್ಲಾ ನನಗೆ ಬಿಡುವೆಲ್ಲಿದೆ? ನಮಗೆ ಬೇಸಿಗೆ ರಜದಲ್ಲಿ ಶಿಕ್ಷಣ ಶಿಬಿರ ಬೇರೆ ಇದೆಯಂತೆ" ಮಾತು ತಾನಾಗಿ ಮಾಲತಿಯ ಬಾಯಿಂದ ಹೊರಬಿತ್ತು.

ಅವಳ ನಿರುತ್ಸಾಹದಿಂದ ನಾರಾಯಣನ ಮುಖ ಇಳಿಬಿದ್ದಿತು. ನಿಟ್ಟುಸಿರಿಟ್ಟು ಕೇಳಿದ,

"ಮಾಲಾ, ಈಚೆಗೆ ಏನೋ ಸರಿಯಾಗಿಲ್ಲ. ಏನಾಗಿದೆ ನಮಗೆ ಹೇಳು"

ಮಾಲತಿಗೂ ವ್ಯಥೆಯಾಯಿತು.

"ನನಗೆ ಅದು ಗೊತ್ತಿಲ್ಲ"

ನಾರಾಯಣನ ಮುಖವನ್ನು ನೋಡಿ ಮಾಲತಿಗೆ ತಾನು ಆಡಿದ ಮಾತು ಅನುಚಿತವಾದದ್ದೆನ್ನಿಸಿತು. ಮರುದಿವಸ ಸಮಯ ಸಾಧಿಸಿ ಇಲ್ಲದ ಆತುರ ತೋರಿಸಿ ಕೇಳಿದಳು,

"ಎಂದಿನಿಂದ ಸಂಗೀತದ ಉಪಾಧ್ಯಾಯರು ಪಾಠಕ್ಕೆ ಬರುತ್ತಾರೆ?"

"ನಿನಗೆ ಎಂದಿನಿಂದ ಕಲಿಯಲು ಇಚ್ಛೆಯಾಗುವುದೋ ಅಂದಿನಿಂದ" ಎಂದ ನಾರಾಯಣ ಸುಪ್ರಸನ್ನನಾಗಿ.

"ಹಾಗಿದ್ದರೆ ಈ ಗುರುವಾರದಿಂದ ಬರಲಿ"

ಇದುವರೆಗೆ ರಾಘವಯ್ಯನವರ ಮನೆಯಲ್ಲಿ ಮಾಲತಿಯ ವಿಷಯದಲ್ಲಿ ಯಾರೂ ಅಷ್ಟು ಕುತೂಹಲವನ್ನು ತೋರಿಸಿರಲಿಲ್ಲ. ಎಲ್ಲೋ ಒಂದು ಸಲ ಲೀಲಾ ಹೇಳಿದ್ದಳು,

"ನಿಮ್ಮ ಮಾಲತಿ ಬಹಳ ಸುಂದರಿಯೆಂದು ಅವರನ್ನು ಮನೆ

ಯೊಳಕ್ಕೇ ಇಟ್ಟು ಬಚ್ಚಿಟ್ಟಿರುವಿರೇನು? ಇಲ್ಲಿಗೆ ಒಂದು ಬಾರಿ ಕರೆದು ಕೊಂಡು ಬನ್ನಿ. ಅಲಂಕಾರಗಳಿಲ್ಲದೇ ರೂಪವತಿಯಾಗಿ ಕಾಣುವುದು ಸಾಧ್ಯವೆಂದು ನೀರಜೆಗೆ ತಿಳಿಯಲಿ" ಅದಕ್ಕೆ ನೀರಜೆ ಮುಖವನ್ನು ಸಣ್ಣದು ಮಾಡಿಕೊಂಡು ಹೇಳಿದ್ದಳು,

"ಅಲಂಕಾರ ಮಾಡಿಕೊಳ್ಳುವುದು ಒಂದು ವಿಧವಾದ ರಸಿಕತೆ ಲೀಲಾ. ರೂಪವಿರಲಿ, ಇಲ್ಲದಿರಲಿ ನಾವು ಇರುವ ಸಮಾಜದ ಮರ್ಯಾದೆಗೆ, ನಮ್ಮ ಮನಸ್ಸಿನ ತೃಪ್ತಿಗೆ ಎಂದಾದರೂ ಸ್ವಲ್ಪ ಅಲಂಕಾರ ಅವಶ್ಯಕ"

"ನಿಜ, ಇಲ್ಲದಿದ್ದರೆ ಎಲ್ಲರೂ ಒಂದೊಂದು ದುಪಟಿ ಹೊದ್ದು ದಿನ ಸಾಗಿಸುತ್ತಿದ್ದೆವು" ಎಂದು ಜನಾರ್ಧನ ಅವಳ ಮಾತನ್ನು ಸಮರ್ಥಿಸಿದ.

"ಪ್ರತಿಯೊಬ್ಬರ ಉಡುಪಿನ ರೀತಿ ಅವರ ಮನಸ್ಸಿನ ಸಂಸ್ಕಾರವನ್ನು ತೋರಿಸುತ್ತದೆ. ಕೆಲವರು ಹುಟ್ಟುವಾಗಲೇ ಮುದುಕರು, "ಏನೋ ಉಟ್ಟರಾಯಿತು, ತೊಟ್ಟರಾಯಿತು" ಎಂದು ನಿರಾಸಕ್ತಿಯಿಂದ ಇದ್ದ ಮಾತ್ರ ಅವರು ಶ್ರೇಷ್ಠರು ಎಂದು ತಿಳಿಯಬಾರದು'' ಎಂದು ನೀರಜ ಆ ಮಾತನ್ನು ಮುಗಿಸಿದ್ದಳು.

ಅದಕ್ಕೆ ನಾರಾಯಣ ಅವತ್ತು ಏನೂ ಹೇಳದಿದ್ದರೂ ಇನ್ನೊಂದು ಸಂದರ್ಭದಲ್ಲಿ ಹೇಳಿದ,

"ಅವತ್ತು ಲೀಲಾ ಮಾಲತಿಯು ಸರಳವಾದ ಉಡುಪು ಧರಿಸುತ್ತಾ ಳೆಂದು ಹೇಳಿದಾಗ ನೀವು ತಪ್ಪು ತಿಳಿದುಕೊಂಡಿರಿ. ಆದರೆ ನಿಜವಾದ ಸಂಗತಿಯೇ ಬೇರೆ. ಮಾಲತಿ ಬೆಲೆಬಾಳುವ ಆಭರಣಗಳನ್ನು ಧರಿಸದೆ ಇದ್ದರೂ ಅವಳ ಉಡುಪಿನ ರೀತಿಯಲ್ಲಿ, ಮರ್ಯಾದೆಗೂ ಕುಂದಿಲ್ಲ, ರಸಿಕತೆಗೂ ಅಭಾವವಿಲ್ಲ. ಅಲ್ಲದೆ ಮಗುವಿನಂತೆ ಸಹಜವಾಗಿ ಸುಖಿ ಯಾಗಿ, ಸಂತೋಷಿಯಾಗಿ ಇರುತ್ತಾಳೆ. ಅವಳಿಗೆ ನಿಜವಾದ ಮುಪ್ಪು ಬಂದರೂ ಅವಳ ಹಾಸ್ಯಪ್ರಿಯತೆ, ಉತ್ಸಾಹಗಳು ಕಡಿಮೆಯಾಗಲಾರವು"

ನೀರಜ ಆಶ್ಚರ್ಯದಿಂದ ಅವನ ಮುಖವನ್ನು ನೋಡುತ್ತ ನಸುನಕ್ಕಳು,

"ಏನು, ನೀವು ಪತ್ನೀಪೂಜಕರೆಂದು ತೋರುತ್ತದೆಯಲ್ಲಾ ?"

"ಪೂಜೆಯ ಮಾತು ನನಗೆ ಗೊತ್ತಿಲ್ಲ. ಇದ್ದ ಮಾತನ್ನು ಹೇಳಿದೆ. ಅಷ್ಟೆ"

ಮತ್ತೆ ಬಹುದಿನಗಳು ಅವರೆಲ್ಲರೂ ಮಾಲತಿಯನ್ನು ಮರೆತವರಂತಿದ್ದರು.

ಒಂದು ದಿನ ನಾರಾಯಣ ಮಾಲತಿಗೆ ಹೇಳಿದ,

"ಇವತ್ತು ನಾನು ಆಟದಿಂದ ಬೇಗನೆ ಬಂದು ಬಿಡುತ್ತೇನೆ. ಸಿನೇಮಾಗೆ ಹೋಗೋಣ."

ಮಾಲತಿಗೂ ಸ್ವಲ್ಪ ಬೇಸರವಾಗಿತ್ತು,

"ಆಗಲಿ, ಬೇಗ ಬನ್ನಿ ನಾನು ಸಿದ್ಧವಾಗಿರುತ್ತೇನೆ" ಎಂದಳು.

ಆಟ ಪ್ರಾರಂಭವಾದರೆ, ಮಧ್ಯದಲ್ಲಿ ನೀರಜೆ ಹೋಗಗೊಡುವಳೋ ಇಲ್ಲವೋ ಎಂದು ನಾರಾಯಣನಿಗೆ ಅನುಮಾನ ಬಂದಿತು. ಅದರಿಂದ ಹೇಳಿದ,

"ನೀರಜಾ ಇವತ್ತು ನಾನು ಬೇಗ ಹೋಗಬೇಕು. ಅದರಿಂದ ಆಟಕ್ಕೆ ಇಳಿಯುವುದಿಲ್ಲ. ನೀವುಗಳು ಆಡುವುದನ್ನು ಹತ್ತು ನಿಮಿಷ ನೋಡುತ್ತಿದ್ದು ಹೋಗುತ್ತೇನೆ"

"ಅದೇನು ಇವತ್ತು?"

"ಮಾಲತಿಯನ್ನು ಸಿನೇಮಾಕ್ಕೆ ಕರೆದುಕೊಂಡು ಹೋಗಬೇಕು"

"ಓ!" ಎಂದಳು ನೀರಜೆ.

ಅವಳೂ ಆಟಕ್ಕೆ ಹೋಗಲಿಲ್ಲ. ಲೀಲಾ ಜನಾರ್ಧನರು ಆಡುವುದನ್ನು ನೋಡುತ್ತ ಅವಳೂ ನಾರಾಯಣನ ಜೊತೆಗೆ ಕುಳಿತುಕೊಂಡಳು.

ಒಂದೆರಡು ನಿಮಿಷಗಳಾದಮೇಲೆ ಅವಳು ಮೌನದಿಂದ ಇರುವುದನ್ನು ನೋಡಿ ನಾರಾಯಣ ಕೇಳಿದ,

"ಆಟ ತಪ್ಪಿತೆಂದು ದುಃಖವೇ ನೀರಜಾ ?"

“ಅದೇನಿಲ್ಲ. ನಿಮ್ಮ ವಿಷಯವನ್ನೆ ಯೋಚಿಸುತ್ತಿದ್ದೆ. ಮಾಲತಿಯಲ್ಲಿ ನಿಮಗೆ ತುಂಬ ಅಭಿಮಾನ ಅಲ್ಲವೇ?”

“ಹುಂ”

“ಹಾಗಿದ್ದರೂ ನಿತ್ಯ ಸಂಜೆಯ ಹೊತ್ತು ಗಂಟೆಗಟ್ಟಲೆ ನಮ್ಮ ಮನೆಯಲ್ಲಿ ಕಳೆಯುತ್ತೀರಿ. ಇದು ಸಹಜವೆ ಎಂದು ಯೋಚನೆ ಬಂದಿತು ನನಗೆ”

“ಆಟದಲ್ಲಿ ಆಸಕ್ತಿ ಹೆಚ್ಚು ನನಗೆ”

“ಅವರಿಗಿಲ್ಲವೆ?”

“ಇರಲಾರದು”

“ಅದು ಹೇಗೆ ಗೊತ್ತು ನಿಮಗೆ? ಒಂದು ದಿನವೂ ನೀವು ಅವರನ್ನು ಇಲ್ಲಿಗೆ ಆಟಕ್ಕೆ ಕರೆತಂದಿಲ್ಲ. ಈಗಿರುವ ಇಲ್ಲಿನ ಸನ್ನಿವೇಶದಲ್ಲಿಯೇ ತೃಪ್ತರಾಗಿರುತ್ತೀರಿ. ಏತಕ್ಕೆ?”

ನಾರಾಯಣನಿಗೆ ನೀರಜೆಯ ಮಾತು ವಿಚಿತ್ರವಾಗಿ ಕಂಡಿತು,

“ಏನು ಹೇಳುತ್ತಿದ್ದೀರಿ ನೀರಜಾ? ನಾನು ನಿಮಗೆ ಒಗಟಾದೆನೇನು?”

“ಇಲ್ಲ, ಇಲ್ಲ” ಎಂದಳು ನೀರಜ, “ನಿಮ್ಮನ್ನು ನಾನು ಸಂಪೂರ್ಣವಾಗಿ ಅರ್ಥಮಾಡಿಕೊಂಡಿದ್ದೇನೆ”

“ಹಾಗಾದರೆ ನೀವು ನನ್ನನ್ನು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡಿ”

“ಅದು ನನ್ನಿಂದ ಆಗದ ವಿಷಯ” ನೀರಜಳ ಧ್ವನಿ ಸ್ನೇಹವ್ಯಂಜಕವಾಗಿತ್ತು.

“ಏಕೆ?”

ಅವನ ಮುಖವನ್ನು ನಸುನಗೆಯಿಂದ ನೋಡಿ ನೀರಜೆ ಹೇಳಿದಳು,

“ಅದು ನಿಮಗೆ ಗೊತ್ತಿಲ್ಲದ ಪಕ್ಷದಲ್ಲಿ ಒಳ್ಳೆಯದೇ ಆಯಿತು. ಸತ್ಯ ಯಾವಾಗಲೂ ರುಚಿಕರವಾದುದಲ್ಲ.”

“ಛೇ! ನೀರಜಾ, ಈಗ ನೀವು ನನ್ನನ್ನು ತೊಂದರೆಯಲ್ಲಿ ಸಿಕ್ಕಿಸಿಬಿಟ್ಟಿರಿ. ನೀವು ನೀವಾಡುತ್ತಿರುವ ಮಾತಿನ ಅರ್ಥವನ್ನು ಸರಿಯಾಗಿ ತಿಳಿಸದ ಹೊರತು ನನಗೆ ನೆಮ್ಮದಿಯಿರುವುದಿಲ್ಲ”

ಒಂದು ಕ್ಷಣ ನೀರವವಾಗಿದ್ದಳು ನೀರಜ. ಬಳಿಕ ತಲೆಯೆತ್ತಿ ಮೃದುವಾಗಿ ಹೇಳಿದಳು,

"ನಾರಾಯಣ್ ನೀವು ಸಿಟ್ಟಾಗುವುದಿಲ್ಲ, ಖಿನ್ನರಾಗುವುದಿಲ್ಲವೆಂದು ಮಾತು ಕೊಟ್ಟರೆ ನಾನು ಈ ಮಾತಿನ ಅರ್ಥವನ್ನು ನಿಮಗೆ ಹೇಳುತ್ತೇನೆ"

"ಹೇಳಿ ಮತ್ತೆ"

"ಏನು ಅಂದರೆ" ಅವನ ಮುಖವನ್ನು ಸಹಾನುಭೂತಿಯಿಂದ ನಿಟ್ಟಿಸಿ ನೋಡುತ್ತ ನೀರಜ ಹೇಳಿದಳು, "ನಿಮಗೆ ನಿಮ್ಮ ಮಾಲತಿಯಲ್ಲಿ ರುವಷ್ಟು ಆದರ ಆಕೆಗೆ ನಿಮ್ಮಲ್ಲಿದೆಯೆ ?"

"ಅದೂ ಪ್ರಶ್ನೆಯೇ ಆಯಿತು. ಅದಕ್ಕೆ ಉತ್ತರವನ್ನು ನಾನು ಸುಲಭವಾಗಿ ಕೊಡುತ್ತೇನೆ. ಮಾಲತಿಗೆ ಇನ್ನಿತರ ವಸ್ತು, ಮನಷ್ಯರು ಗಳಿಗಿಂತ ನನ್ನಲ್ಲಿ ಅತ್ಯಂತ ಹೆಚ್ಚಾಗಿ ಆದರವಿದೆ."

"ಇದನ್ನು ನೀವು ನಂಬಲು ಇಷ್ಟಪಡುತ್ತೀರಿ"

"ಇಷ್ಟ ! ನಂಬಿದ್ದೇನೆ." ಎಂದು ನಾರಾಯಣ ಗಂಭೀರನಾಗಿ ಹೇಳಿದ, "ಈ ವಿಷಯದಲ್ಲಿ ನನಗೆ ತಿಳಿದಿರುವಷ್ಟು ನಿಮಗೆ ತಿಳಿಯಲು ಅಸಾಧ್ಯ"

"ನಾರಾಯಣ್ ನೀವು ಹೀಗೆಯೇ ಹೇಳುವಿರೆಂದು ನನಗೆ ಗೊತ್ತಿತ್ತು" ಎಂದು ವ್ಯಸನದಿಂದ ನಕ್ಕಳು ನೀರಜೆ "ನಿಮ್ಮನ್ನು ನೋಡಿ ದರೆ ನನಗೆ ತುಂಬ ವ್ಯಥೆಯಾಗುತ್ತದೆ"

ಅವಳ ಧ್ವನಿಯಲ್ಲಿದ್ದ ಮಾರ್ದವ ನಾರಾಯಣನನ್ನು ದಿಗ್ಭ್ರಮೆ ಗೊಳಿಸಿತು. ದುಃಖದಿಂದ ಅವಳ ಮುಖ ಕಾಂತಿಹೀನವಾಗಿದ್ದಂತೆ ಅವನಿಗೆ ತೋರಿತು,

"ಸರಿಯಾಗಿ ತಿಳಿದುಕೊಳ್ಳದೆ ಸುಮ್ಮನೆ ನೊಂದುಕೊಳ್ಳುತ್ತೀರಿ, ನೀರಜಾ, ನಿಮಗೆ ಹೇಗೆ ತಿಳಿಯ ಹೇಳಿ ಸಮಾಧಾನ ಪಡಿಸಬೇಕೆಂದು ನನಗೆ ತಿಳಿಯದು" ಎಂದ ಅವನು.

"ನಾನು ನಿಜವನ್ನು ಹೇಳಲೇ ನಾರಾಯಣ್ ? ಅವರು ರೂಪದಲ್ಲಿ ಕಡಿಮೆಯಿಲ್ಲವೆಂದು ಕೇಳಿದ್ದೇನೆ. ಆದರೂ ನೀವು ಹಸಿದ ಹುಡುಗನಂತೆ

ಮುಖವನ್ನು ಹಾಕಿಕೊಂಡಿರುತ್ತೀರಿ. ಒಂದು ಒಳ್ಳೆಯ, ಮಮತೆಯ ಮಾತನ್ನು ಯಾರಾದರೂ ಆಡಿದರೆ ನಿಮ್ಮ ಮುಖ ಹಿಗ್ಗಿ ಅರಳಿಕೊಳ್ಳುತ್ತದೆ. ನಿಮ್ಮನ್ನು ನೋಡಿದ ಯಾರಿಗಾದರೂ ನಿಮಗೆ ಪ್ರೀತಿಯ ಕೊರತೆಯಿದೆಯೆಂದು ತಿಳಿಯುತ್ತದೆ"

"ಹೇಳಿ, ಹೇಳಿ. ಈ ವಿಷಯ ನನಗೇ ಗೊತ್ತಿರಲಿಲ್ಲ" ಹಾಸ್ಯದಲ್ಲಿ ಮಾತು ಹಾರಿಸಲು ನೋಡಿದ. ನಾರಾಯಣ.

ನೀರಜೆ ಗಂಭೀರಳಾಗಿ ಕೇಳಿದಳು,

"ಸತ್ಯವಾಗಿ ಹೇಳಿ ನಾರಾಯಣ್, ಮಾಲತಿ ನಿಮ್ಮ ಜೊತೆಯಲ್ಲಿರುವಾಗ ನಿಮ್ಮಷ್ಟೇ ಆನಂದ, ಉತ್ಸಾಹಗಳಿಂದ ಇರುತ್ತಾರೆಯೇ? ನಿಮ್ಮ ಪ್ರತಿಯೊಂದು ಮಾತಿಗೂ ಸರಿಯಾಗಿ ಉತ್ತರ ಕೊಡುತ್ತಾರೆಯೆ? ನೀವು ಕರೆದಲ್ಲಿಗೆ ಎರಡು ಬಾರಿ ಹೇಳಿಸಿಕೊಳ್ಳದೆಯೆ ಬರುತ್ತಾರೆಯೆ? ನಿಮಗೆ ಆಯಾಸವಾದರೆ, ಬೇಸರವಾದರೆ ಅವು ಬೇಗ ಅವರ ಗಮನಕ್ಕೆ ಬರುತ್ತದೆಯೆ?"

ನಾರಾಯಣ ಈ ಪ್ರಶ್ನಾ ಜಾಲದಲ್ಲಿ ಹಾದಿಗಾಣದಂತಾಗಿ ಬೆಪ್ಪಾಗಿ ಕುಳಿತ.

"ನೀರಜಾ ನೀವು ಮನಶ್ಶಾಸ್ತ್ರವನ್ನು ಅಭ್ಯಾಸಮಾಡಿದ್ದೀರೇನು?"

ಫಕ್ಕನೆ ನಕ್ಕು ನೀರಜ ಎದ್ದು ನಿಂತಳು,

"ಏಳಿ ನಾರಾಯಣ್ ಇನ್ನು ನೀವು ಮನೆಗೆ ಹೊರಡಿ. ಆಗಲೇ ಹೊತ್ತು ಮೀರಿತು''

ಅನುಮಾನಿಸುತ್ತ ನಾರಾಯಣ ಎದ್ದು ಹೊರಟ,

"ಆಗಲಿ ಬರುತ್ತೇನೆ, ನಮಸ್ತೆ''

"ನಮಸ್ತೆ''

ನಾರಾಯಣ ಮನೆ ತಲುಪಿದಾಗ ಅನಂತ ಮನೆಯ ಬಾಗಿಲಿನಲ್ಲಿ ಕುಳಿತು ಮಾಲತಿಯೊಡನೆ ಮಾತನಾಡುತ್ತಿದ್ದ.

ಮದುವೆಗೆ ನಮ್ಮನ್ನು ಕರೆಯಲು ಬಂದಿದ್ದಾರೆ ನಿಮ್ಮ ಗೆಳೆಯರು'' ಎಂದಳು ಮಾಲತಿ.

"ಮರೆತೇ ಬಿಟ್ಟಿದ್ದನೇನೋ, ಭೂಪ! ಅವನ ಮುಖ ನೋಡೀಮ್ಮ" ಅನಂತ ನುಡಿದ

ನಾರಾಯಣನಿಗೆ ಒಂದು ಕ್ಷಣ ಅಪಮಾನದಿಂದ ಮುಖ ಕೆಂಪೇರಿತು ಅವನು ಅನಂತನ ಮನೆಗೆ ಹೋಗಿ ಎಷ್ಟೋ ದಿನಗಳಾಗಿ ಹೋಗಿದ್ದುವು. ಅದೂ ಹೋಗಲಿ ಎಂದರೆ ಅವನ ಮದುವೆಯ ದಿನ ಕೂಡ ನೆನಪಿನಲ್ಲಿರಲಿಲ್ಲ.

ಆದರೆ ಅನಂತನಿಗೆ ಅವನ ಮುಖದ ಕಡೆಗೆ ಧ್ಯಾಸವಿರಲಿಲ್ಲ, ತಮಾಷೆಗೊಂದು ಮಾತನಾಡಿದ್ದ ಅಷ್ಟೆ.

''ಹೋಗಲಿ ಈ ಬಾರಿ ಚಿಕ್ಕದಂಪತಿಗಳೆಂದು ನಿಮ್ಮನ್ನು ಕ್ಷಮಿಸಿದ್ದೇನೆ. ಆದರೆ ಈಗ ನನ್ನ ಸಣ್ಣದೊಂದು ನಿಯಮಕ್ಕೆ ನೀವು ಬದ್ಧರಾಗಬೇಕಾಯಿತು. ಇವತ್ತು ನನ್ನ ಜೊತೆಗೇ ನಮ್ಮ ಮನೆಗೆ ಬಂದು ವಧೂವರರಿಗಾಗಿ ತಂದಿರುವ ವಸ್ತ್ರಭೂಷಣಗಳನ್ನು ನೋಡಿ ಸೂಕ್ತ ಸಲಹೆಗಳನ್ನು ಕೊಡಬೇಕು''

ಮಾಲತಿ ನಾರಾಯಣನಿಗೆ ಟೀ ತರಲು ಎದ್ದು ನಗುತ್ತ ಹೇಳಿದಳು,

''ಉದ್ಧಾರವಾದೆವು. ಬೇಕಾದಷ್ಟು ಸಲಹೆ ಕೊಟ್ಟು ಟೀಕೆ ಮಾಡಿ ನಿಮಗೆ ತಲೆಚಿಟ್ಟು ಹಿಡಿಸಿ ಬರುತ್ತೇವೆ''

ನಾರಾಯಣ ಟೀ ಕುಡಿದು ಎದ್ದ.

"ಏಳು ಅನಂತ, ಹೋಗೋಣ. ಬಾ ಮಾಲಾ"

ಅನಂತನ ಮನೆ ನಾರಾಯಣನ ಮನೆಯಿಂದ ದೂರವೂ ಅಲ್ಲ ಹತ್ತಿರವೂ ಅಲ್ಲ. ನಡೆದುಕೊಂಡು ಇವರು ಅಲ್ಲಿಗೆ ಸೇರಿದಾಗ ಏಳು ಗಂಟೆಯಾಗಿತ್ತು. ಆಮೇಲೆ ಆ ಬಟ್ಟೆಗಳನ್ನು ನೋಡುವುದು, ಅದರ ಮೂಲಬೆಲೆ, ಈಗಿನ ಬೆಲೆಗಳ ಚರ್ಚೆ ನಡೆದುವು. ಅವರ ಮನೆ ತುಂಬ ನೆಂಟರು ಬಂದಿಳಿದಿದ್ದರು. ಅವರ ಪರಿಚಯಗಳೆಲ್ಲ ಒಂದಿಷ್ಟು ಸಮಯ ಹಿಡಿದುವು. ಕೊನೆಗೆ ಎಂಟೂವರೆ ಗಂಟೆಗೆ,

''ಇನ್ನು ಬರುತ್ತೇವೆ'' ಎಂದು ಮಾಲತಿ ಎದ್ದಳು.

"ಮದುವೆಯ ಮೂರು ದಿನಗಳೂ ಇಲ್ಲಿಯೇ ಇದ್ದುಬಿಡಬೇಕು ನೀವಿಬ್ಬರೂ" ಎಂದು ಅನಂತನ ತಂದೆ ತಾಯಿಗಳಿಂದಲೂ ಆಹ್ವಾನ ಸಿಕ್ಕಿತು.

"ಆಗಲಿ, ಆಗಲಿ" ಎಂದು ಎಲ್ಲರಿಗೂ ಕೈಮುಗಿದು ಇಬ್ಬರೂ ಮನೆಗೆ ಹಿಂದಿರುಗಿದರು.

ಮಾಲತಿಗೆ ಆ ಗುಂಪಿನ ಮಧ್ಯೆ ಅಷ್ಟು ಹೊತ್ತು ಇದ್ದದ್ದು ಏನೋ ಒಂದು ವಿಧವಾದ ಆಯಾಸವಾಗಿತ್ತು. ರಾತ್ರೆಯ ಗಾಳಿಯೂ ತಂಪಾಗಿರಲಿಲ್ಲ. ಆದ್ದರಿಂದ ನಿಧಾನವಾಗಿ ಮಾತನಾಡದೆ ನಡೆಯುತ್ತಿದ್ದಳು. ನಾರಾಯಣನೂ ಏಕೋ ಮಾತು ಪ್ರಾರಂಭಿಸಲಿಲ್ಲ ಮನೆಗೆ ಒಂದು ಊಟಮಾಡಿದ ಮೇಲೆ ನಾರಾಯಣ ಇದ್ದಕ್ಕಿದ್ದಂತೆ ಹೇಳಿದ,

"ಮಾಲಾ ಇವತ್ತು ನಿನ್ನನ್ನು ಸಿನೇಮಾಕ್ಕೆ ಕರೆದುಕೊಂಡು ಹೋಗಬೇಕೆಂದಿದ್ದೆ. ಎಲ್ಲಿ ಬೇಗ ಬರಲು ಆಟ ಅಡ್ಡಿಯಾಗುತ್ತದೆಯೋ ಎಂದು ಆಟವನ್ನೂ ಆಡದೆ ಕುಳಿತು ನೋಡುತ್ತಿದ್ದೆ. ಆದರೂ ಏನೋ ಆಕಸ್ಮಿಕ ಪ್ರಸಂಗದಿಂದ ಬರಲು ತಡವಾಯಿತು. ನೀನು ಕಾದಿದ್ದೆಯೇನು ?"

ಮಾಲತಿ ಸುಮ್ಮನೆ ಹೇಳಿದಳು,

"ಕಾದಿರಲಿಲ್ಲವೆಂದೇ ಹೇಳಬೇಕು. ಒಂದು ವಿಧದಲ್ಲಿ ನೋಡಿದರೆ ನಾವು ಸಿನೇಮಾಗೆ ಹೋಗದಿದ್ದುದೇ ಒಳ್ಳೆತಾಯಿತು. ಇಲ್ಲದಿದ್ದರೆ ನಿಮ್ಮ ಸ್ನೇಹಿತರಿಗೆ ಆಶಾಭಂಗವಾಗಿರುತ್ತಿತ್ತು"

"ಅದಿರಲಿ ಮಾಲಾ. ನಾನು ತಡವಾಗಿ ಬಂದಿದ್ದರಿಂದ ನಿನಗೆ ಏನೂ ಅನ್ನಿಸಲಿಲ್ಲವೆ ?"

"ಏನಾದರೊಂದು ಹೇಳಿ ಇವರ ಮನಸ್ಸನ್ನೇಕೆ ನೋಯಿಸುವುದು ?" ಎಂದುಕೊಂಡು ಮಾಲತಿ ಹೇಳಿದಳು, "ತಡವಾಯಿತೆಂಬುದರ ಮೇಲೆ ನನ್ನ ಗಮನವೇ ಹೋಗಿರಲಿಲ್ಲ"

ನಾರಾಯಣನಿಗೆ ನೀರಜೆಯ ಮಾತುಗಳು ನೆನಪಿಗೆ ಬಂದುವು. "ಛೆ, ಸಲ್ಲದ ವಿಷಯಗಳಿಗೆ ಮನದಲ್ಲಿ ಎಡೆಗೊಡಬಾರದು." ಎಂದು ತನ್ನ ಮನಸ್ಸನ್ನು ಹತೋಟಿಗೆ ತಂದುಕೊಂಡು ಹೇಳಿದ,

"ಚಿಂತೆಯಿಲ್ಲ ಈಗೇನಾಯ್ತು? ಎರಡನೆ ಝಾವದ ಸಿನೇಮಾಗೆ ಹೋಗೋಣ ಏಳು. ಮಕ್ಕಳು ಹೇಗೂ ಮಲಗಿವೆ. ಊಟದ ತಾಪತ್ರಯವೂ ಇಲ್ಲ."

ಮಾಲತಿ ಚಕಿತಳಾಗಿ ಕೇಳಿದಳು,

"ಈಗ ಸಿನೇಮವೆ ?

"ಹುಂ. ಏಕಾಗಬಾರದು?"

"ನೀವೂ ಸರಿ. ನಾಳೆ ಬೆಳಿಗ್ಗೆ ಮದುವೆ ಮನೆಗೆ ಹೋಗಬೇಕಾಗುತ್ತದೆ. ಈಗಾಗಲೇ ಪ್ರಾಣಹೋಗುವಷ್ಟು ಆಯಾಸವಾಗಿದೆ. ಈಗ ಇದೊಂದು ಬೇರೆ ಆವರೆ ಆಯಿತು ಅಲ್ಲಿಗೆ"

"ಮಾಲಾ, ಈಗ ನಿನಗೆ ಆಯಾಸ ಏತಕ್ಕಾಯಿತು? ಮನೆಯಲ್ಲೇ ಇದ್ದೆ ನಾನು ಬರುವವರೆಗೆ ಆಮೇಲೂ ನಿನಗೆ ಆಗವ ಶ್ರಮ ನಿನಗಾಗಿಲ್ಲ."

"ಏನಿಷ್ಟು ವಿಘವಾಗಿ ಕೇಳುವಿರಿ? ನನಗೆ ನಿಜವಾಗಿ ಕೈಲಾಗುವುದಿಲ್ಲ. ಸಿನೇಮವೂ ಬೇಡ, ಏನೂ ಬೇಡ. ಸ್ವಲ್ಪ ನಿದ್ರೆ ಮಾಡಗೊಟ್ಟರೆ ಸಾಕು"

ಅವಳ ಮಾತಿನ ರೀತಿ ಉಳಿದ ದಿನಗಳಲ್ಲಿಯಾಗಿದ್ದರೆ ಅವನ ಅಂತಃಕರಣವನ್ನು ಕಲಕಿ ಅವನನ್ನು ವಾತ್ಸಲ್ಯದ ಮೂರ್ತಿಯನ್ನಾಗಿ ಮಾಡುತ್ತಿತ್ತು. ಆದರೆ ಇವತ್ತು ಅವನ ಯೋಚನೆಯ ಹಾದಿಯೇ ಬೇರೆಯಾಗಿತ್ತು.

"ನೀರಜೆಯ ಮಾತು ನಿಜ." ಎಂದು ಅವನಿಗೆ ಅನ್ನಿಸಿಯೇ ಬಿಟ್ಟಿತು.

ಮರುದಿವಸದಿಂದ ಅನಂತನ ಮದುವೆಯ ಓಡಾಟ ಶುರುವಾಯಿತು. ಮಾಲತಿ ಮನೆಯ ಮಗಳಂತೆ ಸಂಭ್ರಮದಿಂದ ಏನೇನೋ ಕೆಲಸಗಳನ್ನು ಹಚ್ಚಿಕೊಂಡು ಓಡಾಡುತ್ತಿದ್ದಳು. ಅದು ನಾರಾಯಣನ ಕಣ್ಣಿಗೆ ಸ್ವಲ್ಪ ಹೆಚ್ಚಾಗಿಯೇ ಕಂಡಿತು. "ನಿನ್ನೆ ದಿವಸ ರಾತ್ರೆ ನಿಜವಾಗಿ ಅವಳಿಗೆ ಸುಸ್ತಾಗಿದ್ದಿತೇ? ಹಾಗಿದ್ದರೆ ಈಗ ಇಷ್ಟು ಚೈತನ್ಯ ಹೇಗೆ ಬಂದಿತು?" ಎಂದು ಒಳೊಳಗೇ ಗುಣಾಕಾರ ಹಾಕಿದ.

ಮದುವೆ ಮನೆಯಲ್ಲಿ ಹೆಂಗಸರು ಆಗಾಗ್ಗೆ ಹುಡುಗಾಟ ಮಾಡುತ್ತ ನಗುವಿನ ಹುವಿಲನ್ನೇ ಎಬ್ಬಿಸುತ್ತಿದ್ದರು. ಮಾಲತಿಯಂತೂ ಎಲ್ಲದರಲ್ಲೂ ಮುಂದಾಳಾಗುತ್ತಿದ್ದಳು. ನಗುವನ್ನು ತಡೆಯಲಾರದೆ ಸಂಕಟ ಪಡುತ್ತಿದ್ದ ಅವಳನ್ನು ಒಮ್ಮೆ ನಾರಾಯಣ ನೋಡಿದ.

"ಹೀಗೆ ಎಂದಾದರೂ ಅವಳು ನನ್ನೊಡನೆ ಇದ್ದಾಗ ನಗುತ್ತಿದ್ದಳೇ?" ಎಂದು ವಿಚಾರಮಾಡಿದ. ನಗುತ್ತಿದ್ದಳು ನಿಜ. ಆದರೆ ಹೀಗಲ್ಲ. ಇದು ಹಾಸ್ಯದ ಮದವೇರಿ ಹೊರಬೀಳುತ್ತಿದ್ದ ನಗುವಾಗಿತ್ತು. ಅದರ ಪ್ರಕಾಶಕ್ಕೆ ಅವಳ ಮುಖದಲ್ಲಿ ಅವನಿಗೆ ಹಿಂದೆಂದೂ ಕಾಣದ ವಿಚಿತ್ರ ಸೌಂದರ್ಯ ಕಾಣಿಸುತ್ತಿತ್ತು. "ಬಹುಶಃ ನೀರಜ ಹೇಳಿದಂತೆ ಮಾಲತಿಯ ಹೃದಯವನ್ನು ಅರಳಿಸುವಂತಹ ಸಂತೋಷ ನನ್ನ ಸಹವಾಸದಲ್ಲಿ ಅವಳಿಗೆ ಸಿಗದೆ ಇರಬಹುದು........"

ಒಳಗೆ ಒಂದೇಸಮನೆ ಅಸಮಾಧಾನ ಕೊರೆಯುತ್ತಲಿದ್ದರೂ ನಾರಾಯಣ ಮೇಲೆ ಅದನ್ನು ಯಾರಿಗೂ ತೋರಗೊಡಲಿಲ್ಲ. ಮೊದಲೇ ಮದುವೆ ಮನೆ. ಪ್ರತಿಯೊಬ್ಬರೂ ಅವರವರ ಕೆಲಸಗಳಲ್ಲಿ, ಮಾತುಗಳಲ್ಲಿ ಮಗ್ನರಾಗಿದ್ದರಿಂದ ಇವನನ್ನು ಯಾರೂ ಸೂಕ್ಷ್ಮವಾಗಿ ಪರೀಕ್ಷಿಸುತ್ತಲೂ ಇರಲಿಲ್ಲವಾಗಿ ತನ್ನ ಮನೋಭಾವನೆಗಳನ್ನು ಬಚ್ಚಿಟ್ಟು ಸಾಧಾರಣವಾಗಿ ವರ್ತಿಸುವುದು ಅವನಿಗೆ ಸುಲಭವಾಯಿತು.

ಆದರೂ ಒಂದೊಂದು ಬಾರಿ ಅಂದುಕೊಳ್ಳುತ್ತಿದ್ದ. "ಇನ್ನು ನನ್ನಿಂದ ತಡೆಯುವುದಕ್ಕೆ ಆಗುವುದಿಲ್ಲ. ಮಾಲತಿಯನ್ನೇ ಕೇಳಿಬಿಡುತ್ತೇನೆ" ಎಂದು. ಆದರೆ ಆ ಗಡಿಬಿಡಿಯಲ್ಲಿ ರಾತ್ರಿ ಹನ್ನೆರಡು ಗಂಟೆಯಾದರೂ ಮಾಲತಿ ಸಿಗುತ್ತಿರಲಿಲ್ಲ. ಯಾವಾಗ ಬಂದು ಮಲಗುತ್ತಿದ್ದಳೋ?, ಬೆಳಿಗ್ಗೆ ನಾಲ್ಕು ಗಂಟೆಗೆಲ್ಲ ಎದ್ದು ಹೊರಟುಹೋಗಿರುತ್ತಿದ್ದಳು.

ಹೀಗಾಗಿ ಅನಂತನ ಮದುವೆಯಾಗಿ ಮನೆಗೆ ಹಿಂದಿರುಗಿದ ಮೇಲೇ ಅವನಿಗೆ ಮಾಲತಿಯೊಡನೆ ಮಾತನಾಡಲು ಅವಕಾಶ ಸಿಕ್ಕಿದ್ದು. ಅವಕಾಶ ಸಿಕ್ಕಿದಾಗ ಹೇಗೆ, ಏನು ಮಾತನಾಡುವುದೆಂದು ತಿಳಿಯಲಿಲ್ಲ ಅವನಿಗೆ.

"ನಮ್ಮ ಮದುವೆಯಲ್ಲಿ ಸಹ ನಾವು ಇಷ್ಟು ಪ್ರಾಮುಖ್ಯತೆ ವಹಿಸಿರ ಲಿಲ್ಲ ಅಲ್ಲವೇ ಮಾಲಾ?" ಎಂದು ಏನೋ ಆರಂಭಿಸಿದ.

"ನನಗೇನು ಗೊತ್ತು? ಮದುವೆ ಮಾಡಿಕೊಂಡವರು ನೀವು. ನಾನು ಕೇವಲ ಮದುವೆಯಾದವಳು" ಎಂದಳು ಮಾಲತಿ.

"ಅಂದರೆ? ಮದುವೆಗೆ ನಿನ್ನ ಸಮ್ಮತಿ ಇರಲಿಲ್ಲವೇ?"

"ಅದನ್ನು ಕೇಳಿದವರ್‍ಯಾರು?" ಎಂದು ಮಾಲತಿ ನಕ್ಕಳು.

"ಹಾಗಾದರೆ ಆಗ ನಿನಗೆ ನನ್ನಲ್ಲಿ........"

"ಇಲ್ಲ. ಅದು ಹೇಗೆ ಸಾಧ್ಯ? ನಿಮ್ಮ ವಿಚಾರ ನನಗೇನು ಗೊತ್ತಿತ್ತು?"

"ಈಗ?"

"ಈಗಲೂ ಒಂದೊಂದು ಬಾರಿ ನನಗೆ ಅರ್ಥವೇ ಆಗುವುದಿಲ್ಲ. ಏತಕ್ಕಾಗಿ ವಿಧಾತ ಈ ಮದುವೆಯೆಂಬುದನ್ನು ಸೃಷ್ಟಿಮಾಡಿದನೋ, ಇದರಿಂದ ಯಾರಿಗೆ ಏನು ಫಲವಿದೆಯೋ!" ನಗುನಗುತ್ತ ಹೇಳಿದಳು ಮಾಲತಿ.

ನಾರಾಯಣ "ಕೇಳಬೇಕೆಂದು ಇದ್ದ ಪ್ರಶ್ನೆಗೆ ಕೇಳದೆಯೇ ಉತ್ತರ ಸಿಕ್ಕಿತು" ಎಂದುಕೊಂಡ. ಅವನ ಮನಸ್ಸು ಶೂನ್ಯವಾದಂತೆ ತೋರಿತು ಅವನಿಗೆ. "ಈ ಶಿಕ್ಷೆಯನ್ನು ಹೊಂದಲು ನಾನು ಏನು ತಪ್ಪು ಮಾಡಿದ್ದೇನೆ?" ಎಂದು ತನ್ನನ್ನು ತಾನೇ ಕೇಳಿಕೊಂಡ.

ಮಾರನೆಯ ದಿನ ಸಂಜೆ ರಾಘವಯ್ಯನವರ ಮನೆಗೆ ಅವನು ಹೋದಾಗ ನೀರಜ, ಜನಾರ್ಧನರು ಆಟವಾಡುತ್ತಿದ್ದರು. ದೂರದಿಂದ ನಾರಾಯಣನನ್ನು ಕಂಡ ಒಡನೆಯೇ ನೀರಜ ಆಟಬಿಟ್ಟು ಓಡಿಬಂದಳು.

"ಸದ್ಯ! ಕೊನೆಗೆ ಬಂದೇಬಿಟ್ಟಿರಿ!"

ಪ್ರಫುಲ್ಲವಾದ ಅವಳ ಮುಖವನ್ನು ನೋಡಿ ಅವನಿಗೆ ವಿಚಿತ್ರ ಹರ್ಷವುಂಟಾಯಿತು.

"ನಾಲ್ಕು ದಿನಗಳಿಂದ ನನ್ನ ಸ್ನೇಹಿತನ ಮದುವೆ ಗಡಿಬಿಡಿಯಲ್ಲಿ ಎಲ್ಲಿಗೂ ಹೋಗಲಾಗಲಿಲ್ಲ ನನಗೆ ನೀರಜಾ. ಇಲ್ಲದಿದ್ದರೆ...," ಎಂದು

ನಗುತ್ತಾ ಹೇಳಿದ, "ನೀವೇ ಹೇಳಿದಿರಲ್ಲ, ಇಲ್ಲಿ ನನಗೆ ಮಿಕ್ಕ ಎಲ್ಲ ಕಡೆಗಳಿಗಿಂತ ಹೆಚ್ಚು ಒಲುಮೆ ಸಿಗುತ್ತದೆಯೆಂದು........ ಅದನ್ನು ಕಳೆದು ಕೊಳ್ಳುವವನೇ ನಾನು ?"

ನೀರಜಾ ಮಗುವಿನಂತೆ ಮುಖವನ್ನು ಸೊಟ್ಟ ಮಾಡಿದಳು,

"ನಿಮಗೆ ನನ್ನ ಮಾತಿನಿಂದ ಕೋಪ ಬಂದು ಈ ರೀತಿಯಲ್ಲಿ ನನಗೆ ಶಿಕ್ಷೆ ಕೊಟ್ಟಿರಿ ಎಂದು ತಿಳಿದಿದ್ದೆ."

"ಶಿಕ್ಷೆ ಅನುಭವಿಸಬೇಕಾದವನು ನಾನು. ಅವತ್ತು ನಿಮ್ಮ ಮಾತಿಗೆ ನಾನು ಎಳ್ಳಕಾಳಿನಷ್ಟೂ ಬೆಲೆ ಕೊಡಲಿಲ್ಲ."

ನೀರಜ ಗಂಭೀರಳಾಗಿ ಅವನ ಮುಖವನ್ನು ಇಣಿಕಿ ನೋಡಿದಳು,

"ಅದೇನಾದರೂ ಆಗಲಿ, ಅದರಿಂದ ನನಗೇನೂ ಆಗಬೇಕಾಗಿಲ್ಲ. ನೀವೇಕೆ ಹೀಗೆ ಬಾಡಿಹೋಗಿದ್ದೀರಿ? ಸ್ವಾಸ್ಥ್ಯ ಸರಿಯಿಲ್ಲವೆ ?"

ಅವಳ ಉದ್ವಿಗ್ನತೆಯನ್ನು ನೋಡಿ ಅವನಿಗೆ ನಗು ಬಂದಿತು,

"ಏಕೆ ನೀರಜಾ, ಏನಾಗಿದ್ದೇನೆ ನಾನು? ಮದುವೆ ಮನೆಯ ಓಡಾಟದಿಂದ ಸ್ವಲ್ಪ ಸಾಕಾಗಿರಬಹುದು."

"ಛೇ! ಸುಳ್ಳು. ಎಷ್ಟು ಓಡಾಡಲಿ, ಶ್ರಮಪಡಲಿ, ಕಣ್ಣುಗಳು ಹೀಗೇಕೆ ಒಳಕ್ಕೆ ಹೋಗಬೇಕು? ನಿದ್ರೆಯಿಲ್ಲದೆ ಚಿಂತೆಯಿಂದ ದಿನಗಳೆದವರಂತೆ ಮುಖ ಬಿಳಿಚಿಕೊಂಡಿದೆಯೇಕೆ?"

"ನೀರಜಾ, ನಿಮಗೆ ಈ ಕೆಲಸಕ್ಕೆ ಬಾರದವನಲ್ಲಿ ಇಷ್ಟು ಆಸಕ್ತಿ ಏತಕ್ಕೆ ?"

"ಕೆಲಸಕ್ಕೆ ಬಾರದವರಿಗೆ ಅಂಥವರಲ್ಲೇ ಆಸಕ್ತಿ ಎಂಬುದು ನಿಮಗೆ ತಿಳಿಯದೆ?"

"ನೀವೇ ಕೆಲಸಕ್ಕೆ ಬಾರದವರು ?"

"ನಿಮ್ಮ ಪಾಲಿಗೆ ಅಲ್ಲದಿರಬಹುದು" ಎಂದು ಮೃದುವಾಗಿ ನುಡಿದಳು ನೀರಜೆ, "ಇವತ್ತು ಆಟದಲ್ಲಿ ನನಗೆ ಮನಸ್ಸಿಲ್ಲ. ಇಲ್ಲಿಯೇ ಕುಳಿತು ಮಾತನಾಡೋಣ."

ನಾರಾಯಣ ಅವಳ ಪಕ್ಕದಲ್ಲಿ ಕುಳಿತುಕೊಂಡು ಕೇಳಿದ,

"ನನ್ನನ್ನು ಕೇಳಬೇಕಾದುದು, ನನಗೆ ಹೇಳಬೇಕಾದುದು ಬಹಳ ವಿದೆಯೋ ?"

"ಏನೂ ಇಲ್ಲ. ಆದರೆ ನೀವು ಬಂದು ನಾಲ್ಕು ದಿನಗಳಾದುವು. ನನಗೆ ನೆನೆಸಿಕೊಂಡರೆ ಆ ಸಂಜೆಗಳನ್ನು ಹೇಗೆ ಕಳೆದೆನೆಂದೇ ಅರ್ಥ ವಾಗುವುದಿಲ್ಲ. ಪ್ರತಿಕ್ಷಣವೂ ನಿಮ್ಮನ್ನು ಎದುರು ನೋಡುತ್ತ, ಲೀಲ-ಜನಾರ್ದನರು ಏನಾದರೂ ಮಾತನಾಡಿಸಿದರೆ ಅದಕ್ಕೆ ಸರಿಯಾಗಿ ಉತ್ತರ ಕೊಡಲಾರದೆ ಎಲ್ಲರ ಹಾಸ್ಯಕ್ಕೆ ಗುರಿಯಾಗಿಬಿಟ್ಟಿದ್ದೆ."

"ಒಂದೆರಡು ದಿನಗಳು ಆಟ ತಪ್ಪಿಹೋದರೆ ನಿಮಗೆ ಇಷ್ಟು ವ್ಯಸನ ವಾಗಬೇಕೆ? ಆಟವೆಂದರೆ ನಿಮಗೆ ಇಷ್ಟು ಆಶೆಯೆಂದು ನನಗೆ ತಿಳಿದಿರಲಿಲ್ಲ."

"ಆಟ!" ನೀರಜೆ ತಿರಸ್ಕಾರದಿಂದ ನಕ್ಕಳು, "ನಾನು ಆಟವಾಡಲು ಕಾತರಳಾಗಿದ್ದೆನೆಂದು ತಿಳಿದಿರಾ ? ನಿಮಗೆ ಇಷ್ಟೂ ಗೊತ್ತಾಗುವುದಿಲ್ಲವೆ ?"

ನಾರಾಯಣನಿಗೆ ಆ ಕ್ಷಣದಲ್ಲಿ ಏನೋ ಹೊಳೆಯಿತು. ಆದರೂ ಕೇಳಿದ,

"ಏನು ಗೊತ್ತಾಗಬೇಕು, ಹೇಳಿ ನೀರಜಾ."

"ಏನೇ ? ನಿಮ್ಮ ಮಾಲತಿಗೂ ನನಗೂ ಬಹಳ ವ್ಯತ್ಯಾಸವಿದೆ ಯೆಂದು. ನಾರಾಯಣ್, ಮೊದಲನೆಯ ದಿನ ನಿಮ್ಮನ್ನು ನೋಡಿದಾಗಿ ನಿಂದ ನಿಮ್ಮ ಯೋಗ್ಯತೆಯ ಬೆಲೆ ನನಗೆ ಗೊತ್ತು."

"ಅದನ್ನು ತಿಳಿದು ನೀವು ಮಾಡುವುದೇನು ನೀರಜಾ ?"

"ಇದು ವಿಚಿತ್ರ ಪ್ರಶ್ನೆ. ಅಪರಂಜಿಯ ಬೆಲೆ ತಿಳಿದವರು ಅದನ್ನು ಬಿಸಾಡುತ್ತಾರೆಯೋ, ಎತ್ತಿಟ್ಟುಕೊಳ್ಳುತ್ತಾರೆಯೋ ? ನಿಮ್ಮ ಹೃದಯ ದಲ್ಲಿ ಎಷ್ಟು ನಿರಾಶೆ ತುಂಬಿದೆಯೆಂದು ನಾನು ಬಲ್ಲೆ. ಆಶಾಭಂಗದಿಂದ ಅದರ ನೈಜಸ್ವರೂಪ ಕೆಡದಂತೆ ಅದನ್ನು ಸರ್ವಪ್ರಕಾರದಿಂದಲೂ ರಕ್ಷಿಸಲು ಬಯಸುತ್ತೇನೆ."

ನಾರಾಯಣ ಅವಳ ಮಾತಿನಲ್ಲಿ ತುಂಬಿದ್ದ ಮಾಧುರ್ಯದಿಂದ ಮುಗ್ಧನಾದ.

"ನೀರಜಾ, ನಿಮ್ಮ ಜೀವನದಲ್ಲಿ ಇದೊಂದು ಹೊರತು ಬೇರಾವ ಗುರಿಯೂ ಇಲ್ಲವೆ ?"

"ಇಲ್ಲ, ಇಲ್ಲ. ಆದರೆ ಇದು ನನ್ನ ಪಾಲಿಗೆ ಮರೀಚಿಕೆಯಾಗುವುದೋ ಏನೋ! ನೀವು ಆದರ್ಶವಾದಿಗಳು. ಎಂದೋ ಆಡಿದ ಒಂದು ಮಾತನ್ನು ಬಿಡಲಾರದೆ, ರಸ ಮುಗಿದುಹೋಗಿದೆಯೆಂದು ತಿಳಿದರೂ ಆ ಬಟ್ಟಲನ್ನು ಕೆಳಗೆ ಇಡುವುದಿಲ್ಲ."

ನಾರಾಯಣ ಅವಳ ಮುಖವನ್ನೇ ನೋಡುತ್ತ ಸುಮ್ಮನೆ ಕುಳಿತಿದ್ದ. ನೀರಜೆ ಕೇಳಿದಳು,

"ನಿಮ್ಮ ಲಗ್ನ ನೀವು ಬಹಳ ಚಿಕ್ಕವರಾಗಿದ್ದಾಗ ಆಯಿತೇನು ?"

"ಇಲ್ಲ, ನಮ್ಮದು ಪ್ರೇಮವಿವಾಹ. ನಾಲ್ಕು ವರ್ಷಗಳಾಗಿವೆ ಅಷ್ಟೆ ನಾವು ಸಂಸಾರವನ್ನು ಹೂಡಿ. ಏಕೆ, ಇದನ್ಯಾರೂ ನಿಮಗೆ ಹೇಳಲಿಲ್ಲವೇ ?"

ನೀರಜೆ ನಕ್ಕಳು,

"ನಿಮ್ಮ ವಿಚಾರವನ್ನು ನಾನು ನಿಮ್ಮಿಂದಲೇ ತಿಳಿಯಲಾಶಿಸುತ್ತೇನೆ. ಇದಕ್ಕೆ ನನಗೆ ಇನ್ನೊಬ್ಬರ ಸಹಾಯ ಬೇಡ."

"ಸರಿ" ಎಂದ ನಾರಾಯಣ. "ನಾನೇ ಹೇಳುತ್ತೇನೆ ಕೇಳಿ. ಮಾಲತಿ ನನ್ನ ತಂಗಿಯ ಗೆಳತಿ. ಎಂದೂ ಮಾತನಾಡಿರದಿದ್ದರೂ, ಅವಳ ರೂಪ ನನ್ನ ಮನಸ್ಸಿಗೆ ಹಿತವಾಯಿತು. ತಂದೆಯವರಲ್ಲಿ ಹೇಳಿದೆ. ಅವರು ನಿಷ್ಠುರ ಮಾಡಿದರು........"

ಏಕೋ ಅವನು ಮಾತನಾಡುತ್ತಿದ್ದ ರೀತಿಯಲ್ಲಿ ನೀರಜೆಗೆ ಸರಿಯಾಗಿ ಏನೂ ಅರ್ಥವಾಗುವಂತಿರಲಿಲ್ಲ. ಅವನ ಮಾತು ಮುಗಿದಮೇಲೆ

"ನನ್ನದೊಂದು ಮಾತನ್ನು ನಡೆಯಿಸಿ ಕೊಡುವಿರಾ ?"

"ಏನು ಹೇಳಿ."

"ನನ್ನ ಆರೋಗ್ಯ ಸ್ವಲ್ಪ ಕೆಡುವಂತಿದೆ. ವೈದ್ಯರು ನೀಲಗಿರಿಗೆ ಹೋಗಿ ಒಂದು ತಿಂಗಳು ಅಲ್ಲಿಯೇ ಇರಬೇಕು ಎನ್ನುತ್ತಾರೆ. ಲೀಲಾ, ಜನಾರ್ದನ, ಚಿಕ್ಕಮ್ಮ ಎಲ್ಲರೂ ಬರುತ್ತಾರೆ. ನೀವೂ ಬಂದರೆ........"

ಅವಳು ಮಾತನಾಡುತ್ತಿದ್ದ ಬಗೆ ನಾರಾಯಣನ ವೈಮರೆಯುಸಿತು. ಒಂದು ಬಾರಿಯೂ ಯೋಚಿಸದೆಯೇ ಉತ್ತರ ಕೊಟ್ಟ,

"ಬರುತ್ತೇನೆ, ನೀರಜಾ."

"ನೀವೆಲ್ಲಿ ಆಗುವುದಿಲ್ಲ ಎಂದುಬಿಡುವಿರೋ ಎಂದು ನನ್ನ ಜೀವ ಹೊಡೆದುಕೊಳ್ಳುತ್ತಿತ್ತು" ಎಂದು ಉಸುರಿದಳು ನೀರಜೆ, "ನೀವೆಷ್ಟು ಒಳ್ಳೆಯವರು ಗೊತ್ತೆ ನಿಮಗೆ? ನನಗೆ ನೀಲಗಿರಿಯ ಪ್ರಯಾಣ ನೆನೆದಾಗಲೆಲ್ಲ, ಈ ಎಂಟು ದಿನಗಳಿಂದ ದೊಡ್ಡ ಯೋಚನೆಯೇ ಆಗುತಿತ್ತು."

"ಯೋಚನೆಯೇಕೆ? ಎಂದೂ ಯಾವ ಊರಿಗೂ ಹೋಗಿಲ್ಲವೆ ನೀವು?"

"ಅಯ್ಯೋ, ಮತ್ತೆ ಅದೇ ಮಾತು!" ಎಂದು ನುಡಿದು ನೀರಜೆ ಅವನ ಕಡೆಗೆ ಸಂಪೂರ್ಣವಾಗಿ ತಿರುಗಿ ಕೇಳಿದಳು, "ನಿಮಗಾಗಿ ಇಷ್ಟು ಒದ್ದಾಡುತ್ತೇನೆಂದು ಒಳಗೇ ಹಾಸ್ಯ ಮಾಡಿಕೊಂಡು ನಗುವಿರೇನು?"

"ಅದಕ್ಕಾಗಿ ಕೃತಜ್ಞನಾಗಿದ್ದೇನೆ ನಿಮಗೆ. ಹಾಸ್ಯ ಮಾಡುವುದಕ್ಕೆ ಅದರಲ್ಲಿ ತಮಾಷೆಗಾಸ್ಪದವಾದುದು ಏನಿದೆ?"

"ಅದು ನನಗೆ ತಿಳಿಯದು. ಆದರೆ ಇದು ಮಾತ್ರ ನಿಜ. ನನಗೇ ಎಷ್ಟೋ ಬಾರಿ ನಾಚಿಕೆಯಾಗಿ ನನ್ನ ಭಾವನೆಗಳನ್ನು ಬಚ್ಚಿಟ್ಟು ಉದಾಸೀನಳಾಗಿ ವರ್ತಿಸಲು ಪ್ರಯತ್ನಪಟ್ಟಿದ್ದೇನೆ. ಬರಿಯ ಪ್ರಯತ್ನದಿಂದ ಏನೂ ಉಪಯೋಗವಾಗಿಲ್ಲ. ಒಂದು ಕ್ಷಣದಲ್ಲಿ ಪರವಶಳಾಗಿ ನಿಮಗೆ ನನ್ನ ಗುಟ್ಟು ತಿಳಿದುಹೋಗುವಂತೆ ಮಾಡಿಬಿಡುತ್ತೇನೆ. ನನಗೇಕೆ ಇಂತಹ ನಿರ್ಬಲತೆ ಬಂದಿದೆ, ಹೇಳಿ."

"ಅದು ನಿರ್ಬಲತೆಯಲ್ಲ ನೀರಜಾ........" ನಾರಾಯಣ ಏನೋ ಹೇಳಲು ಪ್ರಾರಂಭಮಾಡಿದ. ಅಷ್ಟರಲ್ಲಿ ಲೀಲಾ ಜನಾರ್ದನರು ಆಟವನ್ನು ಮುಗಿಸಿ ಇತ್ತಕಡೆಗೆ ಬರುತ್ತಿದ್ದುದು ಅವನ ಕಣ್ಣಿಗೆ ಬಿತ್ತು. ಆ ಮಾತನ್ನು ಅಲ್ಲಿಗೇ ನಿಲ್ಲಿಸಿಬಿಟ್ಟ.

"ಏಕೆ ನಮ್ಮಲ್ಲಿಗೆ ಬರುವುದನ್ನು ನಿಲ್ಲಿಸಿಬಿಟ್ಟಿದ್ದಿರಿ? ನೀರಜೆಯೊಡನೆ ಜಗಳವಾಡಿದ್ದೀರಾ?" ಲೀಲೆ ಕೇಳಿದಳು.

"ಹಾಗೆ ಜಗಳವಾಗಿದ್ದರೆ ನೀರಜಾ ಸುಮ್ಮನಿರುತ್ತಿದ್ದಳೆ? ಇಷ್ಟು ಹೊತ್ತಿಗೆ ಅತ್ತೂ ಕರೆದೂ ಹಾದಿರಂಪು ಬೀದಿರಂಪು ಮಾಡಿಬಿಡುತ್ತಿದ್ದಳು" ಎಂದ ಜನಾರ್ದನ.

ನಾರಾಯಣ ನಗುತ್ತ ಕೇಳಿದ,

"ಆಟವನ್ನು ನಿಲ್ಲಿಸಿ ಬಂದುಬಿಟ್ಟಿರಲ್ಲ? ಆಗಲೇ ಆಯಾಸವಾಯಿತೆ?"

"ಆಯಾಸವೂ ಇಲ್ಲ, ಏನೂ ಇಲ್ಲ. ಏನೋ ಬಹಳ ಸ್ವಾರಸ್ಯವಾಗಿ ನೀವಿಬ್ಬರೂ ಮಾತನಾಡುತ್ತಿರುವಂತೆ ತೋರಿತು. ನಾವೂ ಅದನ್ನು ಅನುಭವಿಸೋಣವೆಂದು ಬಂದೆವು." ಲೀಲೆ ನಗುತ್ತ ಉತ್ತರಕೊಟ್ಟಳು.

ಜನಾರ್ದನ ಹೇಳಿದ,

"ನಾನು ಲೀಲೆಗೆ ಹೇಳಿದೆ, 'ನಮ್ಮನ್ನು ಕಂಡಕೂಡಲೆ ಅವರು ಆಡುತ್ತಿರುವ ಮಾತನ್ನು ನಿಲ್ಲಿಸಿಬಿಡುತ್ತಾರೆ. ನಮಗೆ ಆಟ ನಿಲ್ಲಿಸಿದುದಷ್ಟೇ ಲಾಭವಾದೀತು ಅಂತ' ಅವಳು ಕೇಳಲಿಲ್ಲ. ಈಗ ನೋಡಲಿ, ನನ್ನ ಮಾತೇ ನಿಜವಾಯಿತು."

"ಛೇ! ನಾವು ಅಂತಹ ಗುಟ್ಟು ಮಾತುಗಳನ್ನಾಡುತ್ತಿರಲಿಲ್ಲ''

ನೀರಜೆ ಹೇಳಿದಳು,

''ನಾನು ಅವರನ್ನು ನೀಲಗಿರಿಗೆ ಆಹ್ವಾನಿಸುತ್ತಿದ್ದೆ."

''ನೀವು ಆಹ್ವಾನವನ್ನು ಒಪ್ಪಿಕೊಂಡಿದ್ದೀರಷ್ಟೆ?'' ಜನಾರ್ದನ ಕೇಳಿದ.

''ಸಂತೋಷದಿಂದ ಒಪ್ಪಿಕೊಂಡಿದ್ದೇನೆ.''

"ಒಳ್ಳೆಯದಾಯಿತು. ಆದರೆ ನೀವು ಎರಡು ಮಕ್ಕಳನ್ನೂ ಅಜ್ಜಿಯೊಂದಿಗೆ ಬಿಟ್ಟುಬಿಟ್ಟು ಬರಬೇಡಿ. ದೊಡ್ಡಮಗುವನ್ನಾದರೂ ಕರೆತಂದರೆ ನಮಗೆ ಎಷ್ಟೋ ಬೇಸರ ಕಡಿಮೆಯಾದೀತು. ನಾಡಿದ್ದೇ ನಾವು ಹೊರಡಬೇಕಲ್ಲವೇ ನೀರಜಾ? ನಾರಾಯಣ್, ನೀವು ಮಾಲತಿಗೆ ಹೇಳಿ ಬೆಚ್ಚಗಿರುವ ಬಟ್ಟೆಗಳನ್ನು ತರಬೇಕೆಂದು. ಇಲ್ಲಿ ಬೇಸಗೆಯಿದ್ದರೂ ಅಲ್ಲಿ ತುಂಬ ಛಳಿ ಇರುತ್ತದೆ."

ನೀರಜೆ ಲೀಲೆಯ ಮಾತು ಮುಗಿಯುವವರೆಗೂ ಕಾದಿದ್ದು, ಅರ್ಥ ಬೇಸರದ ಧ್ವನಿಯಲ್ಲಿ ಸಣ್ಣಗೆ ನಗುತ್ತ ಹೇಳಿದಳು,

"ಲೀಲಾ, ಹಿಂದುಮುಂದು ಗೊತ್ತಿಲ್ಲ ನಿನಗೆ. ಮಾಲತಿ ನಮ್ಮೊಡನೆ ಬರುವುದಿಲ್ಲ."

"ಏಕೆ ಬರುವುದಿಲ್ಲ? ನಾರಾಯಣ್, ನೀವು ಹೇಳಿ ಅವರಿಗೆ ನೀಲಗಿರಿಯಲ್ಲಿ ಒಂದು ತಿಂಗಳಿದ್ದು ಬಂದರೆ ಬೇಸಗೆಯ ಶಕ್ತಿಹೀನತೆ ಬರುವುದಿಲ್ಲ" ಜನಾರ್ದನ ಉತ್ಸಾಹದಿಂದ ಘೋಷಿಸಿದ.

ನೀರಜೆ ಅರ್ಥಗರ್ಭಿತ ದೃಷ್ಟಿಯಿಂದ ನಾರಾಯಣನ ಮುಖವನ್ನು ನೋಡಿ ಮೆಲ್ಲಗೆ ಹೇಳಿದಳು,

"ಇಷ್ಟುಹೊತ್ತೂ ಅದೇ ಮಾತಾಯಿತು ಮಾಲತಿ ಬರುವಂತಿದ್ದರೆ ಬಹಳ ಚೆನ್ನಾಗಿತ್ತು. ಆದರೆ ಆಗದ್ದಕ್ಕೆ ಯೋಚಿಸಿ ಫಲವಿಲ್ಲ. ಇವರಾದರೂ ಬರುತ್ತಾರಲ್ಲ ಅಷ್ಟೆ ಸಾಕು."

ಪರಿಸ್ಥಿತಿ ಅರ್ಥವಾಗದಿದ್ದರೂ ನಾರಾಯಣನ ಮ್ಲಾನ ಮುಖ, ನೀರಜೆಯ ಮಾತುಗಳು ಲೀಲಾ-ಜನಾರ್ದನರ ಮೇಲೆ ಒಳ್ಳೇ ಪರಿಣಾಮವನ್ನು ಮಾಡಿತು. ಅವರಿಬ್ಬರೂ ಒಬ್ಬರಿಗೊಬ್ಬರು ಹೇಳಿಕೊಂಡರು ಮತ್ತೆ ಆಟಕ್ಕೆ ಹೋಗುವಾಗ,

"ಇನ್ನೊಂದು ಬಾರಿ ಈ ವಿಚಾರದಲ್ಲಿ ನಾವು ಕೈಹಾಕಕೂಡದು."

ಮನೆಗೆ ನಾರಾಯಣ ಹಿಂದಿರುಗಿ ಬಂದಾಗ ಎಂಟು ಗಂಟೆಯಾಗಿತ್ತು. ಹೊರಗೆ ಹೋಗೋಣವೆಂದು ಅವನೂ ಹೇಳಲಿಲ್ಲ. ಮಾಲತಿಯೂ ಸುಮ್ಮನಿದ್ದುಬಿಟ್ಟಿದ್ದಳು ಊಟಕ್ಕೆ ಕುಳಿತಾಗ ಮಕ್ಕಳ ವಿಷಯವಾಗಿಯೇ ಮಾತುಕಥೆ ನಡೆಯುತ್ತಿತ್ತು. "ಲಕ್ಷ್ಮಣನಿಗೆ ಅಜೀರ್ಣವಾದಂತಿದೆ. ಹಲ್ಲು ಬರುತ್ತಿದೆಯೋ ಏನೋ" ಎಂದು ಮಾಲತಿ ಯಾವುದೋ ಜ್ಞಾನದಲ್ಲಿ ಹೂಗುಟ್ಟಿದ.

ಊಟವಾದಮೇಲೆ ಕೊಠಡಿಯಲ್ಲಿ ಅವನು ಕುಳಿತಿದ್ದ ಕಡೆಗೆ ಮಾಲತಿ ಬಂದಳು.

"ಎಷ್ಟು ಸೆಖೆ! ಗಾಳಿಸಂಚಾರವೇ ಇಲ್ಲ" ಎಂದು ಅವಳು ಅಂದ ಮೇಲೇ ಅವನಿಗೆ ಗಮನ ಅತ್ತಕಡೆಗೆ ಹೋಗಿದ್ದು.

"ಆ್ಞ! ಏನಂದೆ? ಸೆಖೆಯೇ? ಹೂಂ, ಹೌದು" ಎಂದ.

"ಸಾಯಂಕಾಲ ರಾಮು ಹಟ ಶುರುಮಾಡಿಬಿಟ್ಟ ಇದನ್ನು ತಡೆಯ ಲಾರದೆ. ಅವನನ್ನು ಕರೆದುಕೊಂಡು ಹೀಗೇ ಹತ್ತು ನಿಮಿಷ ಹೋಗಿ ಬಂದೆ. ಎಲ್ಲಿ ಹೋದರೂ ಅಷ್ಟೆ. ಅಂದರೆ ಹೊರಗಡೆ ಮನೆಗಿಂತ ಸ್ವಲ್ಪ ಹೆಚ್ಚು ಗಾಳಿ ಸಿಕ್ಕೀತು ಅಷ್ಟೆ" ಎಂದು ಹೇಳಿದಳು ಮಾಲತಿ.

ನಾರಾಯಣ ಅವಳ ಮಾತಿಗೆ ಏನೂ ಹೇಳಲಿಲ್ಲ. ಸ್ವಲ್ಪ ಯೋಚಿಸುತ್ತಿದ್ದು ಬಳಿಕ ಕೇಳಿದ,

"ಮಾಲತೀ ಈಗ ಮನೆಯಲ್ಲಿ ನಾನು ಮಾಡಬೇಕಾದ ಕೆಲಸಗಳೇನಾದರೂ ಇವೆಯೆ?"

"ಏನೂ ಇಲ್ಲವಲ್ಲ?"

"ರೇಷನ್ ಸಾಮಾನು, ಕಟ್ಟಿಗೆ........?"

ಮಾಲತಿ ಆಶ್ಚರ್ಯದಿಂದ ಕಣ್ಣುಗಳನ್ನರಳಿಸಿ ನೋಡಿದಳು ಅವನನ್ನು. ನಾರಾಯಣ ವನಜಮ್ಮ ಬಂದಮೇಲೆ ಈ ಕೆಲಸಗಳನ್ನು ಎಂದೂ ಮಾಡಬೇಕಾಗಿರಲಿಲ್ಲ.

"ಅದೆಲ್ಲಾ ನೀವು ಮಾಡಬೇಕಾಗಿಲ್ಲ. ಹೇಗೋ ನಡೆದುಹೋಗುತ್ತಿದೆಯಲ್ಲ, ಸಾಕು. ಅಮ್ಮನಿಗೆ ಇವೆಲ್ಲಾ ಅಭ್ಯಾಸವಿದೆ."

"ಸ್ವತಂತ್ರ ಜೀವನ ಅವರಿಗೆ ಅಭ್ಯಾಸವಿದೆ ಅಲ್ಲವೇ ಮಾಲಾ?"

"ನಮಗೆ ಅದೆಂದೂ ಕಷ್ಟವಾಗಿ ತೋರಲಿಲ್ಲ" ನಗುನಗುತ್ತ ನುಡಿದಳು ಮಾಲತಿ, "ನನಗೆ ಆ ದಿನಗಳನ್ನು ನೆನೆದುಕೊಂಡರೆ ಆಶ್ಚರ್ಯವಾಗುತ್ತದೆ. ಏನೂ ಉನ್ಮಾದವಿಲ್ಲದೆ ಸೌಖ್ಯವಾಗಿ, ಸಂತೋಷವಾಗಿದ್ದೆವು ನಾವು"

ನಾರಾಯಣ ಅವಳ ಮುಖವನ್ನೇ ನೋಡುತ್ತಿದ್ದ,

"ಮಾಲಾ, ನೀನು ನನ್ನಂತಲ್ಲ. ಚಿಕ್ಕವುಟ್ಟದ್ದರಲ್ಲಿ ಕೊರತೆಯಾದರೆ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲ ಅಲ್ಲವೇ?"

ಮಾಲತಿ ನಗುತ್ತ ಹೇಳಿದಳು.

"ಚಿಕ್ಕದೇನು, ಪುಟ್ಟದೇನು? ಯಾವುದರಲ್ಲಿ ಕೊರತೆಯಾದರೂ ಅದಕ್ಕಾಗಿ ದುಃಖಪಡಬಾರದೆಂದು ನಮ್ಮ ತಾಯಿಯ ಬಳಿಯಲ್ಲಿ ನಾನು ಕಲಿತಿದ್ದೇನೆ"

"ನಿನಗೆ ಒಂದು ಕಾಲದಲ್ಲಿ ಪ್ರಿಯವಾಗಿದ್ದ ವಸ್ತು ಕಳೆದು ಹೋದರೆ?"

"ಅದಕ್ಕೆಲ್ಲಾ ನಾನು ಚಿಂತಿಸುವುದಿಲ್ಲ. ನಮ್ಮ ಜೀವನದಲ್ಲಿ; ಇದಿಲ್ಲದೆ ನಡೆಯುವಂತಿಲ್ಲ ಎಂಬ ಪ್ರಿಯವಸ್ತುಗಳು ಯಾವುವೂ ಇಲ್ಲ"

ತಾನೇನನ್ನು ಹೇಳುತ್ತಿರುವೆನೆಂದು ಅರಿಯದೆ ಮಾಲತಿ ಸಾಧಾರಣ ಅರ್ಥದಮೇಲೆ ಮಾತ್ರ ದೃಷ್ಟಿಯಿಟ್ಟು ಮಾತನಾಡುತ್ತಿದ್ದಳು. ಅವಳು ತಿಳಿದದ್ದು ನಾರಾಯಣ ಒಡವೆಗಳ ಅಥವಾ ಅಂತಹುದೇ ಪದಾರ್ಥಗಳ ವಿಷಯವನ್ನು ಹೇಳುತ್ತಿದ್ದನೆಂದು. ಆದರೆ ನಾರಾಯಣ ಅವಳ ಮಾತು ಗಳಲ್ಲಿ ಬೇರೆ ಅರ್ಥಗಳನ್ನು ಕಾಣುತ್ತಿದ್ದ.

"ಸರಿ, ಮಾಲಾ, ನಿನಗೆ ಒಂದು ವಿಷಯವನ್ನು ಹೇಳಬೇಕಾಗಿತ್ತು" ಎಂದ.

"ಹುಂ, ಹೇಳಬಹುದಲ್ಲ?" ಎಂದಳು ಅವಳು.

"ಅಂತಹ ದೊಡ್ಡದೇನಲ್ಲ ಅದು. ಏನು ಅಂದರೆ ನನ್ನ ಸ್ನೇಹಿತ ರುಗಳು ಕೆಲವರು ಈ ಬೇಸಗೆಯಲ್ಲಿ ನಾಲ್ಕಾರು ದಿನಗಳನ್ನು ನೀಲಗಿರಿ ಯಲ್ಲಿ ಕಳೆಯಬೇಕೆಂದು ಇದ್ದಾರೆ. ಅವರ ಜೊತೆಗೆ ನಾನೂ ಹೋಗ ಬೇಕೆಂದು ಬಲಾತ್ಕರಿಸುತ್ತಿದ್ದಾರೆ''

"ಹೋಗಿಬನ್ನಿ"

''ಇಲ್ಲಿ ಮನೆಯ ಕಡೆ........''

"ಅದೇನೂ ನೀವು ಯೋಚಿಸಬೇಡಿ. ನಾನು ಎಲ್ಲವನ್ನೂ ನೀವಿದ್ದರೆ ಹೇಗೋ ಹಾಗೆ ನಿಭಾಯಿಸುತ್ತೇನೆ''

ನಾರಾಯಣನ ಸಮಾಧಾನಕ್ಕೆ ಹೇಳಿದ ಮಾತು ಇದು. ಆದರೆ ನಾರಾಯಣನಿಗೆ ಅದು ಅಣಕದಂತೆ ತೋರಿತು.

“ನಾಡಿದ್ದೇ ಹೋಗುತ್ತೇವೆ” ಎಂದ ನಾರಾಯಣ.

“ಹುಂ, ನೀವು ಇನ್ನು ನಿದ್ರೆಮಾಡಿ, ಈ ಸೆಖೆಗೆ ನನಗಂತೂ ನಿದ್ರೆ ಬರುವುದಿಲ್ಲ'' ಎಂದು ಎದ್ದಳು ಮಾಲತಿ. ನಾರಾಯಣನೂ ನಿಟ್ಟುಸಿರನ್ನು ಬಿಟ್ಟು ಎದ್ದ.

ಮರುದಿವಸ ನಾರಾಯಣ ರಜಾಕ್ಕೆ ಬರೆದು, ಮೇಲಿನ ಅಧಿಕಾರಿಗಳಿಗೆ ಹೇಳಿ ಅಲ್ಲಿಂದ ಹೊರಟ. ತನ್ನ ಮನೆಗಲ್ಲ, ರಾಘವಯ್ಯನವರ ಮನೆಗೆ. ನೀರಜೆಗೆ ಅವನನ್ನು ನೋಡಿ ಆಶ್ಚರ್ಯವಾಯಿತು,

“ಇವತ್ತು ನಾನೇನು ಪುಣ್ಯ ಮಾಡಿದ್ದೇನೆ?” ಎಂದು ಸಂಭ್ರಮದಿಂದ ಅವನನ್ನು ಸ್ವಾಗತಮಾಡಿ ಕೂಡಿಸಿದಳು.

“ನಾವು ಊರಿಗೆ ತೆಗೆದುಕೊಂಡು ಹೋಗಬೇಕಾದ ಬಟ್ಟೆಬರೆಗಳನ್ನೆಲ್ಲಾ ಈಗ ತಾನೇ ಬೇರೆಮಾಡಿ, ಹಾಸಿಗೆಯಲ್ಲಿ ಹಾಕುವುದನ್ನು ಬಿಟ್ಟು ಉಳಿದುದನ್ನು ಕಟ್ಟಿ ಮುಗಿಸಿದೆವು. ನೀವು ಮುಂಚೆಯೇ ಬಂದಿದ್ದರೆ ನಿಮಗೂ ಸ್ವಲ್ಪ ಕೆಲಸ ಕೊಡುತ್ತಿದ್ದೆವು. ಈಗ ನಿಮಗೆ ಸಿಗುವುದು ಬರಿಯ ಟೀ ಅಷ್ಟೆ” ಎಂದಳು ಲೀಲಾ.

ಟೀ ಕುಡಿದಾದಮೇಲೆ ನೀರಜೆ ಒಂದೆರಡು ಹಾಡುಗಳನ್ನು ಹೇಳಿದಳು. ಅವಳ ಹಾಡುಗಳನ್ನು ಕೇಳುತ್ತ ನಾರಾಯಣ ಯೋಚಿಸಿದ, “ಮಾಲತಿಯ ವೀಣೆಯ ಪಾಠ ಎಲ್ಲಿಯವರೆಗೆ ಬಂದಿತು? ಅವಳು ಅದನ್ನು ಮನಸ್ಸಿಟ್ಟು ಕಲಿಯುತ್ತಿದ್ದಾಳೆಯೋ ಇಲ್ಲವೆ ಕಾಟಾಚಾರಕ್ಕಾಗಿ, ನನ್ನ ಬಲಾತ್ಕಾರಕ್ಕಾಗಿ ಕಲಿಯುತ್ತಿದ್ದಾಳೆಯೋ?............” ಕೇವಲ ಒಂದೇ ಕ್ಷಣ ಅವನು ಅನ್ಯಮನಸ್ಕನಾಗಿದ್ದರೂ ಅದು ನೀರಜೆಯ ಗಮನಕ್ಕೆ ಬಂದಿತ್ತು. ಹಾಡು ಮುಗಿದ ಕೂಡಲೆ ಅವನನ್ನು ಕೇಳಿದಳು,

“ಆಗ ಎಲ್ಲಿತ್ತು ನಿಮ್ಮ ಮನಸ್ಸು?”

ನಾರಾಯಣ ನಕ್ಕು ಹೇಳಿದ, “ಗಾನಪ್ರಪಂಚದಲ್ಲಿ”

“ಸುಳ್ಳು!” ಎಂದು ನೀರಜ ಗಟ್ಟಿಯಾಗಿ ನಕ್ಕುಬಿಟ್ಟಳು, “ನೀವು ನನಗೆ ಮೋಸಮಾಡಲಾರಿರಿ.”

ನಾರಾಯಣನಿಗೆ ಆಶ್ಚರ್ಯವಾಯಿತು,

"ನಿಮ್ಮನ್ನು ನಾನು ನಾಲ್ಕು ವರ್ಷಗಳ ಮುಂಚೆ ಸಂಧಿಸಬೇಕಾ ಗಿತ್ತು ನೀರಜಾ, ಈಗ ಕಾಲ ಮಿಂಚಿ ಹೋಯಿತು"

"ಅದೇನು ನಾರಾಯಣ್! ಅವಳನ್ನು ಸಂಧಿಸಿ ನೀವೇನು ಮಾಡು ತ್ತಿದ್ದಿರಿ ಆಗ?" ಜನಾರ್ಧನ ಕೇಳಿದ.

ನಾರಾಯಣ ನಾಲಿಗೆ ಕಚ್ಚಿಕೊಂಡ. ನೀರಜ ತಕ್ಷಣ ಅವನ ಸಹಾಯಕ್ಕೆ ಬಂದಳು,

"ಜನ್ನ, ನಿನಗೆ ತೂಕಡಿಕೆ ಬರುತ್ತಿದ್ದಂತೆ ಇದ್ದಿತು ಈಗ ಎರಡು ನಿಮಿಷದ ಹಿಂದೆ?"

"ತೂಕಡಿಕೆಯಲ್ಲ ನೀರಜ. ನೀವಿಬ್ಬರೂ ಸೇರಿಕೊಂಡು ನನ್ನಿಂದ ಎಷ್ಟು ಕೆಲಸ ತೆಗೆದಿದ್ದೀರಿ? ಈಗ ಸ್ವಲ್ಪ ಹೊತ್ತು ಮಲಗದಿದ್ದರೆ........"

"ನಿನ್ನನ್ನು ಮಲಗಬೇಡ ಅಂದವರು ಯಾರು ಜನ್ನಾ? ಮೊದಲು ಹೊರಡು. ನಾಲ್ಕೂವರೆಗೆ ನಾನೇ ಬಂದು ಎಬ್ಬಿಸುತ್ತೇನೆ ನಿನ್ನ. ನನ್ನದಿನ್ನೂ ಸ್ವಲ್ಪ ಕೆಲಸವಿದೆ. ಅದು ಬೇಗ ಮುಗಿದರೆ ನಾನು ಒಂದು ಅರ್ಧಗಂಟೆ ವಿಶ್ರಾಂತಿ ತೆಗೆದುಕೊಳ್ಳುತ್ತೇನೆ" ಎಂದಳು ಲೀಲಾ

ನೀರಜೆ ಅವರಿಬ್ಬರೂ ಹೊರಡುವವರೆಗೆ ಸುಮ್ಮನಿದ್ದಳು ಬಳಿಕ ಹೇಳಿದಳು,

"ಚೆನ್ನಾಗಿ ಸಿಕ್ಕಿ ಬೀಳುತ್ತಿದ್ದಿರಿ. ಮನಸ್ಸಿನಲ್ಲಿ ಅನ್ನಿಸಿದ್ದನ್ನೆಲ್ಲಾ ಸಮಯ ಸಂದರ್ಭವಿಲ್ಲದೆ ಎಲ್ಲರ ಎದುರಿಗೂ ಹೇಳಿಬಿಡುವುದೇ?"

"ನನ್ನ ಮನಸ್ಸಿನಲ್ಲಿ ಏನನ್ನಿಸಿತೆಂದು ನಿಮಗೆ ಗೊತ್ತೆ?"

"ಏನನ್ನಿಸಿದರೆ ತಾನೇ ಏನು ನಾರಾಯಣ್? ಮಹಾ ಪತ್ನೀ ವ್ರತರು ನೀವು. ಒಂದು ಬಾರಿ ನಿಮ್ಮ ಸೇವೆಯನ್ನು ಅವರು ಆದರದಿಂದ ಸ್ವೀಕರಿಸಿದರೆ ಆ ಆನಂದದಲ್ಲಿ ಇದನ್ನೆಲ್ಲಾ ಒಂದು ಕ್ಷಣದಲ್ಲಿ ಮರೆಯುವಿರಿ"

"ಆ ಮಾತು ಬೇಡ ನೀರಜಾ. ನಿಮ್ಮ ಸ್ನೇಹಪೂರ್ಣ ಸಹವಾಸ ಕ್ಕಾಗಿ ನಾನು ನಿಮಗೆ ಅತ್ಯಂತ ಕೃತಜ್ಞನಾಗಿದ್ದೇನೆ. ಆದರೆ ಮಾಲತಿ! ಅವಳ ಪ್ರಶ್ನೆಯೇ ಬೇರೆ. ಅಲ್ಲದೆ ನನ್ನ ಎರಡು ಮಕ್ಕಳ ಹೊಣೆ ಬೇರೆ ಇದೆ."

"ಅಂದರೆ ಅವರೆಷ್ಟು ನಿಮ್ಮ ವಿಚಾರದಲ್ಲಿ ಅನಾದರಣೆ ತೋರಿದರೂ, ನಿಮ್ಮ ಹೃದಯದಲ್ಲಿ ಅವರಿಗೆ ಇರುವ ಉಚ್ಚಸ್ಥಾನ ಇದ್ದೇ ಇರುತ್ತದೆ"

"ಹಾಗಲ್ಲ, ಈ ಸಮಸ್ಯೆ ಬಹಳ ಜಟಿಲವಾದುದು, ನೀರಜಾ"

"ಯೋಚನೆ ಮಾಡಿ ಅದಕ್ಕೆ ಉತ್ತರವನ್ನು ಕಂಡುಹಿಡಿಯಿರಿ ನಾರಾಯಣ್. ಇವತ್ತು ನಾನು ನಿಮ್ಮ ಗುಣಗಳಿಗೆ ಲುಬ್ಧಳಾಗಿದ್ದೇನೆ. ಎಲ್ಲಿಯಾದರೂ ಸ್ವಲ್ಪ ಆಶಾತಂತುವಿದ್ದರೆ ಹೀಗೆಯೇ ಇರುತ್ತೇನೆಂದೂ ಹೇಳಬಹುದು. ಆದರೆ ಮನುಷ್ಯ ಹೃದಯ. ಮಿತಿಮೀರಿ ತಾಪಕೊಟ್ಟರೆ ಅದರ ಸ್ನೇಹದ ಝರಿ ಬತ್ತಿಹೋಗಬಹುದು. ನಿಮಗೆ ಯಾವುದು ಮುಖ್ಯವೋ ಅದನ್ನು ಆರಿಸಿಕೊಂಡು ಕಾಪಾಡಿಕೊಳ್ಳಿ"

"ನೀರಜಾ, ಒಂದೊಂದು ಬಾರಿ ನಿಮ್ಮ ಮಾತುಗಳನ್ನು ಕೇಳಿದರೆ ನನಗೆ ಆಶ್ಚರ್ಯವಾಗುತ್ತದೆ. ಹಾಸ್ಯದಲ್ಲಿ ಶುರುವಾದುದನ್ನು ನೀವು ಏಕೆ ಇಷ್ಟು ಬೆಳೆಯಗೊಟ್ಟಿರಿ?"

"ಅದಕ್ಕೆ ನೀವೇ ಕಾರಣ ನಾರಾಯಣ್. ನಿಮ್ಮ ಮುಖವನ್ನು ನೋಡಿ ನನ್ನ ಅಂತಃಕರಣದಲ್ಲಿ ಒಂದು ವಿಧವಾದ ಕರುಣೆ ಜಾಗೃತವಾಯಿತು. ಮನಸ್ಸಿನಲ್ಲಿ ಒಂದು ಸ್ವಲ್ಪ ಜಾಗ ಸಿಕ್ಕಿತೋ ಇಲ್ಲವೋ ನನ್ನ ಯೋಚನೆಗಳಲ್ಲೆಲ್ಲಾ ಬರತೊಡಗಿ ಪರಿಸ್ಥಿತಿಯನ್ನು ಇಲ್ಲಿಗೆ ತಂದಿಟ್ಟಿರಿ"

ನಾರಾಯಣನಿಗೆ ಅವಳ ಮಾತುಗಳಿಂದ ಬಹಳ ನಗುಬಂದಿತು.

ನೀರಜೆ ಹೇಳಿದಳು,

"ಈಗ ನೋಡಿದರೆ ನಿಮಗೆ ಹೃದಯದೌರ್ಬಲ್ಯ ಹೆಚ್ಚು. ಇದರಿಂದ ನಾನು ನಿಮ್ಮನ್ನು ಪಾರು ಮಾಡುವುದು ಹೇಗೆ ನನಗೆ ತಿಳಿಯದು"

ನೀರಜೆ ಮಾತನಾಡುತ್ತಿದ್ದಂತೆಯೇ ಆಳು ಬಂದು ಅವಳನ್ನು ಕರೆದ,

"ದೊಡ್ಡಮ್ಮಾವರು ಕರೆಯುತ್ತಾರೆ"

ನೀರಜೆ ಎದ್ದು ಮಾಡದಿಂದ ನಾಲ್ಕಾರು ಮಾಸಪತ್ರಿಕೆಗಳನ್ನು ತೆಗೆದು ಅವನ ಮುಂದೆ ಹಾಕಿದಳು,

"ಇವನ್ನು ನೋಡುತ್ತಿರಿ, ನಾನು ಬೇಗ ಬಂದು ಬಿಡುತ್ತೇನೆ. ಓಡಿ ಗೀಡಿ ಬಿಟ್ಟೀರಿ, ಜೋಕೆ"

ಅವಳು ಹೋದ ಹತ್ತು ನಿಮಿಷಗಳಾದ ಮೇಲೆ ಲೀಲಾ ಏತಕ್ಕೋ ಅಲ್ಲಿಗೆ ಬಂದವಳು ಕೇಳಿದಳು,

"ನೀರಜಾ ಎಲ್ಲಿ? ಒಬ್ಬರೇ ಕುಳಿತಿದ್ದೀರಾ?"

"ಇಷ್ಟೊತ್ತೂ ಇಲ್ಲೇ ಇದ್ದರು. ಈಗ ಅವರ ಚಿಕ್ಕಮ್ಮ ಹೇಳಿ ಕಳುಹಿಸಿದರು, ಹೋಗಿದ್ದಾರೆ"

"ಹುಂ" ಎಂದು ಲೀಲಾ ಒಂದು ಕ್ಷಣ ಅಲ್ಲಿಯೇ ನಿಂತು, "ನಾನು ಕೆಲವು ಮಾತುಗಳನ್ನು ಕೇಳಬಹುದೇ?"

"ಓಹೋ ಕೇಳಿ" ಎಂದ ನಾರಾಯಣ.

"ನೀವು ಮಾಲತಿಗೆ ಈಗೀಗ ಬಹಳ ಅನ್ಯಾಯ ಮಾಡುತ್ತಿರುವಿರಿ. ಅವರನ್ನು ಇಲ್ಲಿಗೆ ಕರೆತರುವುದಿಲ್ಲ, ನೀವು ಮಾತ್ರ ಬರುವಿರಿ. ನೀಲಗಿರಿಗೂ ಅವರು ಬರುವುದು ನಿಮಗೆ ಬೇಡವಾಗಿದೆ. ಏಕೆ? ನೀರಜೆಯ ಸಹವಾಸ ದಲ್ಲಿ ಕೈಹಿಡಿದ ಪತ್ನಿಯನ್ನು ಸರಿಯಾಗಿ ಕಾಣುವುದನ್ನು ಮರೆತು ಬಿಟ್ಟಂತೆ ಕಾಣಿಸುತ್ತದೆ ಇದು ನಿಮ್ಮಂತಹ ಶಿಷ್ಟರಿಗೆ ಒಪ್ಪುವದೇ?" ಎಂದು ಲೀಲಾ ಮುಂದೆ ಅಡಿಯಿಡುತ್ತ ಹೇಳಿದಳು, "ನೀರಜೆಯಂತೂ— ಅವಳ ರೀತಿಯೆ ನಮಗೆ ಅರ್ಥವಾಗುವುದಿಲ್ಲ"

ಮಾತನಾಡಿ ಅವಳು ಹೊರಟು ಹೋದರೂ ಅವಳ ಮಾತಿನ ಹೊಡೆತದಿಂದ ಅವನಿಗೆ ಬಹಳ ಹೊತ್ತು ಮನಸ್ಥಿತಿಯೇ ಸರಿಯಾಗಿರಲಿಲ್ಲ. ಅರ್ಧ ಗಂಟೆಯಾದಮೇಲೆ ನೀರಜೆ ಹಿಂದಿರುಗಿ ಬಂದಳು; ಅವನ ಮುಖ ವನ್ನು ನೋಡಿದಳು,

"ಏನು ತಪಸ್ಸು ನಡೆಯುತ್ತಿರುವಂತಿದೆ!"

"ನೀರಜಾ" ನಾರಾಯಣ ಕೇಳಿದ, "ನಾನು ಮಾಲತಿಗೆ ಅನ್ಯಾಯ ಮಾಡುತ್ತಿರುವೆನೇ?"

"ನೀವೇ" ನೀರಜ ನಗದೆ ಕೇಳಿದಳು, "ಹೇಗೆ? ಅವರಿಗೆ ನಿಮ್ಮಿಂದ ಸಲ್ಲುತ್ತಿದ್ದ ಸೇವೆಯಲ್ಲಿ ವ್ಯತ್ಯಾಸವಾಗಿದೆಯೆ?"

"ಹುಂ, ಹಾಗೆ ಹೇಳೋಣ—"

"ಅದು ಅನ್ಯಾಯವೆಂದು ನನಗೆ ತೋಚುವುದಿಲ್ಲ. ಆದರೆ ಅವರಿಗೆ "ಇದೇಕೆ ಹೀಗಾಯಿತು?" ಎಂದು ಆಶ್ಚರ್ಯವಾಗಬಹುದು. ತಮಗೆ ಅದಕ್ಕೆ ಪ್ರತಿಯಾಗಿ ಸನ್ಮಾನ ಮಮತೆಗಳನ್ನು ಕೊಡಲಾಗದಿದ್ದರೂ ಅವರು ನಿಮ್ಮಿಂದ ಮೊದಲು ಸಿಗುತ್ತಿದ್ದಷ್ಟೇ ಈಗಲೂ ಸಿಗುವುದೆಂದು ನಿರೀಕ್ಷಿಸಿ ಭಗ್ನಮನೋರಥರಾಗಬಹುದು. ಇದೇನೋ ಅನ್ಯಾಯವೇ: ಆದರೆ ಅವರು ಮಾಡಿದ ಅನ್ಯಾಯಕ್ಕೆ ಸಿಗುವ ಸಣ್ಣ ಪ್ರತಿಫಲರೂಪದ ಅನ್ಯಾಯ"

"ಮಾಲತಿಯ ಮೇಲೆ ನಿಮಗೆ ಕೋಪವೇ, ನೀರಜಾ?"

"ಛೇ! ಉಂಟೇ! ನಿಮಗೆ ಈ ಅತೃಪ್ತಿಯ ಅಸೌಖ್ಯವಿಲ್ಲದೆ ಇದ್ದರೆ ನಾನೂ ನಿಮ್ಮೊಡನೆ ಬಂದು ನಿಮ್ಮ ದೇವಿಯ ಆರಾಧನೆ ಮಾಡುತ್ತಿದ್ದೆ"

ಲೀಲೆ ಬಂದು ಆಟಕ್ಕೆ ಕರೆಯುವವರೆಗೂ ಇವರ ಮಾತು ನಡೆದೇ ಇತ್ತು. ಆಟವಾದ ಮೇಲೆಯೂ ಹರಟೆ ಒಂದೇ ಸಮನೆ ನಡೆಯಿತು.

ಮನೆಗೆ ಹೋದ ಕೂಡಲೆ ಮಾಲತಿ ಹೇಳಿದಳು,

"ಇವತ್ತು ಬೇಗ ಬರುವಿರೆಂದು ತಿಳಿದಿದ್ದೆ"

"ಏಕೆ?"

"ನಾಳೆ ಊರಿಗೆ ಹೊರಡುವಿರಲ್ಲ ಅದಕ್ಕೆ"

"ಅದಕ್ಕೇ—?"

ಮಾಲತಿ ಅವನ ಉದಾಸೀನ ಉತ್ತರದಿಂದ ಕುಂಠಿತಳಾದಳು.

ಊಟವಾದ ಮೇಲೆ ಕೇಳಿದಳು,

"ಈ ನಡುವೆ ನೀವು ಬಹಳ ಬದಲಾಯಿಸಿ ಹೋಗಿದ್ದೀರಿ. ಅದರಲ್ಲೂ ಈಗ ಆರೇಳು ದಿನಗಳಿಂದ"

"ಇದು ನಿನ್ನ ಊಹೆ ಅಷ್ಟೆ"

"ಇಲ್ಲ. ನೀವು ನನ್ನನ್ನು ತಿರುಗಾಡುವುದಕ್ಕೆ ಹೊರಗೆ ಬಾರೆಂದು ಕರೆದು ಎಷ್ಟು ದಿನಗಳಾದುವು ಜ್ಞಾಪಿಸಿಕೊಳ್ಳಿ"

"ಇವತ್ತು, ನನ್ನ ಕರೆಯಲಿಲ್ಲ. ಅದಕ್ಕೆ ಮೊದಲು ಮದುವೆ ಮನೆಯ ಓಡಾಟದಲ್ಲಿ ನಿನಗೆ ಏನೂ ಬೇಕಿರಲಿಲ್ಲ. ಏಕೆ, ದೇವಿಗೆ ಒಂದು ದಿನ ಸೇವೆ ತಪ್ಪಿದರೂ ಕೋಪ ಬರುತ್ತದೆಯೇನು ?''

ನೀರಜೆಯ ಮಾತುಗಳು ಸುಲಭವಾಗಿ ಅವನ ಬಾಯಿಯಿಂದ ಬಂದುವು.

''ಹೌದು, ನಾಳೆ ಊರಿಗೆ ಹೊರಡುತ್ತೀರಿ. ಇವತ್ತಾದರೂ ಸಲ್ಪ ಜೊತೆಯಲ್ಲಿರಬೇಡವೆ ?''

ಅವಳ ಧ್ವನಿಯಲ್ಲಿದ್ದ ಉದ್ವೇಗ ನಾರಾಯಣನ ಹೃದಯವನ್ನು ಹೊಕ್ಕು ಅವನನ್ನು ತಳಮಳಿಸಿಬಿಟ್ಟಿತು. ಒಂದು ಕ್ಷಣದಲ್ಲಿ ಅವನ ಅಂತಃಕರಣ ಅವಳಿಗಾಗಿ ಹಾತೊರೆಯಿತು.

"ಮಾಲಾ!" ಅವಳ ಕೈ ಹಿಡಿದುಕೊಂಡು ಎದ್ದ ನಾರಾಯಣ, "ಬಾ ಹೊರಗೆ ಹೋಗಿ ಮನತಣಿಯುವಷ್ಟು ತಿರುಗಾಡಿ ಮಾತ ನಾಡಿಕೊಂಡು ಬರೋಣ."

ಮರುದಿನ ಬೆಳಗಾದಮೇಲೂ ಅವನ ಉನ್ಮತ್ತತೆ ಇಳಿದಿರಲಿಲ್ಲ. ಮಾಲತಿಯನ್ನು ಅತ್ತಿತ್ತ ಹೋಗಲು ಬಿಡಲಿಲ್ಲ. ಊರಿಗೆ ಹೊರಡುವ ವಿಚಾರದಲ್ಲಿ ಉತ್ಸಾಹ ಸ್ವಲ್ಪ ಕಡಿಮೆಯಾಯಿತು ಸಹ.

"ಮಾಲಾ, 'ನನಗೆ ಏನೋ ಅನಿವಾರ್ಯ ತೊಂದರೆ ಬಂದಿರುವುದ ರಿಂದ ಬರಲಾಗುವುದಿಲ್ಲ ಊರಿಗೆ' ಎಂದು ಹೇಳಿ ಕಳುಹಿಸಿಬಿಡಲೇ ?" ಎಂದೂ ಅವಳನ್ನು ಕೇಳಿದ.

ಅವಳು, ''ಛೇ ಹಾಗೆ ಮಾಡುವುದೇಕೆ ? ಹೋಗಿ ಬೇಗ ಬಂದು ಬಿಡಿ. ಬೇಕಾದರೆ ನಾನೂ ಇವತ್ತು ನಿಲ್ದಾಣಕ್ಕೆ ಬರುತ್ತೇನೆ" ಎಂದಳು.

ನಿಲ್ದಾಣವನ್ನು ತಲುಪುವವರೆಗೂ ನಾರಾಯಣನಿಗೆ, "ಈಗ ಮಾಲತಿಗೆ ತನ್ನ ಸ್ನೇಹಿತರು ಯಾರು, ಎಲ್ಲಿ ನಿತ್ಯ ಸಂಜೆಯ ಹೊತ್ತನ್ನು ಕಳೆಯುತ್ತೇನೆ ? ಎಂಬುದೆಲ್ಲ ತಿಳಿಯುತ್ತದೆ'' ಎಂಬ ಯೋಚನೆಯೇ ಬರಲಿಲ್ಲ. ಅವಳ ಸಾಮೀಪ್ಯ ಅವನಿಗೆ ಬೇಕಾಗಿದ್ದಿತು. ಅಷ್ಟೇ ಅವ ನಿಗೆ ಗೊತ್ತಿದ್ದುದು.

ನಿಲ್ದಾಣದಲ್ಲಿ ಆಗಲೇ ಎಲ್ಲರೂ ಬಂದುಬಿಟ್ಟಿದ್ದರು. ಲೀಲಾ, ಜನಾರ್ದನರು ಮಾಲತಿಯನ್ನು ಮಾತನಾಡಿಸಿದರು.

ಗಾಡಿಯಲ್ಲಿ ತುಂಬ ಜನರಿದ್ದುದರಿಂದಲೋ ಏನೋ ಮಾಲತಿಗೆ ಇವರುಗಳ ಜೊತೆಯಲ್ಲಿಯೇ ನಾರಾಯಣ ಹೊರಡಲಿದ್ದಾನೆಂದು ಹೊಳೆಯಲಿಲ್ಲ. ಲೀಲೆಯನ್ನು ನೋಡಿ ಅವಳಿಗೆ ಸಂತೋಷವಾಯಿತು.

“ನೀವೂ ನೀಲಗಿರಿಗೆ ಹೋಗುತ್ತಿದ್ದೀರಾ?'' ಎಂದು ಕೇಳಿದಳು.

“ಹೌದು, ನೀವೂ ಬರಬಹುದಾಗಿದ್ದಿತು'' ಲೀಲೆಯೆಂದಳು.

“ಬರುವಿಯಾ ಮಾಲಾ? ನೀನು ಬರುವುದಾದರೆ ಮುಂದಿನ ಗಾಡಿಯಲ್ಲಿ ಹೋಗಬಹುದು” ನಾರಾಯಣ ಕಾತರನಾಗಿ ಕೇಳಿದ ಮಾಲತಿಯನ್ನು.

ಅವಳು ಗೊಂದಲದಲ್ಲಿ ಬಿದ್ದಳು “ಕೈಯಲ್ಲಿ ಹಣವಿಲ್ಲ, ಗೆಳೆಯರ ಆಹ್ವಾನದಮೇಲೆ ಹೋಗುತ್ತಿದ್ದಾರೆ. ನನ್ನನ್ನು ಬೇರೆ ತಾವು ಕರೆಯುತ್ತಿದ್ದಾರಲ್ಲ” ಎಂದುಕೊಳ್ಳುತ್ತಿದ್ದಂತೆಯೇ ಅವಳಿಗೆ ಒಂದು ವಿಷಯ ನೆನಪಿಗೆ ಬಂದಿತು,

“ಬರಬಹುದಾಗಿದ್ದಿತು. ಆದರೆ ನಮಗೆ ಈ ಶಿಕ್ಷಣಶಿಬಿರದ ಕಾಟವೊಂದಿದೆಯಲ್ಲ?” ಎಂದು ನಕ್ಕಳು. “ನೀವು ಹೋಗಿಬಂದು ನನಗೆ ನಿಮ್ಮ ಅನುಭವಗಳನ್ನೆಲ್ಲಾ ಹೇಳಿ. ಅಷ್ಟು ನನಗೆ ಬೇಕಾದಷ್ಟಾಯಿತು.”

ಗಾಡಿ ಚಲಿಸುವವರೆಗೂ ಮಾಲತಿಯೊಡನೆ ಇದ್ದು ಬಳಿಕ ನಾರಾಯಣ ಗಾಡಿಯನ್ನು ಹತ್ತಿದ. ನೀರಜೆಯ ಬಳಿ ಅವನಿಗೆ ಜಾಗ ಮಾಡಿದ್ದರು. ಕುಳಿತುಕೊಂಡ.

ಸ್ವಲ್ಪಹೊತ್ತು ಯಾರೂ ಏನೂ ಮಾತನಾಡಲಿಲ್ಲ. ಬಳಿಕ ಲೀಲೆ ಹೇಳಿದಳು,

“ನಾರಾಯಣ್, ನೀವು ಬೇಕೆಂದು ಮಾಲತಿಯನ್ನು ಕರೆತರುವುದಿಲ್ಲವೆಂದು ತಿಳಿದಿದ್ದೆ, ಕ್ಷಮಿಸಿ.''

ನೀರಜೆ ಸಿಟ್ಟುಸಿರನ್ನು ಬಿಟ್ಟು ಹೇಳಿದಳು,

"ಮೇಲೆಮೇಲೆ ನೋಡುವವರಿಗೆ ಒಳಗಿನ ವಿಷಯ ಗೊತ್ತಾಗ ದಿರುವುದು ಸಹಜ. ಮಾಲತಿ ನಿಲ್ದಾಣಕ್ಕೆ ನಿಮ್ಮನ್ನು ಬೀಳ್ಕೊಳ್ಳು ವುದಕ್ಕೆ ಬಂದರಲ್ಲ, ಎಷ್ಟು ಆಶ್ಚರ್ಯ ನಾರಾಯಣ್ ?"

ನಾರಾಯಣ ಸುಮ್ಮನಿದ್ದ. ಜನಾರ್ದನ ಹೇಳಿದ,

"ಇದರಲ್ಲಿ ಆಶ್ಚರ್ಯಪಡುವುದಕ್ಕೆ ಏನಿದೆ? ಅವರು ಬರದಿದ್ದರೆ ನನಗೆ ಆಶ್ಚರ್ಯವಾಗುತ್ತಿತ್ತು."

ನೀರಜೆ ಸುಮ್ಮನೆ ನಸುನಗೆಯನ್ನು ಸೂಸಿ ಆ ಮಾತನ್ನು ಅಲ್ಲಿಗೇ ನಿಲ್ಲಿಸಿ ಕೇಳಿದಳು,

"ಮುಂದಿನ ನಿಲ್ದಾಣವಿನ್ನೂ ಎಷ್ಟು ದೂರವಿದೆ ಲೀಲಾ ?"

ಲೀಲೆ ಹೇಳಿದಳು,

"ಇನ್ನೂ ಹನ್ನೆರಡು ಮೈಲಿ ಇರಬಹುದು. ಫ್ಯಾನ್ ಹಾಕಲೇ ನೀರಜಾ ? ಸೆಖೆ ಕಡಿಮೆಯಾಗುತ್ತದೆ."

"ಬೇಡ. ಸುಮ್ಮನೆ ಕೇಳಿದೆ ನಾನು ಅಷ್ಟೆ. ಕಿಟಿಕಿಗಳಿಂದ ಬೇಕಾ ದಷ್ಟು ಗಾಳಿ ಬರುತ್ತಿದೆ."

ಅರ್ಧ ಗಂಟೆಯ ನಂತರ ನಾರಾಯಣನೂ ಅವರೊಡನೆ ಹರಟೆಗೆ ಸೇರಿದ. ನಿಧಾನವಾಗಿ ಮಾಲತಿ ಅವನ ಮನಃಪಟಲದಿಂದ ದೂರ ವಾದಳು.

ಮಧ್ಯಾಹ್ನದ ವೇಳೆಗೆ ಲೀಲೆ ಹಾಗೆಯೇ ಒರಗಿಕೊಂಡು ನಿದ್ರಾವಶ ಳಾದಳು. ಮಾತಿನಲ್ಲಿ ಜನಾರ್ದನನಿಗೂ ಆಸಕ್ತಿ ಕಡಿಮೆಯಾಗಿ ಅವನು ಒಂದು ಕಥೆಪುಸ್ತಕವನ್ನು ತೆಗೆದುಕೊಂಡು ಅದರಲ್ಲಿ ಮುಳುಗಿಬಿಟ್ಟ.

ನೀರಜೆ ನಾರಾಯಣನಿಗೆ ಹೇಳಿದಳು,

"ನಿಮಗೆ ನಿದ್ರೆ ಬರುವುದಾದರೆ ಸ್ವಲ್ಪ ಮಾಡಿ. ಇವತ್ತು ನಿಮಗೆ ನನ್ನ ಮಾತುಗಳಲ್ಲಿ ರುಚಿಯಿಲ್ಲ."

"ಹಾಗೇಕೆ ಹೇಳುತ್ತೀರಿ ?" ನಾರಾಯಣ ಕೇಳಿದ.

"ನನ್ನ ಕಣ್ಣಿಗೆ ನಿಮ್ಮಲ್ಲಾಗಿರುವ ಬದಲಾವಣೆ ಕಾಣುವುದಿಲ್ಲವೆಂದು ಅಂದುಕೊಂಡಿದ್ದೀರಾ ?" ಎಂದು ನೀರಜೆ ನಕ್ಕಳು. "ನಾನು ಚಿಕ್ಕವ

ಳಾಗಿದ್ದಾಗ ನಡೆದ ಒಂದು ಸಂಗತಿ ನೆನಪಿಗೆ ಬರುತ್ತದೆ ನಿಮ್ಮನ್ನು ನೋಡಿ ದರೆ."

"ಅದೇನು ಹೇಳಿ. ಅದು ನನಗೆ ಅನ್ವಯಿಸುವುದೋ ಇಲ್ಲವೋ ಹೇಳುತ್ತೇನೆ."

"ನಿಮಗೆ ಅದು ಸಂಪೂರ್ಣವಾಗಿ ಅನ್ವಯಿಸುತ್ತದೆ" ಎಂದಳು ನೀರಜೆ, "ನಮ್ಮ ಶಾಲೆಯ ದಿನಗಳಲ್ಲಿ ನಡೆದ ವಿಷಯ ಇದು. ನಮ್ಮ ತರಗತಿಯಲ್ಲಿ ಒಬ್ಬಳು ಹುಡುಗಿ ಇದ್ದಳು. ಅವಳು ಎಲ್ಲರಿಗಿಂತಲೂ ತುಂಬ ಬುದ್ಧಿಮತಿಯಾಗಿ ಸುರಪ್ರಿಯಾಗಿದ್ದಳು. ಹಣವಂತರ ಮನೆಯ ಹುಡುಗಿಯೂ ಹೌದ. ಶಾಲೆಯಲ್ಲಿ ಎಲ್ಲರಿಗೂ ಅವಳಲ್ಲಿ ವಿಚಿತ್ರ ವಿಶ್ವಾಸ. ಅವಳು ಸರಸ್ವತಿಯ ಅಪರಾವತಾರವೇನೋ ಎಂಬಂತೆ ಅವಳನ್ನು ಉಬ್ಬಿಸುತ್ತಿದ್ದರು. ನನಗಂತೂ ಅವಳಲ್ಲಿ ಪ್ರಾಣ

"ಅವಳ ಹಿಂದೆ ಮುಂದೆ ಓಡಾಡಿಕೊಂಡು "ನನ್ನ ಸ್ನೇಹಿತೆ ವಿಮಲ ಹಾಗೆಂದಳು, ಹೀಗೆಂದಳು" ಎಂದು ಹೇಳಿಕೊಂಡು ತಿರುಗಾಡುತ್ತಿದ್ದೆ. ನನ್ನ ಮನಸ್ಸಿನಲ್ಲಿ ಅವಳಿಗೆ ನನ್ನಲ್ಲಿ ಬಹಳ ಸ್ನೇಹವೆಂದೇ ಭಾವನೆ ಯಿತ್ತು. ಅವಳೂ ನನ್ನ ಪೂಜೆಯಿಂದ ಒಮ್ಮೊಮ್ಮೆ ಸಂತುಷ್ಟಳಾಗಿ ನನ್ನನ್ನು ಹೊಗಳುತ್ತಿದ್ದಳು,

"ನೀನು ನನ್ನ ಆದರ್ಶಗೆಳತಿ" ಎನ್ನುತ್ತಿದ್ದಳು.

"ಅವಳು ಕೆಟ್ಟವಳೆಂದಲ್ಲ. ಬಹುಶಃ ಅವಳಿಗೆ ಇತರರಿಂದ ವಿಶ್ವಾಸ ಪ್ರೇಮಗಳನ್ನು ಸ್ವೀಕರಿಸಿ ಅಭ್ಯಾಸ ಬಿದ್ದುಹೋಗಿದ್ದಿತೇನೋ? ತಾನು ನನ್ನ ಸಹವಾಸವನ್ನು ಸಹಿಸುವುದೇ ನನ್ನ ಸ್ನೇಹಕ್ಕೆ ಪ್ರತಿಫಲವೆಂದು ತಿಳಿದಿದ್ದಳು. ಸಲಿಗೆ ಬೆಳೆದಂತೆಲ್ಲ ಅವಳು ಮನಸ್ಸು ಬಂದಂತೆ ಇರುತ್ತಿದ್ದಳು. ಒಮ್ಮೊಮ್ಮೆ ತಿರಸ್ಕಾರಮಾಡಿ ಬಿಡುತ್ತಿದ್ದಳು. ಕೆಲವುಬಾರಿ ನಾನು ಕೊಟ್ಟಿದ್ದನ್ನು ನಗುನಗುತ್ತ ತೆಗೆದುಕೊಂಡು ನನ್ನನ್ನು ಹಾಸ್ಯಮಾಡುತ್ತಿದ್ದಳು.

"ನನಗೆ ಅದೊಂದೂ ಆಗ ತಿಳಿಯುತ್ತಿರಲಿಲ್ಲ. ಅವಳು ನನ್ನ ಮಾತಿಗೆ ಸ್ವಲ್ಪ ಕಿವಿಗೊಟ್ಟರೆ, ನಾನು ತಂದುದನ್ನು ತೆಗೆದುಕೊಂಡರೆ,

ಕೊನೆಗೆ ನನ್ನ ಮುಖವನ್ನು ನೋಡಿ ಮುಗುಳ್ನಗೆ ನಕ್ಕರೆ ನಾನು ಆನಂದ ಪರವಶಳಾಗಿಬಿಡುತ್ತಿದ್ದೆ.

"ನಾನು ಅವಳ ಜೊತೆ ಸೇರುವುದಕ್ಕೆ ಮೊದಲು ನನಗೆ ಕೆಲವರು ಗೆಳತಿಯರಿದ್ದರು. ಅವರೆಲ್ಲರೂ ನನ್ನಂತೆ ಸಾಮಾನ್ಯರು. ವಿಮಲೆಯನ್ನು ನೋಡುವುದಕ್ಕೆ ಮುಂಚೆ ನಮ್ಮ ನಮ್ಮಲ್ಲಿ ಗಾಢ ಸ್ನೇಹವಿತ್ತು. ಆದರೆ ಆಮೇಲೆ ನಾನು ಇವರಿಂದ ಬಿಡಿಸಿಕೊಂಡು ಅವಳ ಜೊತೆ ಸೇರಿದೆ.

"ಕೊನೆಗೊಂದು ದಿನ ಯಾರು ಯಾರೋ ಇದ್ದಾಗ ಅವಳು ನನ್ನನ್ನು ಅಪಮಾನಗೊಳಿಸಿದಳು. ಏನೋ ಚಿಕ್ಕಮಾತಿಗಾಗಿ. ಅವತ್ತು ಅವಳು ಅಂದಿದ್ದು ನನಗೆ ಇನ್ನೂ ಮರೆಯದು, "ನಾಯಿಯಂತೆ ನನ್ನ ಹಿಂದೆ ಮತ್ತೆ ಬಂದೀಯೆ!" ಎಂದಳು. ಆ ಮಾತು!

"ಈ ಆಕಸ್ಮಿಕ ಪ್ರಕರಣದಿಂದ ನೊಂದು ನಾನು ನನ್ನ ಹಳೆಯ ಗೆಳತಿಯರ ಆಶ್ರಯಕ್ಕಾಗಿ ಬಂದೆ. ಆದರೆ ಅವರು ನನ್ನ ಅಲಕ್ಷ್ಯೆಯಿಂದ ಅಸಹ್ಯಪಟ್ಟುಕೊಂಡಿದ್ದರು. ಒಂದೇ ನಿಮಿಷದಲ್ಲಿ ಅವರು ತಮ್ಮೊಡನೆ ನನ್ನನ್ನು ಕರೆದುಕೊಳ್ಳುವುದಿಲ್ಲವೆಂದು ನನಗೆ ತಿಳಿದುಹೋಯಿತು. "ಮತ್ತೆ ವಿಮಲ ನಸುನಗೆಯಿಂದ ಸನ್ನೆಮಾಡಿದರೆ ಸಾಕು, ನೀನು ನಮ್ಮನ್ನು ಆ ಕ್ಷಣದಲ್ಲಿ ಮರೆತು ಅವಳ ಹಿಂದೆ ಹೊರಟು ಬಿಡುತ್ತಿ" ಎಂದು ಅವರು ಸ್ಪಷ್ಟವಾಗಿ ಹೇಳಿದರು. ನನಗೆ ಅದಕ್ಕೆ ಉತ್ತರ ಕೊಡ ಲಾಗಲಿಲ್ಲ. ಏಕೆಂದರೆ ಅವರ ಮಾತು ಅಕ್ಷರಶಃ ನಿಜವಾಗಿತ್ತು"

ಮಾತನಾಡುತ್ತ ಆಡುತ್ತ ನೀರಜೆಯ ಗಂಟಲು ಗದ್ಗದಿತ ವಾಯಿತು. ಕಣ್ಣುಗಳು ಅಶ್ರುಪೂರಿತವಾದುವು. ನಾರಾಯಣ ಸುತ್ತಲೂ ನೋಡಿದ. ಜನಾರ್ಧನ ಕಥೆಯ ಪುಸ್ತಕದಲ್ಲಿ ಲೀನನಾಗಿದ್ದ. ಲೀಲೆ ಗಾಢನಿದ್ರೆಯಲ್ಲಿದ್ದಳು. ಆ ಸಮಾಧಾನದಿಂದ ಒಮ್ಮೆ ನಿಟ್ಟುಸಿರನ್ನು ಬಿಟ್ಟು, ಮೆಲ್ಲಗೆ ಹೇಳಿದ,

"ನೀರಜಾ, ಎಂದೋ ಕಳೆದುಹೋದ ಸಂಗತಿಗಾಗಿ ಇವತ್ತು ಏತಕ್ಕೆ ದುಃಖಿಸುವಿರಿ? ಈಗಿನ ಪರಿಸ್ಥಿತಿಗೂ ಇದಕ್ಕೂ ಎಷ್ಟು ವ್ಯತ್ಯಾಸವಿದೆ!"

"ಎಂದೋ ಏನೂ ಕಳೆದು ಹೋಗಿಲ್ಲ ನಾರಾಯಣ್. ಅವತ್ತು ಜರ್ಜರೀಭೂತವಾದ ನನ್ನ ಹೃದಯದ ನೋವು ಇನ್ನೂ ನನ್ನ ನೆನಪಿನಲ್ಲಿ ಜಾಗೃತವಾಗಿದೆ. ಅಷ್ಟು ದುಃಖವನ್ನು ಮತ್ತೆ ನಾನು ಅನುಭವಿಸಿಲ್ಲ. ಅಬ್ಬ! ಇದು ಹೀಗಾದನಂತರ ನನಗೆ ಶಾಲೆಯ ಮೇಲೆ ದ್ವೇಷ ಉಂಟಾಯಿತು. ನನ್ನ ಅವಸ್ಥೆಯನ್ನು ನೋಡಲಾರದೆ ನಮ್ಮ ತಾಯಿ ಇಲ್ಲಿಗೆ, ಚಿಕ್ಕಮ್ಮನ ಬಳಿಗೆ ಕಳುಹಿಸಿದರು. ಇಲ್ಲಿ ಶಾಲೆಗೆ ಸೇರಿದೆ."

ನೀರಜೆಯ ಕಣ್ಣುಗಳಲ್ಲಿ ಇನ್ನೂ ಅಶ್ರುಪ್ರವಾಹ ನಿಂತಿರಲಿಲ್ಲ. ಮಾತನ್ನು ನಿಲ್ಲಿಸಿ ಅವಳು ಸ್ವಲ್ಪ ಹೊತ್ತು ಕಿಡಿಕಿಯ ಚೌಕಟ್ಟಿನ ಮೇಲೆ ತಲೆಯಿಟ್ಟುಕೊಂಡು ಕುಳಿತಳು. ನಾರಾಯಣ ಸ್ತಬ್ಧನಾಗಿ ಅವಳನ್ನೇ ನೋಡುತ್ತಿದ್ದ.

ಇವರ ಮೌನದಿಂದ ಜನಾರ್ಧನನ ಏಕಾಗ್ರತೆ ಭಂಗವಾದಂತೆ ತೋರಿತು. ಅವನು ಪುಸ್ತಕವನ್ನು ಸರಿಸಿ ಇವರ ಕಡೆ ನೋಡಿದ,

"ಏನು, ನೀರಜೆ ನಿದ್ದೆಹೋಗಿಬಿಟ್ಟಳೇ?"

ನಿಜವನ್ನು ಹೇಳಲಾರದೆ ನಾರಾಯಣ ತಲೆದೂಗಿದ, "ಹುಂ"

"ಹಾಗಾದರೆ, ನೀವೇಕೆ ಈ ಮಾಸಪತ್ರಿಕೆಗಳನ್ನು ನೋಡಬಾರದು? ಅವುಗಳಲ್ಲಿ ಕೆಲವು ಉತ್ತಮ ಕಥೆಗಳಿವೆ."

"ಕೊಡಿ, ನೋಡುತ್ತೇನೆ" ಎಂದು ನಾರಾಯಣ ಮಾಸಪತ್ರಿಕೆಗಳನ್ನು ತೆಗೆದುಕೊಂಡು ಅವನ್ನು ತಿರುವಿಹಾಕತೊಡಗಿದ.

ನೀರಜೆ ಬೇಗನೇ ಸಮಾಧಾನ ಹೊಂದಿದಳು. ಆದರೆ ಅವಳು ಮಾತನಾಡಲು ಇಷ್ಟಪಡಲಿಲ್ಲ. ಕಿಟಿಕಿಯಿಂದಾಚೆಗೆ ಕಾಣುತ್ತಿದ್ದ ಪ್ರಕೃತಿ ದೃಶ್ಯಗಳನ್ನು ನೋಡುತ್ತ ನೀರವವಾಗಿ ಕುಳಿತಿದ್ದಳು.

ಮೈಸೂರಿನಲ್ಲಿ ಗಾಡಿಯಿಂದ ಇಳಿಯುವಾಗಲೂ ನೀರಜೆ ನಾರಾಯಣನ ಕಡೆಗೆ ತಿರುಗಲಿಲ್ಲ. ಊಟ ಮಾಡುವಾಗ, ಹೋಟೆಲಾದ್ದರಿಂದ ಹೆಚ್ಚು ಮಾತಿಗೆ ಅವಕಾಶವಿರಲಿಲ್ಲ. ಲೀಲಾ ಜನಾರ್ಧನರು ಬಿಟ್ಟೊಟ್ಟಿಗೆ ಪ್ರತಿಯೊಂದು ಏರ್ಪಾಡು ಮಾಡಲೂ ಹೋಗುತ್ತಿದ್ದುದ

ರಿಂದ ನಾರಾಯಣ—ನೀರಜೆಯರು ಒಟ್ಟಿಗೆ ಇರಬೇಕಾಗಿ ಬಂದು ಅವಳ ಮೌನದ ಪರಿಣಾಮ ಹೆಚ್ಚಿತು.

"ಬಸ್ಸಿನಲ್ಲಿ ಸಾಮಾನು ಹಾಕಿಸಿ ಬರುತ್ತೇವೆ" ಎಂದು ಜನಾರ್ಧನ, ಲೀಲಾ ಇಬ್ಬರೂ ಹೇಳಿದಾಗ, ನಾರಾಯಣ ಹೇಳಿದ,

"ನೀವೇಕೆ ಹೋಗಬೇಕು ಲೀಲಾ? ನೀವು ವಿಶ್ರಾಂತಿ ತೆಗೆದು ಕೊಳ್ಳಿ. ನಾನು ಜನಾರ್ಧನರೊಡನೆ ಹೋಗುತ್ತೇನೆ"

ಅದಕ್ಕೆ ಜನಾರ್ಧನ ಗಟ್ಟಿಯಾಗಿ ನಕ್ಕುಬಿಟ್ಟ,

"ಆಗುವುದಿಲ್ಲ. ಲೀಲೆಯೇ ಬರಲಿ. ಇಲ್ಲದಿದ್ದರೆ ಆಮೇಲೆ ಅವಳು ಸಾವಿರದೆಂಟು ತಪ್ಪುಗಳನ್ನು ನಮ್ಮ ಕೆಲಸದಲ್ಲಿ ಕಂಡುಹಿಡಿದು ಜಗಳ ಮಾಡುತ್ತಾಳೆ. ಹುಡುಗಿಯೆಂದು ನೀವು ಲೀಲೆಯನ್ನು ನಿರ್ಬಲೆ ಎಂದು ತಿಳಿದಿದ್ದರೆ, ನಾರಾಯಣ್, ಈಕ್ಷಣ ನಿಮ್ಮ ಆ ಅಭಿಪ್ರಾಯವನ್ನು ಬದಲಾಯಿಸಿ. ನಮ್ಮ ಮನೆಯಲ್ಲಿ ತುಂಬ ಜವಾಬುದಾರಿಯ ಕೆಲಸಗಳನ್ನೆಲ್ಲಾ ಅವಳೇ ಮಾಡುವವಳು. ನಾನು ಅವಳ ಪಟ್ಟಶಿಷ್ಯನಾದ್ದರಿಂದ ಜೊತೆಯಲ್ಲಿ ಕರೆದುಕೊಂಡು ಹೋಗುತ್ತಾಳೆ"

ಅವರಿಬ್ಬರೂ ಹೊರಟು ಹೋದಮೇಲೆ ನಾರಾಯಣನಿಗೆ ನೀರಜೆಯ ಮೌನ ತಡೆಯಲಸಾಧ್ಯವಾಯಿತು,

"ನೀರಜಾ, ನಿಮಗಾಗಿ ನಾನು ಬಂದೆ. ಈಗ ನಿಮಗೆ ಬೇಡವಾದರೆ ಹೇಳಿ ತಕ್ಷಣ ಹೊರಟು ಬಿಡುತ್ತೇನೆ ಹಿಂದಿರುಗಿ.' ಎಂದ.

ನೀರಜೆ ಬೆಚ್ಚಿಬಿದ್ದು ಅವನನ್ನು ನಿಟ್ಟಿಸಿ ನೋಡಿದಳು. ಕಣ್ಣುಗಳು ಹನಿಗೂಡಿದುವು, ಜೊತೆಗೇ ನಗುವೂ ಬಂದಿತು,

"ನಿಮಗೆ ಅರ್ಥವಾಗುವ ಭಾಷೆ ಯಾವುದು ಹೇಳಿ, ಸ್ವಲ್ಪ ಅದನ್ನು ಕಲಿತು ನಿಮ್ಮೊಡನೆ ಮಾತನಾಡುತ್ತೇನೆ. ಇಲ್ಲದಿದ್ದರೆ ನನಗೆ ನನ್ನ ಗಂಟಲು ಒಣಗುವುದು ಮಾತ್ರ ಲಾಭವಾಗುತ್ತೆ" ಎಂದಳು.

ನಾರಾಯಣನಿಗೆ ಅವಳ ನಗುವನ್ನು ಕಂಡು ಹೋದ ಉಸಿರು ಬಂದಂತಾಯಿತು.

"ನನಗೆ ಸರಳವಾಗಿ ಹೇಳಿದ ಹೊರತು ಏನೂ ಅರ್ಥವಾಗುವುದಿಲ್ಲ ನೀರಜಾ."

"ಏನು ಅರ್ಥವಾಗುವುದಿಲ್ಲ ?"

"ಏನು ಅಂದರೆ," ನಾರಾಯಣ ಸ್ವಲ್ಪ ಯೋಚಿಸಿ ಹೇಳಿದ, "ನಗುನಗುತ್ತ ಕಥೆ ಪ್ರಾರಂಭಿಸಿದಿರಿ. ಆಮೇಲೆ ಅಳುವುದಕ್ಕೆ ಪ್ರಾರಂಭಿಸಿದಿರಿ. ಅದಕ್ಕೆ ನೆನಪು ತಂದುಕೊಟ್ಟ ನೋವು ಕಾರಣವೆನ್ನೋಣ, ಆಗಲಿ. ಆದರೆ ಈ ಮೌನವೇಕೆ? ಗಂಟೆಗಟ್ಟಲೆ ಶಿಲೆಯಂತೆ ಕುಳಿತಿರಲು ನಿಮಗಾದುದಾದರೂ ಏನು ?"

ನೀರಜೆ ಕಣ್ಣುಗಳನ್ನು ಒರೆಸಿಕೊಂಡು ಹೇಳಿದಳು,

"ನಮ್ಮಿಬ್ಬರಲ್ಲಿ ಹೆಚ್ಚು ದುರದೃಷ್ಟಶಾಲಿಗಳು ಯಾರೆಂದು ಯೋಚಿಸುತ್ತಿದ್ದೆ. ಇನ್ನೂ ಅದು ನನಗೆ ಸರಿಯಾಗಿ ಹೊಳೆದಿಲ್ಲ"

ನಾರಾಯಣ ನಗಲಿಲ್ಲ.

"ನೀವಂತೂ ಅಲ್ಲ"

ಅದಕ್ಕೆ ಉತ್ತರ ಕೊಡದೆ ನೀರಜೆ ಎತ್ತಲೋ ನೋಡುತ್ತ ನಡುಗುವ ಧ್ವನಿಯಿಂದ ಹೇಳಿದಳು,

"ಮಾಲತಿ ನಿಮ್ಮನ್ನು ಸಂಪೂರ್ಣವಾಗಿ ಪಾದಾಕ್ರಾಂತರನ್ನಾಗಿ ಮಾಡಿಕೊಂಡುಬಿಟ್ಟಿದ್ದಾರೆ. ನನಗೆ ಈ ವಿಷಯದಲ್ಲಿ ಏನಾದರೂ ಅನುಮಾನವಿದ್ದಿದ್ದರೆ ಇವತ್ತು ಬೆಳಗ್ಗೆ ನಿಲ್ದಾಣದಲ್ಲಿ ಅದರ ನಿರಸನವಾಗುತ್ತಿತ್ತು. ಅವರಿಗೆ ನೀವು ಬೇಕೆಂದಿಲ್ಲ. ಆದರೆ ನಿಮ್ಮ ಮೇಲೆ ಅಧಿಕಾರವಿದೆ ಅವರಿಗೆ. ಅದು ಅವರಿಗೆ ಗೊತ್ತು"

"ಅಧಿಕಾರದ ಪ್ರಶ್ನೆ ಇಲ್ಲಿ ಬರುವುದಿಲ್ಲ ನೀರಜಾ. ಅವಳಿಗೆ ನಾನು ಬೇಡವಾದರೆ, ನನಗೆ ಅವಳು ಬೇಡ" ನಾರಾಯಣ ವ್ಯಗ್ರನಾಗಿ ನುಡಿದ.

ಸ್ನೇಹಪೂರ್ಣ ದೃಷ್ಟಿಯಿಂದ ಅವನನ್ನು ನೋಡುತ್ತ ನೀರಜೆ ಹೇಳಿದಳು,

"ಕೆಲವು ಮಾತುಗಳನ್ನು ಬಾಯಿಯಲ್ಲಿ ಹೇಳಿ ಸಂತೋಷಪಡುತ್ತೇವೆ, ನಾರಾಯಣ್. ಆದರೆ ನಮಗೂ ಗೊತ್ತು, ಕೇಳಿದವರಿಗೂ

ಗೊತ್ತು ಅವನನ್ನು ನಡೆಸುವುದು ಮಾತನಾಡುವಷ್ಟು ಸುಲಭವಲ್ಲ, ಬಹುಶಃ ಅಸಾಧ್ಯವೆಂದು"

ನಾರಾಯಣ ನೀರಜೆಗೆ ಉತ್ತರ ಕೊಡಲು ಯತ್ನಿಸುತ್ತಿರುವಾಗ ಅವರಿಗೆ ಹೊರಗಡೆ ಲೀಲೆಯ ಧ್ವನಿ ಕೇಳಿಸಿತು,

"ಇನ್ನೂ ನಿಮ್ಮ ಮಾತು ಮುಗಿಯಲಿಲ್ಲವೆ? ಮೂರುಗಂಟೆಗೆ ಬಸ್ಸು ಹೊರಡುತ್ತದೆ. ಎದ್ದು ಬೇಗ ಹೊರಡಿ ನೀರಜಾ"

"ಛೇ! ಬರುಬರುತ್ತ ಲೀಲೆ ನಿಜವಾಗಿ ಗಂಡುಬೀರಿಯಾಗುತ್ತಿದ್ದಾಳೆ. ಹೊರಗಡೆಯಿಂದ ಅವಳು ಕೂಗುವುದು ಸರಿಯಲ್ಲ ಎಂದು ಅವಳಿಗೆ ಹೇಳಿದರೂ ತಿಳಿಯುವುದಿಲ್ಲ. ಚಿಕ್ಕಮ್ಮ ಅವಳಿಗೆ ಹೇಳಿ ಹೇಳಿ ಸಾಕಾಗಿ ಬಿಟ್ಟುಬಿಟ್ಟಿದ್ದಾರೆ." ಎಂದು ನಗುತ್ತ ನೀರಜೆ ಹೇಳಿದಳು, "ಹುಂ, ಏಳಿ ಇನ್ನು, ಇಲ್ಲದಿದ್ದರೆ ಇನ್ನೊಂದು ಕೂಗನ್ನು ಹಾಕುತ್ತಾಳೆ ಅವಳು"

"ಆಗಲಿ" ಎಂದು ಎದ್ದ ನಾರಾಯಣ.

ಬಸ್ಸಿನಲ್ಲಿ ಜಾಗ ಬೇಕಾದಷ್ಟಿತ್ತು. ಲೀಲಾ ಒಂದು ನಿದ್ರೆಯನ್ನು ಮುಗಿಸಿ ಈಗ ಉತ್ಸಾಹದಿಂದ ತುಂಬಿತುಳುಕುತ್ತಲಿದ್ದಳು. ನೀರಜೆಯೂ ಮಧ್ಯಾಹ್ನಕ್ಕಿಂತ ಹೆಚ್ಚು ಗೆಲುವಾಗಿದ್ದಳು. ವಾತಾವರಣವೂ ಕ್ಷಣಕ್ಷಣಕ್ಕೆ ಉತ್ತಮವಾಗುತ್ತಿತ್ತು.

"ನೀರಜೆಯ ಪ್ರಸಾದದಿಂದ ನಮಗೆ ಈ ಪ್ರವಾಸ ಲಭಿಸಿತು. ನೀರಜಾ, ನಿನಗೆ ವಂದನೆಗಳನ್ನು ನಾವು ಎಲ್ಲರೂ ಹೇಳಿದ್ದೇವಷ್ಟೆ?" ಜನಾರ್ಧನ ಕೇಳಿದ.

"ಇಲ್ಲ. ಆದರೆ ಚಿಂತೆಯಿಲ್ಲ. ಮುಂದಿನ ವರ್ಷ ನಿನ್ನ ದಯೆಯಿಂದ ಇಲ್ಲಿಗೆ ಬರುವಂತಾದರೆ ಅಷ್ಟು ಸಾಕು ನನಗೆ" ನೀರಜೆ ಹೇಳಿದಳು.

ಲೀಲಾ ನಕ್ಕಳು,

"ನಿನಗೆ ಈ ವಿಷಯದಲ್ಲಿ ಆಶಾಭಂಗವಾದೀತು ಜೋಕೆ ನೀರಜಾ. ಜನ್ನ ಕಡಿದರೆ ನಾಲ್ಕಾಳಾಗುವಂತೆ ಇದ್ದಾನೆ. ಇವನಿಗೆ ಹವಾ ಬದಲಾ

ವಣೆಗೆ ವೈದ್ಯರು ಸೂಚಿಸಿದರೆ, ಬೇಸಗೆಗೆ ಮದರಾಸು, ನಾಗಪುರಗಳನ್ನು ಹೇಳುತ್ತಾರೆ. ಅದು ನನಗೆ ಗೊತ್ತು. ಇನ್ನೂ ಬೇಕಾದರೆ ನನ್ನ ವಿಚಾರ ಹೇಳು, ಒಪ್ಪಿಕೊಳ್ಳುತ್ತೇನೆ."

"ನಿನಗೆ ಹವಾ ಬದಲಾವಣೆ ಬೇಕಿಲ್ಲ ಲೀಲಾ. ಈಗಾಗಲೇ ಆರೋಗ್ಯದ ಅಜೀರ್ಣ ನಿನಗೆ" ಎಂದು ಜನಾರ್ಧನ ನುಡಿದ.

"ಛೇ ನೀನು ಹೀಗೆ ಕಣ್ಣು ಹಾಕಿಯೇ ಲೀಲೆ ಈಗ ಮೊದಲಿನ ಅರ್ಧವಾಗಿದ್ದಾಳೆ. ನಾರಾಯಣ್ ನೀವು ಈಗ್ಗೆ ಮೂರು ವರ್ಷಗಳ ಹಿಂದೆ ಇವಳನ್ನು ನೋಡಬೇಕಾಗಿತ್ತು. ಮುಷ್ಟಿ ಯುದ್ಧದ ಮಲ್ಲರಂತೆ ಇನ್ನೂರು ಪೌಂಡುಗಳನ್ನು ತಕ್ಕಡಿಯಲ್ಲಿ ಸುಲಭವಾಗಿ ಏಳಿಸುತ್ತಿದ್ದಳು. ಆಮೇಲೆ ಯಾರು ಹೇಳಿದರೋ ನಿತ್ಯ ಬೆಳಿಗ್ಗೆ ನಿಂಬೆರಸ—ಜೇನು ತುಪ್ಪ ಸೇವಿಸಿ ದಿನದಿನಕ್ಕೆ ತೆಳುವಾದಳು" ನೀರಜೆ ಹೇಳಿದಳು.

"ಈ ಮಾತಿನಲ್ಲಿ ನನಗೆ ನಂಬಿಕೆ ಬರುವುದಿಲ್ಲ" ಎಂದ ನಾರಾಯಣ.

ಲೀಲಾ ನಕ್ಕು ಹೇಳಿದಳು,

"ನೀರಜೆ ಹೇಳಿದ್ದು ಸ್ವಲ್ಪ ನಿಜ. ನನ್ನ ತೂಕವಿಳಿದಿದ್ದು ನಿಜ. ಆದರೆ ಅದಕ್ಕೆ ನಾನು ಔಷಧಿ ಮಾಡಲಿಲ್ಲ. ಈಗ ಕೆಲವು ದಿನಗಳಿಂದ ನಿಂಬೆ ರಸವನ್ನು ಜೇನುತುಪ್ಪದಲ್ಲಿ ತೆಗೆದುಕೊಳ್ಳುತ್ತಿದ್ದೇನೆ. ಇನ್ನು ತೆಳ್ಳಗಾಗಬೇಕೆಂದಲ್ಲ, ಆರೋಗ್ಯದ ಅಭಿವೃದ್ಧಿಗಾಗಿ. ನೀರಜೆಗೆ ನಿಂಬೆ ಹಣ್ಣು ಬೇಸರ. ಅದಕ್ಕೇ ಅವಳಿಗೆ ನನ್ನ ಪಥ್ಯ ಕಂಡರೆ ಹಾಸ್ಯ"

"ತಾನು ತೆಗೆದುಕೊಳ್ಳುವುದಲ್ಲದೆ ನನಗೂ ಕುಡಿಸುತ್ತಾಳೆ. ನಾನು, ಕುಡಿಯದೇ ಹೋದರೆ ಎಲ್ಲಿ ಇವಳು ಆಟಕ್ಕೆ ಬರುವುದಿಲ್ಲವೋ ಎಂದು, ಕೊಟ್ಟ ತಕ್ಷಣ ಕುಡಿದುಬಿಡುತ್ತೇನೆ" ಎಂದ ಜನಾರ್ಧನ.

"ಜನ್ನ ಹುಡುಗೆಯಾಗಿ, ಲೀಲಾ ಹುಡುಗನಾಗಿದ್ದಿದ್ದರೆ ಚೆನ್ನಾಗಿ ರುತ್ತಿತ್ತು" ಎಂದಳು ನೀರಜೆ, "ನಾನೂ ಎಷ್ಟು ವರ್ಷಗಳಿಂದ ನೋಡು ತ್ತಿದ್ದೇನೆ, ಎಂತಹ ಸಂದರ್ಭದಲ್ಲೂ ಅವನು ಲೀಲೆ ಹಾಕಿದ ಗೆರೆಯನ್ನು ದಾಟುವುದಿಲ್ಲ"

"ಅದು ನನ್ನ ಹಣೆ ಬರಹ. ಸದ್ಯ ಇವಳು ಹೆಂಗಸಾಗಿ ಹುಟ್ಟಿರು

ವುದರಿಂದ ನನ್ನನ್ನು ಅರೆದು ತಿನ್ನುವಾಗಲೂ ಹಿತವಾಗಿ ಮಾತನಾಡಿ ಮೈಮರೆಯಿಸಿ ನನಗೆ ನೋವಾಗದಂತೆ ಮಾಡುವುದರಿಂದ ಇದು ನನಗೆ ಒಂದು ರೀತಿಯಲ್ಲಿ ಇಷ್ಟಕರವಾಗಿಯೇ ಇರುತ್ತೆ. ಇಲ್ಲದಿದ್ದರೆ ಇಷ್ಟು ಹೊತ್ತಿಗೆ ನನಗೆ ಹುಚ್ಚು ಹಿಡಿದಿರುತ್ತಿತ್ತು"

ಮಾತನಾಡುತ್ತ ಆಡುತ್ತ ನೀಲಗಿರಿಯನ್ನು ತಲುಪಿದರು.

ಅಲ್ಲಿಯ ಹೋಟಲಿಗೆ ಮೊದಲೇ ತಿಳಿಸಿದ್ದುದರಿಂದ ಅಲ್ಲಿ ಸ್ನಾನಕ್ಕೆ ಬಿಸಿನೀರು ಸಿದ್ಧವಾಗಿತ್ತು. ಸ್ನಾನಮಾಡಿ, ಊಟ ಮುಗಿಸಿದ ಕೂಡಲೆ ಅವರಿಗೆ ಮಾರ್ಗಾಯಾಸ ಸಂಪೂರ್ಣವಾಗಿ ಹೊರಟು ಹೋಯಿತು. ಆದರೂ ಲೀಲೆಯು ಅಂದಂತೆ ಶಾಸ್ತ್ರಕ್ಕೆ ಸ್ವಲ್ಪ ಎಲ್ಲರೂ ಮಲಗಿ ಏಳುವು ದೆಂದು ತೀರ್ಮಾನವಾಯಿತು. ಬಳಿಕ ತಂಪಾದ ಕೊಠಡಿಗಳಲ್ಲಿ, ಮೆತ್ತನೆಯ ಹಾಸಿಗೆಗಳ ಮೇಲೆ ಮಲಗಿದ ಬಳಿಕ ಯಾರಿಗೂ ಏಳುವ ಮನಸ್ಸಾಗಲಿಲ್ಲ. ಅಂತೂ ಇಂತೂ ಅವತ್ತು ಅವರು ಹೊರಗಡೆ ಹೋಗಲಿಲ್ಲ.

ಮರುದಿನ ಬೆಳಿಗ್ಗೆ ನಾಲ್ವರೂ ಕಾಫಿಯಾದ ಮೇಲೆ ಊಟಕ್ಕೆ ಮುಂಚೆ ಹೋಟಲಿನ ಸುತ್ತುಮುತ್ತಲೂ ಒಂದು ಬಾರಿ ತಿರುಗಿ ಬಂದರು.

"ನಾಳೆಯಿಂದ ಸ್ವಲ್ಪ ಹೊತ್ತೇರಿದ ಮೇಲೆ ಈಚೆಗೆ ಬರಬೇಕು. ಈ ಛಳಿಯಲ್ಲಿ ಪ್ರಕೃತಿ ಸೌಂದರ್ಯವನ್ನು ಅನುಭವಿಸುವುದು ಅಸಾಧ್ಯ" ಎಂದಳು ಲೀಲಾ.

"ಅಬ್ಬ! ಈ ಲೀಲೆಗೆ ಬಿಸಲಿನಲ್ಲಿ ನಿಂತು ಟೆನ್ನಿಸ್ಸನ್ನು ಆಡಿ, ರಾತ್ರಿಯಾದೊಡನೆ, ಅದೆಷ್ಟೇ ಇತರರಿಗೆ ಹಿತವಾಗಿರಲಿ, ಇವಳಿಗೆ ನಡುಕ ಹತ್ತುತ್ತದೆ" ನೀರಜೆ ಹೇಳಿದಳು.

ನಾರಾಯಣ ನಗುತ್ತ ಹೇಳಿದ,

"ನೀರಜಾ, ನೀವು ಶಿತೋಷ್ಣಗಳಿಗೆ ಹೆದರದೇ ಇರುವುದರಿಂದ ನಿಮ್ಮ ಚರ್ಮಕ್ಕೂ ಈ ಸಹಿಷ್ಣುತೆ ಸ್ವಾಭಾವಿಕವಾಗಿ ಬಂದಿದೆ. ನಮ್ಮಂತಹ ಸಾಧಾರಣರು ಲೀಲೆಯ ಮಾತನ್ನು ಅನುಮೋದಿಸುತ್ತೇವೆ" ಎಂದ ನಾರಾಯಣ.

ನೀರಜೆ ನಸುನಗುತ್ತ ಪ್ರಶ್ನೆಮಾಡಿದಳು,

"ಹಾಗಾದರೆ, ನಾಳೆಯಿಂದ ನಿತ್ಯ ಬೆಳಿಗ್ಗೆ ನಾನು ಬಂದು ನಿಮ್ಮನ್ನೆಬ್ಬಿಸಿದರೆ ನನ್ನೊಡನೆ ಜಗಳವಾಡುವಿರಾ?"

"ನೀವು ಬರಲೇ ಬೇಕೆಂದು ಕರೆದರೆ" ಬರುವುದಿಲ್ಲವೆನ್ನುವುದಿಲ್ಲ. ಬೆಚ್ಚಗೆ ಬಟ್ಟೆಗಳನ್ನು ಧರಿಸಿಕೊಂಡು ಬಂದು ಬಿಡುತ್ತೇನೆ. ಆದರೆ ಕೇವಲ ಈ ನನ್ನ ಕಿವಿಗಳು ಹಾಗೂ ಮೂಗು ಸ್ವಲ್ಪ ಕಷ್ಟ ಅನುಭವಿಸುತ್ತವೆಯಷ್ಟೆ."

"ಆ ಕಷ್ಟ ಲೀಲೆಗೂ ಉಂಟು. ಅವಳ ಮೂಗನ್ನು ನೋಡಿ" ಎಂದು ಜೋರಾಗಿ ನಗಲಾರಂಭಿಸಿದ ಜನಾರ್ಧನ.

ಲೀಲೆ ಹಾರಿ ಅವನ ಕಿವಿಯನ್ನು ಹಿಡಿದು ಮೆಲ್ಲಗೆ ಕಿರಿಚಿ ಹೇಳಿದಳು,

"ಸಭ್ಯ ಸಮಾಜದಲ್ಲಿ ಹೇಗೆ ಮಾತನಾಡಬೇಕೆಂದು ನಿನಗೆ ಗೊತ್ತಿಲ್ಲ ಜನ್ನ. ಒಳ್ಳೆ ಕಪಿಯಂತೆ ಆಡುವಿ"

"ನಮ್ಮ ದೋಷಗಳಿಗೆಲ್ಲ ನಾವು ಹೊಣೆಯಲ್ಲವೆಂಬುದು ನಿನಗೆ ತಿಳಿಯದೇ ಲೀಲಾ. ನಾನು ನಮ್ಮ ತಾಯಿ ತಂದೆಗಳನ್ನು ಅನುಸರಿಸುವಂತೆ ಹಿಂದೆ ಪ್ರಕೃತಿ ನಿಂತು ಬಲಾತ್ಕಾರ ಮಾಡುತ್ತದೆ. ಇಲ್ಲದಿದ್ದರೆ..........."

"ಜನ್ನ, ಬಾಯಿಗೆ ಬಂದಂತೆ ಹರಟುವುದರ ಬದಲು ನಾವು ಏತಕ್ಕೆ ಇಲ್ಲಿಂದ ಆ ಮರದವರೆಗೆ ಓಡಬಾರದು. ನಾವಿಬ್ಬರೂ ಪಂದ್ಯ ಕಟ್ಟಿ ಓಡಿ ಬಹಳ ದಿನಗಳಾದುವು"

"ಲೀಲಾ, ಕೆಲವು ಸಮಯ ನಿನ್ನ ಪ್ರಚಂಡ ಬುದ್ಧಿಗೆ ತೋಚದುದೇ ಇಲ್ಲ ನಡಿ ನಾರಾಯಣ್, ನೀರಜಾ ನೀವು ನಮ್ಮನ್ನು ಸ್ವಾರ್ಥಿಗಳೆಂದು ಎಣಿಸುವುದಿಲ್ಲ ತಾನೇ?"

"ಇಲ್ಲ, ನೀವು ಓಡುವುದಾದರೆ ನಾವು ಹೀಗೇ ಸ್ವಲ್ಪ ದೂರ ಹೋಗಿ ಬರುತ್ತೇವೆ" ಎಂದಳು ನೀರಜೆ.

ಬೆಳಗಿನ ಛಳಿ ಸ್ವಲ್ಪ ಕಡಿಮೆಯಾಗಿ ಈಗ ಹಿತವಾಗಿತ್ತು. ಸುತ್ತಲೂ ತೃಪ್ತಿಯಿಂದ ನೋಡುತ್ತ ಮೌನದಿಂದ ನೀರಜೆ ನಡೆಯುತ್ತಿದ್ದಳು. ನಾರಾಯಣ್ ಲೀಲಾ ಜನಾರ್ಧನರು ಓಡುವುದನ್ನು ನೋಡುತ್ತ ಮೆಲ್ಲಗೆ ಹೆಜ್ಜೆ ಹಾಕುತ್ತಿದ್ದ.

ತುಸು ಹೊತ್ತಿನಲ್ಲೇ ನೀರಜೆ ನೀರವತೆಯನ್ನು ಮುರಿದಳು,

"ಇವರಿಬ್ಬರೂ ವಯಸ್ಸಿನಿಂದ ದೊಡ್ಡವರಾಗುತ್ತಲಿದ್ದರೂ ಎಳೆಯ ಮಕ್ಕಳಂತೆ ಆಡುತ್ತಾರೆ. ಪ್ರಪಂಚದಲ್ಲಿ ಏನಾದರೂ ದುಃಖ, ನಿರಾಶೆ ಗಳಿವೆಯೆಂದು ಅವರಿಗೆ ಗೊತ್ತಿದೆಯೋ ನೋಡಿ. ಇಬ್ಬರಿಗೂ ಸರ್ವದಾ ವಸಂತಕಾಲವೇ ಇರುವಂತೆ ಆದರೆ ಸಾಕು. ಅವರ ಜೀವನದಲ್ಲಿ ವ್ಯಸನದ ಛಾಯೆ ಸಹ ಬೀಳದಿರಬೇಕು."

ನಾರಾಯಣನಿಗೆ ಅವಳ ಮಾತುಗಳನ್ನು ಕೇಳಿ ನಗು ಬಂದಿತು,

"ಏನು ಮುದುಕರಂತೆ ಮಾತನಾಡುತ್ತೀರಿ? ಅವರು ಸ್ವಭಾವತಃ ಸುಖಿಗಳು. ಇಷ್ಟರಮೇಲೆ ಮುಂದೆ ಅವರಿಗೆ ಎಡರುತೊಡರುಗಳು ಬಂದರೂ ಅವನ್ನು ದಾಟುವುದರಲ್ಲಿಯೂ ಸಹ ಅವರು ಸಂತೋಷವನ್ನೇ ಅನುಭವ ಮಾಡಬಹುದು."

"ಅದಲ್ಲ ನಾನು ಹೇಳಿದ್ದು. ಇಷ್ಟು ಉಲ್ಲಾಸದಿಂದ ಇರುವವರು ಸ್ವಲ್ಪ ಪೆಚ್ಚು ಮುಖವನ್ನು ತಾಳಿದರೂ ನೋಡಿದವರಿಗೆ ಸಹನೆಯಾಗು ವುದಿಲ್ಲ"

"ಇವರಿಬ್ಬರಲ್ಲಿ ನಿಮಗೆ ಬಹಳ ಪ್ರೀತಿಯಿದೆಯಲ್ಲವೇ?"

"ನನ್ನ ಸ್ವಭಾವವೇ ಹಾಗೆ ನಾರಾಯಣ್. ಯಾರೊಡನೆ ಇದ್ದರೂ—ಅವರು ಒಳ್ಳೆಯವರೋ ಇಲ್ಲವೋ ಅದನ್ನು ತಿಳಿಯುವ ಗೋಜಿಗೇ ಹೋಗದೆ ಒಂದು ವಿಧವಾದ ಮಮತೆಯನ್ನು ಬೆಳೆಸಿಕೊಂಡು ಬಿಡುತ್ತೇನೆ: ಅದರಿಂದಲೇ ಒಂದೊಂದು ಬಾರಿ ನಾನು ಎಲ್ಲರಿಗಿಂತ ಸುಖಿಯೂ ಆಗಿರುತ್ತೇನೆ. ಮತ್ತೆ ಕೆಲವು ಸಲ ದುಃಖಿಯೂ ಆಗಿರು ತ್ತೇನೆ"

"ನೀರಜಾ, ಈಗ ನಿಮ್ಮ ಆರೋಗ್ಯ ಹೇಗೆ ಕೆಟ್ಟಿದೆ? ಜ್ವರ ಗಿ‍ ಬರುತ್ತದೆಯೇನು?"

"ಏನಿಲ್ಲ ನಾರಾಯಣ್, ಬೇಸಗೆ ಬಂದರೆ ಸ್ವಲ್ಪ ಆಯಾಸಗೊಂಡ ವಳಂತೆ ಕಾಣುತ್ತೇನೆ. ನಮ್ಮ ಚಿಕ್ಕಮ್ಮನಿಗೆ ಇದು ಹೇಳಿದರೂ ಅರ್ಥ ವಾಗುವುದಿಲ್ಲ. ವೈದ್ಯರಿಗೆ ಹೇಳಿ ಏನೇನೋ ಔಷಧಿ ತಂದರು. ಅವನ್ನು ಕುಡಿದುದರಿಂದಲೇ ಎನ್ನಿಸುತ್ತದೆ ನನಗೆ, ಏನೋ ಅಸ್ವಸ್ಥತೆ ಪ್ರಾರಂಭ ವಾಯಿತು. ರಾತ್ರಿ ನಿದ್ರೆ ಬಾರದು, ಬೆಳಗ್ಗೆ ಮೈಯಲ್ಲಿ ಲವಲವಿಕೆಯೇ ಇಲ್ಲ." ಎಂದು ನಕ್ಕಳು. ನೀರಜೆ "ನೀವು ಹೆದರಬೇಕಾಗಿಲ್ಲ ನಾರಾಯಣ್, ನಿಮಗೆ ಅಂಟಬಹುದಾದ ರೋಗವೇನೂ ನನಗೆ ಇಲ್ಲ"

"ಛೇ, ನೀರಜಾ, ನಾನು ಹಾಗೆ ಮನಸ್ಸಿನಲ್ಲಿಯೂ ಅಂದುಕೊಂಡಿಲ್ಲ ವೆಂದು ನಿಮಗೆ ತಿಳಿಯದೇ?" ನಾರಾಯಣನಿಗೆ ಸ್ವಲ್ಪ ಮನಸ್ಸಿಗೆ ನೋವಾಗಿಬಿಟ್ಟಿತ್ತು.

ನೀರಜೆಗೆ ಅವನ ಮುಖವನ್ನು ನೋಡಿ ತುಂಬಾ ನಗುಬಂದಿತು,

"ಅಬ್ಬ! ಏನಾಗಿ ಹೋಯಿತು ಈಗ! ಹಾಗೇ ನೋಡಿದರೆ ನಿಮಗೇ ಏನೋ ವೈಪರಿಯಿಲ್ಲದಂತೆ ಕಾಣುತ್ತದೆ ನನಗೆ." ಎಂದು ಗಟ್ಟಿಯಾಗಿ ನಗತೊಡಗಿದಳು

ಅವರು ಹೋಟೆಲಿಗೆ ಹಿಂದಿರುಗಿ ಹೋದಾಗ ಬಹಳ ಹೊತ್ತಾಗಿ ಬಿಟ್ಟಿತ್ತು. ಲೀಲೆ, ಜನಾರ್ಧನರು ಸ್ನಾನವನ್ನು ಮುಗಿಸಿ ಮಾತ ನಾಡುತ್ತ ಕುಳಿತಿದ್ದರು.

ಇವರನ್ನು ನೋಡಿದ ಕೂಡಲೆ ಲೀಲೆ ಕೇಳಿದಳು.

"ಏನು ದಾರಿ ತಪ್ಪಿಬಿಟ್ಟಿದ್ದಿರಾ ನೀರಜಾ? ನಾವು ನಿಮ್ಮ ಹಾದಿ ಯನ್ನು ನೋಡಿ ಬೇಸತ್ತು ಈಗ ಊಟಕ್ಕೆ ಹೋಗುವ ಯೋಚನೆಯನ್ನು ಮಾಡುತ್ತಿದ್ದೆವು"

ನೀರಜೆಯ ಮುಖ ಗೆಲುವಿನಿಂದ ಪ್ರಕಾಶಯುಕ್ತವಾಗಿದ್ದಿತು. ಲೀಲೆಗೆ ಅವಳು ಉತ್ತರ ಕೊಟ್ಟಾಗ ಅವಳು ತನ್ನ ಉತ್ಸಾಹದಿಂದ ಕೊಠಡಿಯನ್ನೆಲ್ಲಾ ತುಂಬಿಸಿಬಿಡುವಂತೆ ತೋರಿತು,

"ದಾರಿ ತಪ್ಪುವೆವೇಕೆ ಲೀಲಾ? ಮಾತನಾಡುತ್ತ, ಅಲ್ಲಲ್ಲೇ ಕುಳಿತು ವಿಶ್ರಮಿಸಿಕೊಂಡು ಮನಸೋ ಇಚ್ಛೆ ತಿರುಗಾಡುತ್ತಿದ್ದೆವು. ಹೊತ್ತು ಹೋದದ್ದೇ ತಿಳಿಯಲಿಲ್ಲ."

"ಈಗ ಮಾತಿನಿಂದಲೇ ತೃಪ್ತಿಯಾಗಿದೆಯೋ, ಅಥವಾ ಊಟ ಬೇಕೋ? ನಾವಂತೂ ಹಸಿದು ಹುಲಿಗಳಾಗಿದ್ದೇವೆ. ನೀವು ಬರುವುದಿಲ್ಲ ವಾದರೆ ನಿಮ್ಮ ಹೆಸರನ್ನು ಹೇಳಿಕೊಂಡು ನಿಮ್ಮ ಊಟವನ್ನೂ ನಾವೇ ಮಾಡುತ್ತೇವೆ" ಜನಾರ್ಧನ ಇಬ್ಬರನ್ನೂ ಉದ್ದೇಶಿಸಿ ನುಡಿದ.

"ಉಂಟೇ ಎಲ್ಲಾದರೂ? ಊಟಕ್ಕೆ ಜಾಗವಿಲ್ಲದಷ್ಟು ಸಂತೋಷ ವನ್ನು ತುಂಬಿಕೊಂಡಿಲ್ಲ ನಾವು. ಒಂದೇ ಕ್ಷಣ ತಡೆಯಿರಿ ಸ್ನಾನವನ್ನು ಮುಗಿಸಿಕೊಂಡು ನಿಮ್ಮೊಡನೆ ನಾವೂ ಬರುತ್ತೇವೆ" ಎಂದು ನೀರಜೆ ನಗುತ್ತ ಅಲ್ಲಿಂದ ಹೊರಟಳು. ಹಿಂದೆಯೇ ನಾರಾಯಣನೂ ತನ್ನ ಕೊಠಡಿಗೆ ಹೋದ.

ಮೊದಲೇ ಉತ್ಸಾಹಯುಕ್ತರಾದ ಯೌವನಸ್ಥರು. ಜೊತೆಗೆ ಕೈತುಂಬ ಹಣ. ನೀಲಗಿರಿಯ ಸಮನಾದ ಹವಾಗುಣ ಬೇರೆ. ಇನ್ನು ಹೇಳುವುದೇನು? ದಿನಗಳು ಕ್ಷಣಗಳಂತೆ ಕಳೆದು ಹೋದುವು.

ಲೀಲಾ ಜನಾರ್ದನರಿಗೆ ನೀರಜೆಯ ನಿಧಾನ ಸ್ವಭಾವ ಮೆಚ್ಚುಗೆಗೆ ಪಾತ್ರವಾಗಿದ್ದರೂ ಅವಳಂತೆ ತಾವು ಇರುವುದು ಬೇಕಾಗಿರಲಿಲ್ಲ. ಬಹುಶಃ ಅವರಿಬ್ಬರೇ ಒಟ್ಟೊಟ್ಟಿಗೆ ತಿರುಗಾಡಲು ಹೊರಡುತ್ತಿದ್ದರು. ಚೆನ್ನಾಗಿ ಓಡಾಡಿ, ಅಚ್ಚುಕಟ್ಟಾಗಿ ತಿಂಡಿ ತಿಂದು ಮಧ್ಯಾಹ್ನ ನಿದ್ರೆಮಾಡಿ ಬಿಡುತ್ತಿದ್ದರು. ಸಂಜೆಯ ಹೊತ್ತು ಎಲ್ಲರೂ ಸ್ವಲ್ಪ ಹೊತ್ತು ಒಟ್ಟಿಗೆ ಕಳೆದರೂ ಬಳಿಕ ಜನಾರ್ಧನನಿಗೆ ಕಥೆ ಪುಸ್ತಕಗಳಲ್ಲಿ ದೃಷ್ಟಿ, ಲೀಲೆಗೆ ಹೊಸ ಹೊಸ ಪರಿಚಯಗಳಲ್ಲಿ ಆಸಕ್ತಿ. ಅವಳಿಗೆ ಎರಡೇ ದಿನಗಳಲ್ಲಿ ಹೋಟೆಲಿನ ಸಣ್ಣ ಪರಿಚಾರಕರ ಮೊದಲುಗೊಂಡು ಮಾಲೀಕರ ಮಕ್ಕಳ ವರೆಗೆ ಎಲ್ಲರ ಪರಿಚಯವೂ ಆಗಿತ್ತು. ಇವರಂತೆ ಅಲ್ಲಿಗೆ ರಜಾ ಕಳೆಯಲು ಬಂದಿದ್ದ ಒಂದು ಸಣ್ಣ ಸಂಸಾರವಂತೂ ಅವಳ ಆತ್ಮೀಯ ವಾಗಿಬಿಟ್ಟಿತ್ತು. ನಿತ್ಯ ಸಂಜೆ ಅವರ ಕೊಠಡಿಗೆ ಹೋಗಿ ಅವರ ಇಬ್ಬರು

ಚಿಕ್ಕಮಕ್ಕಳನ್ನು ಕರೆದುಕೊಂಡು ಬರುತ್ತಿದ್ದಳು. ರಾತ್ರಿಯವರೆಗೂ ಅವರನ್ನು ಕುಣಿಸಿ, ಆಟವಾಡಿಸುತ್ತ ಕಾಲಕಳೆಯುತ್ತಿದ್ದಳು.

ಅಂತೂ ಒಟ್ಟಿನಲ್ಲಿ ನೀರಜೆಯ ಸಹವಾಸ ನಾರಾಯಣನಿಗೆ ಬೇಕಾದಷ್ಟು ಸಿಕ್ಕಿತು. ಅವಳ ಮಾತಿನ ಸರಣಿಯಲ್ಲಿ ಬರದೆ ಇದ್ದ ವಿಷಯಗಳಿರಲಿಲ್ಲ. ಅವಳು ಪ್ರಕೃತಿಯ ಆರಾಧಕಳೂ ಹೌದು, ಮನಃಶಾಸ್ತ್ರವನ್ನು ಅರಿತವಳೂ ಹೌದು, ಎಂದು ಅವನು ಅರಿತ. ಅವಳ ಹೃದಯದಲ್ಲಿ ಅವನಿಗಾಗಿ ಎಂತಹ ಉಜ್ವಲ ಪ್ರೇಮವಿದೆ. ಅವನನ್ನು ಅವಳು ಎಷ್ಟು ಮಟ್ಟಿಗೆ ಪ್ರಚೋದಿಸಿ ಅವನ ಮನೋವಿಕಾಸಗೊಳಿಸ ಬಲ್ಲಳು ಎಂಬುದು ಅವನ ಅನುಭವಕ್ಕೆ ಬಂದಿತು. ಅವಳ ಸಹವಾಸದಲ್ಲಿ ಎರಡು ವಾರಗಳು ಕಳೆದುದು ಅವನಿಗೆ ಅರಿವಾಗಲಿಲ್ಲ. ಇನ್ನೂ ಮಾಲತಿಗೆ ಒಂದು ಪತ್ರವನ್ನೂ ಬರೆದಿಲ್ಲವೆಂದು ಸಹ ಅವನಿಗೆ ನೆನಪಿಗೆ ಬರಲಿಲ್ಲ.

ಒಂದು ದಿವಸ ಬೆಳಿಗ್ಗೆ ಊಟಕ್ಕೆ ಬಂದಾಗ ಲೀಲೆ ನಾರಾಯಣ ನನ್ನು ಕೇಳಿದಳು, "ನಾರಾಯಣ್ ನೀವು ನಮ್ಮೊಡನೆ ಇಲ್ಲಿಗೆ ಬಂದಿ ದ್ದೀರೆಂದು ಮಾಲತಿಗೆ ಗೊತ್ತಿಲ್ಲವೇ?"

ಹಠಾತ್ತನೆ ಮಾಲತಿಯ ಹೆಸರು ಬಂದಿದ್ದರಿಂದ ನಾರಾಯಣನಿಗೆ ಹೊಡೆದೆಬ್ಬಿಸಿದಂತಾಯಿತು.

"ಇಲ್ಲ, ಏಕೆ?" ಎಂದು ತಡವರಿಸಿದ.

ಲೀಲೆಗೆ ಆಶ್ಚರ್ಯವಾಯಿತು.

"ನೀವು ಈ ವಿಳಾಸವನ್ನು ಅವರಿಗೆ ಕೊಟ್ಟಿಲ್ಲವೇ? ಹದಿನೈದು ದಿನಗಳಿಂದ ಒಂದು ಕಾಗದವನ್ನೂ ಬರೆದಿಲ್ಲವೇ?"

ಅವಳ ಪ್ರಶ್ನೆ ಹಾಗೂ ಜನಾರ್ಧನನ ತಾತ್ಸಾರ ತುಂಬಿದ ದೃಷ್ಟಿ ಯಿಂದ ನಾರಾಯಣನ ತಲೆ ತಗ್ಗಿತು, ಮುಖ ಕಪ್ಪಿಟ್ಟಿತು. ನೀರಜೆಗೆ ಇದು ಕಣ್ಣಿಗೆ ಬಿದ್ದು ಅವಳಿಗೆ ಸ್ವಲ್ಪ ಕೋಪ ಬಂದಿತು, "ಲೀಲಾ, ಅವರನ್ನು ಈ ರೀತಿ ಪ್ರಶ್ನೆ ಮಾಡಲು ನಮಗ್ಯಾರಿಗೂ ಹಕ್ಕಿಲ್ಲ

ತಿಳಿಯಿತೇ? ಎಷ್ಟು ಒರಟಾಗಿ ಅಸಭ್ಯ ಹೆಂಗಸಿನಂತೆ ವರ್ತಿಸುತ್ತಿದ್ದೆ! ಇಷ್ಟರಲ್ಲಾ ಈಗ ಇದ್ದಕ್ಕಿದ್ದಂತೆ ಮಾಲತಿಯ ಮಾತೇತಕ್ಕೆ?"

ಲೀಲಾ ನೀರಜೆಯ ಮುಖವನ್ನು ವಿಸ್ಮಯದಿಂದ ನೋಡಿದಳು,

"ನೀರಜಾ, ಮಾವನಿಂದ ನನಗೆ ಕಾಗದ ಬಂದಿತು. ಮಾಲತಿ ನಮ್ಮ ಮನೆಗೆ ಹೋಗಿದ್ದರಂತೆ. ನಾರಾಯಣ್ ನಾಲ್ಕಾರು ದಿನಗಳಲ್ಲಿ ನೀಲಗಿರಿಯಿಂದ ಹಿಂತಿರುಗುವುದಾಗಿ ಹೇಳಿದ್ದರಂತೆ. ಇನ್ನೂ ಹಿಂದಿರುಗಲಿಲ್ಲವೇಕೆ ಎಂದು ಅವರಿಗೆ ಯೋಜನೆಯಾಗಿದೆ. ನಾವೂ ನೀಲಗಿರಿಯಲ್ಲಿ ಇರುವುದರಿಂದ ನಾವೇನಾದರೂ ನಾರಾಯಣ್‌ರವರನ್ನು ಭೇಟಿ ಮಾಡಿರಬಹುದು ಎಂದು ತಿಳಿದಿದ್ದಾಳೆ. ಈಗ ಅಗತ್ಯವಾಗಿ ನಾರಾಯಣ್ ಮನೆಗೆ ಹೋಗಬೇಕಾಗಿದೆಯಂತೆ. ಮಾವನನ್ನು ಕೇಳಿದರಂತೆ, "ಲೀಲೆಗೆ ಬರೆಯಿರಿ, ಅವರನ್ನು ನೋಡಿ ತಕ್ಷಣ ಬೆಂಗಳೂರಿಗೆ ಹೊರಟು ಬರಲು ಅವರಿಗೆ ಹೇಳುವಂತೆ" ಎಂದು........"

ಬೇಸರದಿಂದ ಅವಡು ಕಚ್ಚಿ ನೀರಜೆ ಕೇಳಿದಳು,

"ಎಲ್ಲಿ, ಚಿಕ್ಕಪ್ಪನ ಪತ್ರ ಕೊಡು ಲೀಲಾ"

ಲೀಲಾ ತಕ್ಷಣ ಎದ್ದು ಹೋಗಿ ಪತ್ರ ತಂದು ಕೊಟ್ಟಳು. ಜನಾರ್ಧನ ಹೇಳಿದ, "ಲೀಲಾ ಇನ್ನು ಇವರು ಊಟಕ್ಕೇಳಲು ಬಹಳ ತಡವಾಗುತ್ತೆ. ನನಗೋ— ಮೇರೆ ಮೀರಿದ ಹಸಿವು"

ನಗಲು ಯತ್ನಿಸಿ ಲೀಲಾ ನುಡಿದಳು,

"ಏಳು ನಾವಿಬ್ಬರೂ ಊಟ ಮಾಡೋಣ. ಹೇಗೂ ಇವರು ಒಬ್ಬರಿಗೊಬ್ಬರು ಜೊತೆಗೆ ಇದ್ದಾರೆ"

ಅವರಿಬ್ಬರೂ ಅಲ್ಲಿಂದ ಹೊರಟು ಹೋಗುವವರೆಗೂ ಸುಮ್ಮನಿದ್ದು-ನೀರಜೆ ಹೇಳಿದಳು,

"ಈಗೇನು ಮಾಡುವಿರಿ?"

ನಾರಾಯಣ ನುಡಿದ,

"ಮರು ಗಾಡಿಗೆ ಹೊರಡುತ್ತೇನೆ ಊರಿಗೆ."

"ಅದು ನನಗೆ ತಿಳಿದಿತ್ತು. ನಾನು ಹಿಂದಿನ ಜನ್ಮದಲ್ಲಿ ಏನು ಪಾಪ ಮಾಡಿದ್ದೆನೋ ಅದು ಈಗ ನನ್ನ ಮೇಲೆ ಫಲವನ್ನು ಸಾಧಿಸುತ್ತಲಿದೆ. ಹದಿನೈದು ದಿನಗಳೂ ನನ್ನ ಸೌಖ್ಯಕ್ಕೆ ಎಣೆಯಿರಲಿಲ್ಲ." ಎನ್ನುತ್ತಿದ್ದಂತೆಯೇ ನೀರಜೆಯ ಕಣ್ಣುಗಳು ತುಂಬಿದುವು, "ಹೀಗೇಕೆ ಆಗಬೇಕು ನನಗೆ, ಹೇಳಿ"

ನಾರಾಯಣ ಅವಳನ್ನು ಸಮಾಧಾನ ಮಾಡುವಷ್ಟು ಶಾಂತನಾಗಿರಲಿಲ್ಲ,

"ಹದಿನೈದು ದಿನಗಳಿಂದ ನಾನು ಮಾಲತಿಗೆ ಹೇಗೆ ಪತ್ರ ಬರೆಯಲಿಲ್ಲವೆಂದು ನನಗೇ ಆಶ್ಚರ್ಯವಾಗುತ್ತದೆ."

"ದಿನಗಳು ಕಳೆದಷ್ಟೇ ತಿಳಿಯಲಿಲ್ಲ, ಇದುವರೆಗೂ" ಎಂದಳು ನೀರಜ ಕಣ್ಣೊರೆಸಿಕೊಳ್ಳುತ್ತ,

ನಾರಾಯಣ ಸುಮ್ಮನೆ ಕುಳಿತಿದ್ದ. ಬಹಳ ಹೊತ್ತಿನವರೆಗೂ ನೀರಜೆ ನೋಡಿದಳು ಇದನ್ನು. ಅವಳಿಗೆ ಅರ್ಥವಾಗಲಿಲ್ಲ. ಚೆನ್ನಾಗಿ ಕಣ್ಣುಗಳನ್ನು ಒರೆಸಿಕೊಂಡು ಅವನ ಸಮೀಪಕ್ಕೆ ಹೋಗಿ ಕುಳಿತಳು,

"ಮತ್ತೆ ಖಂಡಿತ ಬರುವಿರಿ ತಾನೇ ?"

ನಾರಾಯಣ ತಿರುಗಿ ಅವಳನ್ನು ನೋಡಿದ. ನೀರಜೆಗೆ ನಗು ಬಂದಿತು,

"ಮಾತನಾಡುವುದಿಲ್ಲವೆ ?"

"ಮಾತನಾಡುವುದಿಲ್ಲವೆಂದರೆ ಅದು ಸಾಧ್ಯವಾಗುವುದಿಲ್ಲ ನಿಮ್ಮ ಬಳಿ, ನೀರಜಾ ಕಲ್ಲನ್ನಾದರೂ ಕುಟ್ಟಿ ಮಾತನಾಡಿಸುವ ಶಕ್ತಿ ಇದೆ ನಿಮಗೆ"

"ಹಾಗಾದರೆ ಹೇಳಿ ಈಗ. ಮತ್ತೆ ಇಲ್ಲಿಗೆ ಬರುತ್ತೀರಿ ತಾನೇ ?"

"ಆದರೆ ಖಂಡಿತ ಬರುತ್ತೇನೆ"

ಲೀಲೆ ಊಟ ಮುಗಿಸಿಕೊಂಡು ಬಂದಾಗ ಅವರಿಬ್ಬರೂ ಇನ್ನೂ ಅಲ್ಲೇ ಕುಳಿತಿದ್ದುದನ್ನು ಕಂಡು ಅವಳಿಗೆ ಆಶ್ಚರ್ಯವಾಯಿತು,

"ಇದೇನಿದು, ಊಟಕ್ಕೆ ಹೋಗುವುದಿಲ್ಲವೆ ?"

ನೀರಜೆ ಎದ್ದಳು,

"ಈಗ ಹೋಗುತ್ತೇವೆ. ಒಂದು ನಿಮಿಷ ನಾರಾಯಣ್, ನಾನು ಸೀರೆ ಬದಲಾಯಿಸಿಕೊಂಡು ಬರುತ್ತೇನೆ."

ಅವಳು ಹೋದಮೇಲೆ ಲೀಲೆ ನಾರಾಯಣನನ್ನು ಕೇಳಿದಳು,

"ನೀವು ಊರಿಗೆ ಹೊರಡುವುದಿಲ್ಲವೆ ?"

"ಹೊರಡುತ್ತೇನೆ" ಎಂದು ನಾರಾಯಣ ಮತ್ತೆ ಯೋಚನಾಮಗ್ನನಾಗಿ ಕುಳಿತ.

ಲೀಲೆ ಹೆಚ್ಚು ಮಾತನಾಡದೆ ಅಲ್ಲಿಂದ ಹೊರಟು ಹೋದಳು.

ಊಟಮಾಡಿ ನಾರಾಯಣ ಸಾಮಾನು ಕಟ್ಟಲು ಹೊರಟ. ನೀರಜೆ ಅವನನ್ನು ತಡೆದು ಹೇಳಿದಳು, "ಎಲ್ಲ ತೆಗೆದುಕೊಂಡು ಹೋಗಬೇಡಿ"

ನಾರಾಯಣನಿಗೆ ನಗು ಬಂದಿತು, "ಒಳ್ಳೆಯದು, ಏನೇನನ್ನು ತೆಗೆದುಕೊಂಡು ಹೋಗಬಹುದೋ ಅವನ್ನು ನೀವೇ ಈಚೆಗೆ ಇಡಿ ಹಾಗಾದರೆ"

ನೀರಜೆ ಅವನ ಚೀಲಕ್ಕೆ ಕೆಲವೇ ಬಟ್ಟೆಗಳನ್ನು ಹಾಕಿಟ್ಟು ಕೇಳಿದಳು,

"ನೀವು ಇವತ್ತು ಹೋಗಲೇ ಬೇಕೆ ?"

"ಹಾಗೇ ಕಾಣುತ್ತದೆ" ಎಂದ ನಾರಾಯಣ.

"ನಾಳೆ ಹೋದರಾಗದೆ ? ರಾತ್ರಿ ಪ್ರಯಾಣ ಏತಕ್ಕೆ ?"

"ಪ್ರತಿಯೊಂದಕ್ಕೂ ಪ್ರಾಮುಖ್ಯತೆ ಕೊಟ್ಟರೆ ಹೇಗೆ, ನೀರಜಾ ?" ಎಂದ ನಾರಾಯಣ.

ನೀರಜೆ ಅವನ ಕೈಯಿಂದ ಚೀಲವನ್ನು ಕಿತ್ತುಕೊಂಡಳು,

"ಅದೇನೇ ಇರಲಿ. ಈಗ ನೀವು ಹೋಗಕೂಡದು. ನಾಳೆ ಬೆಳಿಗ್ಗೆ ಹೋಗಿ"

ನಾರಾಯಣ ಸ್ತಬ್ಧನಾದ. ನೀರಜೆ ನಗಲಾರಂಭಿಸಿದಳು,

"ಹಾಗೇತಕ್ಕೆ ನೋಡುತ್ತೀರಿ ? ನಿಮ್ಮನ್ನು ನಾನೇನು ಇಲ್ಲಿ ಕಟ್ಟಿ ಹಾಕಿಲ್ಲ. ನಾಳೆಯ ದಿನ ನಾನೇ ಬೇಕಾದರೆ ಬಸ್ಸಿನಲ್ಲಿ ಕೂಡಿಸಿ ಕಳುಹಿಸುತ್ತೇನೆ. ಇಷ್ಟು ಗಾಬರಿ ಬೀಳಬೇಕೇಕೆ ?"

ನಾರಾಯಣನಿಗೆ ಇನ್ನು ಹೇಳುವುದೇನೂ ಉಳಿಯಲಿಲ್ಲ.

ಮರುದಿವಸ ನೀರಜೆ ತನ್ನ ಮಾತನ್ನು ಉಳಿಸಿಕೊಂಡಳು. ನಾರಾಯಣನೊಂದಿಗೆ ಬಸ್ಸು ನಿಲ್ಲುವೆಡೆಗೆ ಹೋಗಿ, ಅವನು ಒಳಗೆ ಕುಳಿತಮೇಲೆ ಸಹಾಸ್ಯವಾಗಿ ಬೀಳ್ಕೊಂಡಳು,

"ನನ್ನನ್ನು ಮರೆತುಬಿಡಬೇಡಿ"

ನಾರಾಯಣ ಶೂನ್ಯಮನಸ್ಕನಾಗಿ ಕುಳಿತಿದ್ದ. ಅವನಿಗೆ ಇವತ್ತು ಮಾಲತಿಯನ್ನು ನೋಡಲು ಸ್ವಲ್ಪ ಹೆದರಿಕೆಯಾಗುತ್ತಿತ್ತು. 'ಕಳ್ಳತನ ಮಾಡಿದ ಹುಡುಗ ಪೋಲೀಸ್ ನಿಲ್ದಾಣಕ್ಕೆ ಹೋಗುವಂತೆ ಊರಿಗೆ ಹೋಗುತ್ತಿದ್ದೇನೆ' ಎಂದುಕೊಂಡು ಮನಸ್ಸಿನಲ್ಲಿ ನಸುನಕ್ಕ.

ಈ ಮಧ್ಯೆ ವಿಚಿತ್ರ ಪ್ರಸಂಗವೊಂದು ಒದಗಿತು.

ಮೈಸೂರಿನಲ್ಲಿ ಅವನು ಬೆಂಗಳೂರಿಗೆ ಹೊರಡುವ ಗಾಡಿಯಲ್ಲಿ ಎರಡನೆಯ ತರಗತಿಯಲ್ಲಿ ಒಂದು ಜಾಗ ಪಡೆದು ಗಾಡಿಯನ್ನು ಹತ್ತಿದ.

ಇನ್ನೂ ಗಾಡಿ ಹೊರಡಲು ತುಂಬಾ ಹೊತ್ತು ಇತ್ತು. ನಾರಾಯಣನಿಗೆ ಓದುವುದಕ್ಕೆ ಒಂದು ಪುಸ್ತಕ ಇರಲಿಲ್ಲ. ಸುಮ್ಮನೆ ಕಿಡಿಕೆಯಿಂದಾಚೆಗೆ ನೋಡುತ್ತ ಕುಳಿತಿದ್ದ.

ಆ ಗಾಡಿಯಲ್ಲಿ ಇನ್ನು ಒಬ್ಬರೇ ಪ್ರಯಾಣಿಕರಿದ್ದರು. ಅವರೂ ತುಂಬ ಅಶಾಂತರಂತೆ ತೋರುತ್ತಿದ್ದರು.

ಸ್ವಲ್ಪ ಹೊತ್ತಾದಮೇಲೆ ಅವರು ನಾರಾಯಣನನ್ನು ಕೇಳಿದರು,

"ತಾವು ಬೆಂಗಳೂರಿಗೆ ಹೊರಟಿದ್ದೀರೇನು ?"

"ಹೌದು" ಎಂದ ನಾರಾಯಣ.

"ಅಲ್ಲಿಯ ಸ್ಥಳಸ್ಥರೇನೋ ತಾವು ?"

"ಹುಂ"

"ಓ!" ಎಂದು ಆತ ಸುಮ್ಮನಾದರು. ಒಂದು ಕ್ಷಣವಾದ ಮೇಲೆ ನಾರಾಯಣನಿಗೆ ತಾನು ಅವರೊಂದಿಗೆ ಒರಟಾಗಿ ನಡೆದುಕೊಂಡೆನೆಂದೆನಿಸಿತು. ವಿನಯದಿಂದ ಕೇಳಿದ,

"ತಾವೂ ಬೆಂಗಳೂರಿಗೇ ಪ್ರಯಾಣ ಮಾಡುತ್ತಿದ್ದೀರೇನು ?"

"ನಾನು—" ಆತ ಸಂಕೋಚದಿಂದ ಹೇಳಿದರು, "ಬೆಂಗಳೂರಿಗೆ ಒಂದು ಕೆಲಸದ ಮೇಲೆ ಬಂದಿದ್ದೆ. ವಿಫಲವಾಯಿತು ಅದು. ಈಗ ಮೈಸೂರಿನಲ್ಲಿರುವ ನನ್ನ ಹಳೆಯ ಗೆಳೆಯರನ್ನು ಒಮ್ಮೆ ನೋಡಿಕೊಂಡು ಬೊಂಬಾಯಿಗೆ ಹಿಂತಿರುಗುತ್ತಲಿದ್ದೇನೆ."

"ಬೊಂಬಾಯಿಗೆ ?"

"ಹುಂ, ಹೌದು," ಎಂದು ಆತ ಅನುಮಾನಿಸಿ ಕೇಳಿದರು, "ತಮಗೆ ಬೆಂಗಳೂರಿನಲ್ಲಿದ್ದ ಗೋವಿಂದಪ್ಪ ಎಂಬ ಲೇವಾದೇವಿಯ ಸಾಹುಕಾರರು ಗೊತ್ತೇ ? ಇಲ್ಲಿ ಯಾವುದೋ ಬ್ಯಾಂಕಿನಲ್ಲಿ......"

ನಾರಾಯಣ ನೆಟ್ಟಗೆ ಕುಳಿತು ಕೇಳಿದ, ಅವರ ಮಾತಿನ ಮಧ್ಯೆ.

"ಏಕೆ ?"

"ಅವರ ಮಗ ಬೆಂಗಳೂರಿನಲ್ಲಿ ಇರಬಹುದು ಎಂದುಕೊಂಡು ಬಂದಿದ್ದೆ. ಆದರೆ ಅವರ ಸ್ವಂತ ಮನೆಯ ಬಳಿ ಇರುವವರೊಬ್ಬರಿಗೂ ಏನು ವಿಷಯವೂ ತಿಳಿಯದು. ಹುಡುಗ ಮದ್ರಾಸಿನಲ್ಲಿ ಓದಿದ್ದು ಇಲ್ಲಿಯ ಎಂಜನೀಯರಿಂಗ್‌ಗೆ ಅಷ್ಟು ಪ್ರಾಶಸ್ತ್ಯವಿಲ್ಲವೆಂದು. ಅವನಿಗೆ ಇಲ್ಲಿ ಇದ್ದುದೇ ನಾಲ್ಕಾರು ಮಂದಿ ಗೆಳೆಯರು. ಅವರಲ್ಲಿ ಅನಂತರಾಯರೆಂಬುವರ ವಿಳಾಸ ತಂದಿದ್ದೆ. ಆದರೆ ಈಗ ಅವರ ಮನೆಯವರೆಲ್ಲರೂ ಅವರ ಬೀಗರ ಮನೆಗೆ, ರಾಜಮಹೇಂದ್ರಿಗೆ ಹೋಗಿದ್ದಾರಂತೆ.'' ಎಂದು ಅವರು ಒಂದು ಪೆಚ್ಚುನಗೆ ನಕ್ಕರು,

"ಅಂತೂ ಬೆಂಗಳೂರಿಗೆ ನಾನು ಬಂದಿದ್ದು ವ್ಯರ್ಥವಾಯಿತು"

ನಾರಾಯಣ ಕೇಳಿದ,

"ನಿಮಗೆ ಅವರು ಏಕೆ ಬೇಕು ಎಂದು ನೀವು ಹೇಳಿದರೆ, ನಾನು ನಿಮಗೆ ಅವರ ವಿಷಯ ತಿಳಿಸಬಲ್ಲೆ''

"ಅವರು ನಿಮಗೆ ಗೊತ್ತೇ?" ಆತುರದಿಂದ ಅವರು ಕೇಳಿದರು, "ಹಾಗಾದರೆ ಮೊದಲು ಅವರ ವಿಳಾಸವನ್ನು ಕೊಡಿರಿ. ಅವರ ತಂದೆಯವರಿಗೆ ಮನೋರೋಗದಿಂದ, ಹೃದ್ರೋಗ ಪ್ರಾರಂಭವಾಗಿಬಿಟ್ಟಿದೆ ಪುತ್ರದರ್ಶನವೊಂದೇ ಅವರಿಗೆ ಪರಿಣಾಮಕಾರಿಯಾಗಬಹುದಾದ ಔಷಧವೆನ್ನುತ್ತಾರೆ ನಮ್ಮ ಮೇಲಿನ ವೈದ್ಯರು."

ನಾರಾಯಣನಿಗೆ ಒಂದು ನಿಮಿಷಕಾಲ ಮಾತನಾಡಲು ತೋಚಲಿಲ್ಲ, ಬಳಿಕ ಹೇಳಿದ.

"ನಾನೇ ಅವರ ಮಗ ನಾರಾಯಣ"

ಆತ ಆಶ್ಚರ್ಯದಿಂದ ಚಕಿತರಾದರು. ನಾರಾಯಣ ಹೇಳಿದ,

"ತಂದೆಯವರಿಗೆ ಮೊದಲಿನಿಂದ ಅನಂತನ ವಿಳಾಸ ಗೊತ್ತು. ಇದಕ್ಕೆ ಮುಂಚೆ ಅಲ್ಲಿಗೊಂದು ಕಾಗದ ಬರೆದಿದ್ದರೆ ನನಗೆ ತಲುಪುತ್ತಿತ್ತು."

"ನಿಜ. ಆದರೆ ನಿಮ್ಮ ತಂದೆಯವರದು ಬಹು ಕಷ್ಟವಾದ ಸಮಾಚಾರ. ಮೇಲೆ ನೋಡುವುದಕ್ಕೆ ಅವರಿಗೆ ಇನ್ನೂ ನಿಮ್ಮ ಮೇಲೆ ಬಹಳ ಕೋಪವಿದ್ದಂತೆ ಇದೆ. ಆದರೆ ಒಳಗಡೆ ಅವರ ಹೃದಯ ಪುತ್ರ ವಾತ್ಸಲ್ಯದಿಂದ ಹಾತೊರೆಯುತ್ತ ಇದೆ. ಕಟ್ಟುನಿಟ್ಟಿನಲ್ಲಿಯೇ ಬೆಳೆದ ಮನುಷ್ಯರು. ತಮ್ಮ ಮಾತನ್ನು ತಾವೇ ಬದಲಾಯಿಸಲು ಕೂಡ ಅತಿಶಯವಾದ ಬಿಗುಮಾನ. ಇದರಿಂದಲೇ ಅವರ ಮನಸ್ಸು ಜರ್ಜರೀಭೂತವಾಗಿ ಹೋಗಿದೆ." ಎಂದು ಅವರು ಯೋಚಿಸುತ್ತ ಹೇಳಿದರು, "ಬಹಳ ದಿನಗಳಿಂದ ನನ್ನ ಹಿರಿಯ ವೈದ್ಯರು,—ಮನಶ್ಶಾಸ್ತ್ರಜ್ಞರು ಹಾಗೂ ಅತ್ಯುತ್ತಮ ವೈದ್ಯರು.—ಸೇಲಮ್ ರಾಮಕೃಷ್ಣರೆಂದು ಅವರ ಹೆಸರು.—ಅವರು ಕೂಡ ಇದನ್ನು ತಿಳಿಯಲಿಲ್ಲ. ಮೊನ್ನೆ ಈಗ ಏಳೆಂಟು ದಿನಗಳ ಹಿಂದೆ ಸುಪ್ತಾವಸ್ಥೆಯ ಪ್ರಯೋಗವನ್ನು ನಡೆಯಿಸಿದಾಗ ಇದು ಗೊತ್ತಾಯಿತು. ಅವರ ಆಗಿನ ಮಾತು, ಧ್ವನಿ! ಅನುಭವಸ್ಥರಾದ ರಾಮಕೃಷ್ಣರಿಗೆ ಇದು ಹೊಸದಲ್ಲವಾದರೂ, ನನಗೆ ಕಣ್ಣಿನಲ್ಲಿ ನೀರು ಬಂದಿತು.

"ನಮ್ಮ ತಾಯಿ, ತಂಗಿ....?"

"ಯಾರಿಗೂ ಇದು ಗೊತ್ತಿರಲಿಲ್ಲ. ತಕ್ಷಣ ನನ್ನನ್ನು ನಿಮ್ಮನ್ನು ಕರೆತರಲು ಕಳುಹಿಸಿಬಿಟ್ಟರು, ನಮ್ಮ ಹಿರಿಯ ವೈದ್ಯರು. ಬಳಿಕ ಬಹುಶಃ ಅವರಿಗೆ ಹೇಳಿರಬಹುದು"

"ಈಗ ಏನು ಮಾಡುವುದು?"

"ಬೆಂಗಳೂರಿಗೆ ನಾವು ತಲುಪಿ ಅಲ್ಲಿ ಊಟಮಾಡಿಕೊಂಡು ಬೊಂಬಾಯಿಯ ಕಡೆಗೆ ಹೋಗುವ ಗಾಡಿಯನ್ನು ಹತ್ತಬಹುದು".

"ಆದರೆ........"

"ಆದರೆ ಎನ್ನಬೇಡಿ ಇನ್ನು. ನನ್ನ ಬಳಿ ಈಗ ಸಾಕಾದಷ್ಟು ದುಡ್ಡು ಇದೆ. ಅದಕ್ಕೆ ಯೋಚಿಸುವ ಅಗತ್ಯವಿಲ್ಲ. ಮೊದಲು ಹೊರಟು ಬಿಡೋಣ." ಎಂದು ಅವರು ನಕ್ಕರು, "ನಾನು ತಕ್ಷಣ ಬೊಂಬಾಯಿಗೆ ಹೋಗದೆ ಮೈಸೂರಿಗೆ ಹೋಗಿದ್ದು ಎಷ್ಟು ಒಳ್ಳೆಯದಾಯಿತು ನೋಡಿ. ನಾನು ಬಂದ ಕೆಲಸವಾಯಿತು."

ನಾರಾಯಣ ಯೋಚಿಸಿದ. "ಮಾಲತಿಗೆ ಒಂದು ಕಾಗದ ಬರೆದು ಬೊಂಬಾಯಿಗೆ ಹೊರಟು ಬಿಡುವುದೇ ಸರಿ. ಮಾಲತಿ ಅರ್ಥಮಾಡಿಕೊಳ್ಳುತ್ತಾಳೆ"

ಕಾಗದ ಬರೆಯಲು ಒಂದು ಅಂಚೆಯ ಕಾಗದ ಬೇಡವೇ? ನಾರಾಯಣನಿಗೆ ಬೆಂಗಳೂರಿನ ನಿಲ್ದಾಣದಲ್ಲಿ ಅದಕ್ಕೆ ಬಿಡವಾಗಲಿಲ್ಲ. ಅವನ ಜೊತೆಯಲ್ಲಿದ್ದ ವೈದ್ಯ ರಮೇಶ್ ಒಂದೇ ಸಮನೆ.ಅವನೊಂದಿಗೆ ಮಾತನಾಡುತ್ತ ಅವನಿಗೆ ಇದು ನೆನಪಿಗೆ ಬರದಂತೆ ಮಾಡಿದರು! ಗುಂಟಕಲ್ಲಿಗೆ ಹೊರಡುವ ಗಾಡಿಯಲ್ಲಿ ಜಾಗಸಿಗುವುದೇ ಕಠಿಣವಾಯಿತು, ಇವರ ಅವಸರದಲ್ಲಿ. ಗಾಡಿ ನಿಲ್ದಾಣದಿಂದ ಚಲಿಸಿದ ಮೇಲೆ ನಾರಾಯಣನಿಗೆ ಜ್ಞಾಪಕಕ್ಕೆ ಬಂದಿತು, "ಅರೇ! ಏನು ಕೆಲಸ ಮಾಡಿದೆ ನಾನು!" ಎಂದು ಗಟ್ಟಿಯಾಗಿ ಅಂದುಕೊಂಡ.

ರಮೇಶ್ ಇವನ ಮುಖವನ್ನು ನೋಡಿದರು,

"ಏನಾಯಿತು?

"ನನ್ನ ಪತ್ನಿಗೆ ಕಾಗದ ಬರೆಯಲು ಮರೆತು ಹೋಯಿತು"

"ಬೊಂಬಾಯಿಗೆ ಹೋದಮೇಲೆ ಬರೆಯುವಿರಂತೆ. ಮನೆಯವರಿಗೆ ಕಾಗದ ಬರೆಯುವಾಗ ಮನಸ್ಸು, ದೇಹ ಎರಡೂ ಸಮಾಧಾನ ಸ್ಥಿತಿಯಲ್ಲಿರಬೇಕು. ಇಲ್ಲದಿದ್ದರೆ........" ಎಂದು ನಕ್ಕರು ಆತ.

ಗುಂತಕಲ್ಲಿನಲ್ಲಿ ,ಗಾಡಿ ಬದಲಾಯಿಸುವಾಗಲೂ ನಾರಾಯಣ ಈ ವಿಷಯವನ್ನು ಮರೆತುಬಿಟ್ಟ.

ಬೊಂಬಾಯಿಯಲ್ಲಿ ಮೊದಲು ರಮೇಶ್‌ರವರು ನಾರಾಯಣನನ್ನು ತಮ್ಮ ಮನೆಗೆ ಕರೆದುಕೊಂಡು ಹೋದರು ಅಲ್ಲಿ ಅವನಿಗೆ ಸ್ನಾನ, ತಿಂಡಿಗಳಿಗೆ ಏರ್ಪಾಡುಮಾಡಿ ತಾವು ವೈದ್ಯ ರಾಮಕೃಷ್ಣರವರನ್ನು ನೋಡಲು ಹೋದರು.

ನಾರಾಯಣನಿಗೆ ಎಷ್ಟು ಹೊತ್ತಿಗೆ ತಾಯಿತಂದೆಗಳನ್ನು ನೋಡಿಯೇನು ಎನ್ನಿಸುತ್ತಿತ್ತು. ಸ್ನಾನ, ತಿಂಡಿಗಳನ್ನು ಮುಗಿಸಿ ರಮೇಶ್ ಮತ್ತು ರಾಮಕೃಷ್ಣರವರನ್ನು ಎದುರು ನೋಡುತ್ತ ಕುಳಿತ.

ಸ್ವಲ್ಪ ಹೊತ್ತಾದ ಮೇಲೆ ಅವರಿಬ್ಬರೂ ಬಂದರು. ಪರಸ್ಪರ ಪರಿಚಯವಾದ ಮೇಲೆ ರಾಮಕೃಷ್ಣರು ಹೇಳಿದರು,

"ಇವತ್ತು ತಾವು ಇಲ್ಲಿಯೇ ಇರಿ. ನಾನು ನಿಮ್ಮ ತಂದೆಯವರಿಗೆ ನಿಧಾನವಾಗಿ ನೀವು ಬಂದಿರುವ ವಿಷಯವನ್ನು ತಿಳಿಯಿಸುತ್ತೇನೆ. ನಾಳೆಯ ದಿನ ಬೆಳಿಗ್ಗೆ ನೀವು. ಅವರನ್ನು ನೋಡಬಹುದು. ಹೃದ್ರೋಗಕ್ಕೆ ಹಠಾತ್ತಾಗಿ ಮೇರೆ ಮೀರಿ ಸಂತೋಷವಾಗುವುದೂ ಅಪಾಯಕರ"

"ನನ್ನ ತಾಯಿ, ತಂಗಿಯರನ್ನು ನೋಡಬಹುದೆ?"

"ಅವರು ಸದಾ ನಿಮ್ಮ ತಂದೆಯ ಬಳಿ ಇರುತ್ತಾರೆ. ಅವರ ಬಳಿಯಿಂದ ಅವರನ್ನು ಇಲ್ಲಿಗೆ ಕಳುಹಿಸುವುದು ಅಸಾಧ್ಯ. ಏಕೆ, ಇಷ್ಟು ವರ್ಷಗಳೇ ದೂರವಿದ್ದಿರಿ? ಇನ್ನು ಕೆಲವು ಗಂಟೆಗಳಲ್ಲಿ ಏನು ಆಗುತ್ತದೆ?"

ನಾರಾಯಣ ಇನ್ನು ಹೆಚ್ಚಿಗೆ ಹೇಳದೆ ಸುಮ್ಮನಾದ.

"ಈಗ ಬೇಕಾದರೆ ನಿಮ್ಮ ಕುಟುಂಬಕ್ಕೆ ಕಾಗದವನ್ನು ಬರೆಯಿರಿ" ಎಂದರು ರಮೇಶ್ ರಾಮಕೃಷ್ಣರು ಹೊರಟು ಹೋದ ಮೇಲೆ.

ನಾರಾಯಣ ವ್ಯಗ್ರನಾಗಿ ನುಡಿದ,

"ಏನು ಬರೆಯುವುದು ಅವರಿಗೆ? ಹೇಗೂ ತಡವಾಯಿತು, ಇನ್ನೂ ಸ್ವಲ್ಪ ತಡೆದು ಇಲ್ಲಿನ ವಿಷಯಗಳನ್ನೆಲ್ಲ ತಿಳಿಸಿದರಾಯ್ತು. ಅವರು ಸಂದರ್ಭವನ್ನು ಅರ್ಥಮಾಡಿಕೊಳ್ಳಬಲ್ಲರು."

ರಮೇಶ್‌ರವರ ಬಳಿಯಲ್ಲಿ ಬೇಕಾದಷ್ಟು ಪುಸ್ತಕಗಳಿದ್ದುವು. ಆದರೆ ಅವುಗಳಲ್ಲಿ ಒಂದಾದರೂ ನಾರಾಯಣನ ಮನಸ್ಸಿಗೆ ಹಿಡಿಯಲಿಲ್ಲ. ಇವನ ಪಜೀತಿಯನ್ನು ನೋಡಲಾರದೆ ಅವರು ಕೇಳಿದರು,

"ನಿಮಗೆ ನಿದ್ರೆ ಬರುವ ಔಷಧಿಯನ್ನು ಕೊಡಲೆ?"

"ಕೊಡಿ. ನಿಮಗೆ ಅನಂತ ವಂದನೆಗಳು" ಎಂದ ನಾರಾಯಣ.

ಮರುದಿವಸ ಬೆಳಿಗ್ಗೆ ಒಂಭತ್ತು ಗಂಟೆಯ ವೇಳೆಗೆ ರಾಮಕೃಷ್ಣ ರವರು ನಾರಾಯಣನನ್ನು ಕರೆದೊಯ್ಯಲು ಬಂದರು. ಅವರ ಮೋಟರು ಕಾರಿನಲ್ಲಿ ಮೂವರೂ ಗೋವಿಂದಪ್ಪನವರ ಮನೆಗೆ ಹೋದರು.

ಮನೆಯ ಬಾಗಿಲಿನಲ್ಲಿ ಲಲಿತೆ ನಿಂತಿದ್ದಳು. ನಾರಾಯಣ ಅವಳನ್ನು ನೋಡಿ ವಿಸ್ಮಿತನಾದ. ಅವಳಲ್ಲಿ ಹೆಚ್ಚು ಬದಲಾವಣೆ ಇರಲಿಲ್ಲ. ಅವನನ್ನು ನೋಡಿದ ಕೂಡಲೇ ಅವಳು ಓಡಿ ಕಾರಿನ ಬಳಿಗೆ ಬಂದಳು,

"ಅಣ್ಣಾ!"

"ಲಲಿತಾ"

ರಾಮಕೃಷ್ಣರವರು ಅವಳನ್ನು ಹಾಸ್ಯಮಾಡಿದರು,

"ಅಳುವುದೇತಕ್ಕಮ್ಮಾ? ನಿಮ್ಮಣ್ಣನನ್ನು ಕರೆದು ತಂದ ನಮಗೆ ಮೊದಲು ಒಂದಿಷ್ಟು ಸೇವೆ ಸತ್ಕಾರ ಮಾಡಿ, ಬಳಿಕ ನಗುನಗುತ್ತ ಅವರ ಕುಶಲಪ್ರಶ್ನೆ ಮಾಡಬೇಕು. ಅದನ್ನು ಬಿಟ್ಟು ಹೀಗೆ ಅಳುತ್ತ ನಿಂತು ಕೊಳ್ಳುವುದೇ!"

ನಾರಾಯಣ ಅವಳ ತಲೆಯನ್ನು ನೇವರಿಸುತ್ತ,

"ಒಂದೊಂದು ಬಾರಿ ಈರೀತಿಯ ಅಳುವೇ ಮನುಷ್ಯನಿಗೆ ಉಳಿದ ಎಲ್ಲಾ ಮರ್ಯಾದೆಗಿಂತ ಹೆಚ್ಚು ಸಂತೋಷವನ್ನು ಕೊಡುತ್ತದೆ, ಅಲ್ಲವೇ ಲಲಿತಾ ?" ಎಂದು ಕೇಳಿದ, "ಅಮ್ಮ ಎಲ್ಲಿ ಲಲಿತಾ ?"

"ಒಳಗೆ ಅಪ್ಪನ ಹತ್ತಿರ ಇದ್ದಾಳೆ" ಎನ್ನುತ್ತ ಕಣ್ಣೊರೆಸಿಕೊಂಡು ನಕ್ಕಳು ಲಲಿತ. "ಅಣ್ಣಾ, ನೀನು ನಿಜವಾಗಿ ನಮ್ಮಗಳನ್ನು ಮರೆತು ಬಿಟ್ಟಿದ್ದೆಯಾ ?"

"ನಾನು ಎಷ್ಟು ಸಲ ಇದೇ ಪ್ರಶ್ನೆಯನ್ನು ನಿಮ್ಮಗಳ ವಿಷಯ ದಲ್ಲಿ ಹಾಕಿಕೊಳ್ಳುತ್ತಿದ್ದೆ ಲಲಿತಾ ? ಅಮ್ಮ, ನೀನು ಇಬ್ಬರೂ ನನ್ನಲ್ಲಿ ನಿಷ್ಠುರರು ಹೇಗಾದಿರಿ ಎಂದು ನನಗೆ ಅರ್ಥವಾಗುತ್ತಿರಲಿಲ್ಲ"

"ನೀವಿಬ್ಬರೂ ಇಲ್ಲಿಯೇ ಇರಿ, ನಾನೊಂದು ಬಾರಿ ಗೋವಿಂದಪ್ಪ ನವರನ್ನು ನೋಡಿಕೊಂಡು ಬರುತ್ತೇನೆ" ಎಂದು ರಮೇಶ್‌ರವರನ್ನು ಕರೆದುಕೊಂಡು ರಾಮಕೃಷ್ಣರವರು ಒಳಕ್ಕೆ ಹೋದರು.

"ಅಣ್ಣಾ, ನಮಗಾದರೂ ನೀನು ಒಂದು ಕಾಗದ ಹಾಕ ಬೇಕಾಗಿತ್ತು ?"

"ಹೇಗೆ ಹಾಕುವುದು ಲಲಿತಾ ? ಅಪ್ಪ ಇಲ್ಲಿಗೆ ಬಂದಿದ್ದಾರೆ ಎಂದು ಮೊನ್ನೆ ರಮೇಶ್‌ರವರು ಹೇಳುವವರೆಗೂ ನನಗೆ ಗೊತ್ತಿಲ್ಲ. ಆದರೆ ಲಲಿತಾ, ಅಮ್ಮನ ದೊಡ್ಡಪ್ಪನವರ ಮಗ, ಯಾರೋ ವಿಶ್ವಂಭರಯ್ಯ ಎನ್ನುವವರ ಮೂಲಕ ನಿಮಗಾದರೂ ನನ್ನ ವರ್ತಮಾನ ತಿಳಿಯುತ್ತ ಲಿತ್ತು, ಅಲ್ಲವೇ ? ಹಾಗಿದ್ದರೂ ನೀವು ನನಗೆ ಬರೆಯದೆ ಇದ್ದುದನ್ನು ನೋಡಿ ನಿಮಗೆ ನಾನು ಬೇಡವೇನೋ ಎಂದುಕೊಂಡೆ."

ಲಲಿತ ಆಶ್ಚರ್ಯದಿಂದ ಕೇಳಿದಳು,

"ಯಾವ, ವಿಶ್ವಂಭರಯ್ಯನವರಣ್ಣಾ ?"

"ಇದೇನು ಹೀಗೆ ಕೇಳುವೆ ಲಲಿತಾ? ನೀವು ಅವರ ಮೂಲಕ ನನ್ನ ವಿಳಾಸವನ್ನು ಬಹಳ ಕಷ್ಟಪಟ್ಟು ಪತ್ತೆ ಮಾಡಿದಿರಂತೆ. ಅವರು

ನನಗೆ ಕಾಗದ ಬರೆದಿದ್ದರು, "ನಿನಗೆ ಸೋದರ ಮಾವನಾಗಬೇಕು ನಾನು, ನಿನ್ನ ಯೋಗಕ್ಷೇಮ ತಿಳಿಯದೆ ಇಲ್ಲಿ ಬಹಳ ವ್ಯಥೆಯಾಗಿದೆ. ತಕ್ಷಣ ಎಲ್ಲಕ್ಕೂ ಬರೆ. ನನ್ನ ಅಳಿಯ ರಾಘವಯ್ಯನವರು ಬೆಂಗಳೂರಿನಲ್ಲಿಯೇ ಇದ್ದಾರೆ. ಅವರನ್ನು ಹೋಗಿ ನೋಡು" ಅಂತ ಏನೇನೋ. ನಾನು ಅವರಿಗೆ ಉತ್ತರ ಬರೆಯಲಿಲ್ಲ. ಆದರೆ ರಾಘವಯ್ಯನವರೇ ಮನೆಗೆ ಬಂದು ನಮ್ಮಿಬ್ಬರನ್ನೂ ಒಂದು ದಿನ ಊಟಕ್ಕೆ ಕರೆದರು. ಮಾಲತಿಯ ಬಲಾತ್ಕಾರಕ್ಕೆ ಹೋದೆ. ಈಗ ಆಗಾಗ ಹೋಗಿ ಬರುತ್ತೇವೆ"

ಲಲಿತೆ ಅಪ್ರತಿಭಳಾಗಿ ಅವನ ಮುಖವನ್ನೇ ನೋಡುತ್ತಿದ್ದಳು.

ರಾಮಕೃಷ್ಣರು ಒಳಗಿಂದ ಕರೆದರು,

"ನಾರಾಯಣ್, ಲಲಿತಮ್ಮಾ, ಒಳಕ್ಕೆ ಬನ್ನಿ ಇಬ್ಬರೂ"

ನಿಟ್ಟುಸಿರನ್ನು ಬಿಟ್ಟು ಲಲಿತೆ ಎದ್ದಳು,

"ಅಪ್ಪನನ್ನು ನೋಡುವೆಯಂತೆ ಬಾ ಅಣ್ಣ"

ನಾರಾಯಣ ಅವಳನ್ನು ಹಿಂಬಾಲಿಸಿ ನಡೆದು ವಿಶಾಲವಾದ ಒಂದು ಕೊಠಡಿಯನ್ನು ಪ್ರವೇಶಿಸಿದ. ಕೊಠಡಿಯ ಮಧ್ಯೆ ದೊಡ್ಡ ಮಂಚದ ಮೇಲೆ ಶುಭ್ರವಾದ ಹಾಸಿಗೆಯಲ್ಲಿ ಗೋವಿಂದಪ್ಪ ಮಲಗಿದ್ದರು.

ಒಂದು ಕ್ಷಣಕಾಲ ಕೊಠಡಿಯಲ್ಲಿ ನೀರವತೆ ವ್ಯಾಪಿಸಿತ್ತು. ತಂದೆ ಮಕ್ಕಳು ಒಬ್ಬರನ್ನೊಬ್ಬರು ನೋಡುತ್ತ ತಮ್ಮ ಸುತ್ತಲಿನದೆಲ್ಲವನ್ನೂ ಮರೆತಂತೆ ತೋರಿತು. ಗೋವಿಂದಪ್ಪನವರ ಕಣ್ಣುಗಳಲ್ಲಿ ನೀರು ಒಂದೇ ಸಮನೆ ಬರುತ್ತಿತ್ತು. ಮಗನನ್ನು ಆಪಾದಮಸ್ತಕವಾಗಿ ಎರಡುಮೂರಾವರ್ತಿ ನಿಧಾನವಾಗಿ ನೋಡಿ ಬಳಿಕ ಕರೆದರು,

"ಬಾ ಒಳಕ್ಕೆ. ಇಲ್ಲಿ ಕುಳಿತುಕೋ"

ನಾರಾಯಣ ಮೆಲ್ಲನೆ ಬಂದು ತಂದೆಯ ಬಳಿಯಲ್ಲಿ ಅವರು ಕೈ ತೋರಿದೆಡೆಯಲ್ಲಿ ಕುಳಿತುಕೊಂಡ. ಅವರು ಅವನ ಕೈಯ ಮೇಲೆ ತಮ್ಮ ಕೈಯನ್ನು ಇಟ್ಟು ಒಮ್ಮೆ ನಿರಾಳವಾಗಿ ಉಸಿರನ್ನು ಬಿಟ್ಟರು.

"ಯಶೋದ, ನನ್ನನ್ನು ಇನ್ನು ನೀನು ಬೈಯ್ಯುವಂತಿಲ್ಲ. ನಿನ್ನ ಮಗ ಬಂದಿದ್ದಾನೆ."

ನಾರಾಯಣ ಹೊರಳಿ ತಾಯ ಕಡೆಗೆ ನೋಡಿದ. ಅವರು ಹುಚ್ಚಿಯಂತೆ ಅವನನ್ನೇ ದಿಟ್ಟಿಸಿ ನೋಡುತ್ತ ಹೇಳಿದರು,

"ನಿಮ್ಮನ್ನು ಎಂದೂ ಬೈದಿರಲಿಲ್ಲ. ನನ್ನ ಅದೃಷ್ಟ ಕೆಲವು ದಿನ ಕೆಟ್ಟಿದ್ದಾಗಿದ್ದವು. ಯಾರೇನು ಮಾಡಿದ್ದರೂ ಆಗುವುದು ಆಗುತ್ತಲೇ ಇದ್ದಿತು."

"ಬಾಯಿಬಿಟ್ಟು ಬೈದಿಲ್ಲ, ನಿಜ. ಆದರೆ ನಿನ್ನ ಮೂಕಸಂಕಟಕ್ಕಿಂತ ನನಗೆ ದೊಡ್ಡ ಶಿಕ್ಷೆ ಇನ್ನಾವುದು ಬೇಕಿತ್ತು ಹೇಳು, ಯಶೋದ" ಎಂದು ಮೆಲುನಗೆ ನಕ್ಕರು ಗೋವಿಂದಪ್ಪನವರು.

ರಾಮಕೃಷ್ಣ ನಕ್ಕರು ಗಟ್ಟಿಯಾಗಿ,

"ರಮೇಶ್, ನಡೆಯಿರಿ ಹೋಗೋಣ. ಈ ಮನೆಯಲ್ಲಿ ಇನ್ನು ನಮ್ಮ ಅವಶ್ಯಕತೆಯಿಲ್ಲ."

"ಛೇ! ಖಂಡಿತ ನೀವು ಈಗ ಹೋಗಕೂಡದು. ಲಲಿತ, ವೈದ್ಯರಿಗೆ. ಉಪಾಹಾರ ಮಾಡಿಸಮ್ಮ ಮೊದಲು." ಗೋವಿಂದಪ್ಪನವರು ಲಲಿತೆಗೆ ಹೇಳಿದರು.

"ನಿಮ್ಮನ್ನು ಒಂದು ಬಾರಿ ಪರೀಕ್ಷೆಮಾಡಿ ಬಳಿಕ ಇಲ್ಲಿಂದ ಹೊರಕ್ಕೆ ಹೋಗುತ್ತೇವೆ. ಇವರು ಬಂದಿದ್ದರಿಂದಲೇನಾದರೂ ನಿಮ್ಮ ರಕ್ತದ ಒತ್ತಡ ಹೆಚ್ಚಿದಂತೆ ಕಂಡುಬಂದರೆ ಮೊದಲು ಇವರನ್ನು ಇಲ್ಲಿಂದ ಹೊರಡಿಸಬೇಕಲ್ಲ?" ಎಂದು ರಾಮಕೃಷ್ಣ ಗೋವಿಂದಪ್ಪನವರ ಮುಂದೆ ಬಂದರು.

ಅವರು ಗೋವಿಂದಪ್ಪನವರನ್ನು ಪರೀಕ್ಷೆಮಾಡುವವರೆಗೂ ಎಲ್ಲರೂ ಸುಮ್ಮನಿದ್ದರು. ಆಮೇಲೆ ಗೋವಿಂದಪ್ಪ ಕೇಳಿದರು,

"ಏನು ವೈದ್ಯರೇ, ಇನ್ನೂ ನಾಲ್ಕು ದಿನಗಳು ಈ ಲೋಕದ ಋಣ ವಿದೆಯಷ್ಟೆ ನನಗೆ?" ಅವರು ನಗುತ್ತ ಹೇಳಿದರು,

"ಸ್ವಾಮೀ, ಸುಳ್ಳುಸುಳ್ಳೇ ರೋಗ ಬಂದವರಂತೆ ನಟಿಸಿ ಬಹಳ ದಿನಗಳು ವಿಶ್ರಾಂತಿ ಹೊಂದಿದ್ದೀರಿ. ಇನ್ನು ಎದ್ದು ತಮ್ಮ ಕೈಕಾಲ, ಗಳಿಗೆ ಸ್ವಲ್ಪ ಕೆಲಸ ಕೊಡಿ."

"ನಮ್ಮಿಂದ, ಹಾಗಿದ್ದರೆ, ಸುಮ್ಮನೇ ದುಡ್ಡು ಹೊಡೆದಿದ್ದೀರಿ ವೈದ್ಯರೇ. ಈ ಮೋಸ ನಮ್ಮಲ್ಲಿ ನಡೆಯುವುದರದು. ಯಶೋದು ಇವರಿಬ್ಬರಿಗೂ ಏನು ಶಿಕ್ಷೆ ಮಾಡೋಣ?"

"ಇವತ್ತು ಇಲ್ಲಿಯೇ ಊಟಮಾಡಲಿ ಅವರು. ನಮ್ಮ ಚಿಕ್ಕಮ್ಮ ಮಾಡುವ ಅಡಿಗೆಯನ್ನು ಒಂದು ದಿವಸ ಊಟಮಾಡಿದರೆ ಎಂಟು ದಿವಸ ಗಳು ಅದರ ತಳಮಳವನ್ನು ಅನುಭವಿಸಬೇಕು."

"ಹೆದರಿಸಬೇಡೀಮ್ಮಾ. ಇಲ್ಲದಿದ್ದರೆ ಈಗ ಲಲಿತಮ್ಮ ಕೊಡುವ ಉಪಹಾರವನ್ನು ಒಂದಕ್ಕೆ ಐದರಷ್ಟು ಹಾಕಿಸಿಕೊಂಡು ಊಟಕ್ಕೆ ಕುಳಿತಾಗ ಗುಬ್ಬಚ್ಚಿಮರಿಗಳಂತೆ ಊಟಮಾಡುತ್ತೇವೆ. ಅಲ್ಲವೇ ರಮೇಶ್?" ರಾಮಕೃಷ್ಣ ರಮೇಶರನ್ನು ಕೇಳಿದರು.

"ಹೌದು, ಹೌದು" ಎಂದರು ಅವರು, "ಅಂದಹಾಗೇ ಲಲಿತಮ್ಮ ನೀವು ಮರತೇಬಿಟ್ಟಿರಿ."

"ಇಲ್ಲ, ಎದ್ದು ಬನ್ನಿ ಇಬ್ಬರೂ" ಎಂದು ನಸುನಗುತ್ತ ಅಣ್ಣನ ಕಡೆಗೊಮ್ಮೆ ನೋಡಿ ಲಲಿತೆ ಒಳಕ್ಕೆ ಹೋದಳು. ವೈದ್ಯರಿಬ್ಬರೂ ಹಸನ್ಮುಖಿಗಳಾಗಿ ಅವಳ ಹಿಂದೆ ಹೊರಟರು,

"ನಾವು ಈಗಲೇ, ಸ್ವಲ್ಪ ಶಾಂತಿ ಮಾಡಿಕೊಂಡು ಬರುತ್ತೇವೆ."

ಅವರು ಅತ್ತ ಹೋದಮೇಲೆ ಯಶೋದಮ್ಮ ನಾರಾಯಣನನ್ನು ಕೇಳಿದರು,

"ಮಗೂ, ನಿನ್ನ ವಿಚಾರವೇನು? ಮಾಲತಿಯನ್ನು ಮದುವೆ ಯಾದೆಯಾ?"

ನಾರಾಯಣ ಬಗ್ಗಿ ತಾಯ ಕಾಲನ್ನು ಮುಟ್ಟಿದ,

"ಅಮ್ಮಾ, ನನ್ನಲ್ಲಿ ಯಾರಿಗೂ ಇನ್ನು ಆಗ್ರಹವಿಲ್ಲವೇ?"

ಅವರು ಅವನ ತಲೆಯನ್ನು ಮುಟ್ಟಿ ಆಶೀರ್ವದಿಸಿದರು.

"ಚಿರಾಯುವಾಗು ಮಗು. ಏನು ಕೇಳಿದೆ?"

ಗೋವಿಂದಪ್ಪ ಹೇಳಿದರು,

"ಅವನಲ್ಲಿ ನಮಗೆ ಇನ್ನು ಆಗ್ರಹವಿಲ್ಲವೇ ಎಂದು ಕೇಳಿದ. ಅದು ನನ್ನನ್ನು ಕೇಳಬೇಕಾದ ಪ್ರಶ್ನೆ ನಾರಾಯಣ. ನನಗೆ ಮಾತ್ರವೇ ನಿನ್ನಲ್ಲಿ ಕೋಪ ಬಂದಿತ್ತು. ಅವರಿಬ್ಬರೂ ಅದರಿಂದ ತಪಿಸಿದರು ಅಷ್ಟೆ. ಈಗ ಅದೆಲ್ಲಿ ಹೋಯಿತು ಮಗು? ನೀನು ಯಾರನ್ನು ಬೇಕಾದರೆ ಮದುವೆಯಾಗಿರು, ಆ ಹುಡುಗಿಯನ್ನು ನಾವು ಆದರದಿಂದ ಸೊಸೆಯೆಂದು ಸ್ವೀಕರಿಸುತ್ತೇವೆ."

ಯಶೋದಮ್ಮನವರೂ ಹೇಳಿದರು,

"ಹೌದು ಮಗು, ಇದುವರೆಗೆ ಆದದ್ದಾಗಿಹೋಯಿತು. ಇನ್ನು ಮುಂದೆಯಾದರೂ ಒಬ್ಬರನ್ನು ಒಬ್ಬರು ತಿಳಿದುಕೊಂಡು ಬಾಳೋಣ."

ನಾರಾಯಣ ಸುಮ್ಮನೆ ಕುಳಿತಿದ್ದ. ಯಶೋದಮ್ಮ ಮತ್ತೆ ಕೇಳಿದರು,

"ಮಗು, ಮಾಲತಿ........?"

"ಸೌಖ್ಯವಾಗಿದ್ದಾಳಮ್ಮ" ಎಂದ ಅವನು ನಸುನಗೆಯಿಂದ.

"ಗೋವಿಂದಪ್ಪ ಪ್ರಶ್ನೆಮಾಡಿದರು,

" ಮಕ್ಕಳು ?"

"ಇಬ್ಬರಿದ್ದಾರೆ. ಹಿರಿಯವನು ರಾಮಚಂದ್ರ, ಚಿಕ್ಕದು ಲಕ್ಷ್ಮಣ."

ಗೋವಿಂದಪ್ಪನವರ ಮುಖಕ್ಕೆ ಕಳೆ ಬಂದಿತು,

"ಮಗು, ನೀನು ಇವತ್ತೇ ಹೋಗಿ ಅವರನ್ನು ಕರೆದುಕೊಂಡ ಬಾ. ನಾನು ನನ್ನ ಮೊಮ್ಮಕ್ಕಳನ್ನು ನೋಡಬೇಕು, ಮಾಲತಿಯನ್ನೂ ನೋಡಬೇಕು."

"ಆಗಲಪ್ಪಾ. ಆದರೆ ಅದಕ್ಕೆ ಅವಸರ ಬೇಡ. ಬೆಂಗಳೂರಿಗೆ ಹೋಗಿ ಅಲ್ಲಿ ಸರಿಯಾಗಿ ವ್ಯವಸ್ಥೆಗಳನ್ನು ಮಾಡಿ ಅವರನ್ನು ಕರೆತರುವುದು ನಿಧಾನದ ಕೆಲಸ."

"ನಿಧಾನದ ಕೆಲಸವನ್ನು ನಿಧಾನವಾಗಿ ಪ್ರಾರಂಭಿಸಬೇಕೇ ಮಗು?

ಆಗುವುದಿಲ್ಲವೆನ್ನಬೇಡ. ಬೇಕಾದರೆ ಲಲಿತೆಯನ್ನೂ ಕರೆದುಕೊಂಡು ಹೋಗು. ಮಾಲತಿ ಹಾಗೂ ಮಕ್ಕಳನ್ನು ನಾನು ನೋಡಬೇಕು."

ಯಶೋದಮ್ಮ ಹೇಳಿದರು,

"ಅವರ ಮಾತು ಕೇಳು ಮಗು. ಮೊಮ್ಮಕ್ಕಳಿದ್ದೂ ನಾವು ಇಷ್ಟು ದಿನ ಅವರನ್ನು ಎತ್ತಿಕೊಂಡು ಆ ಸುಖವನ್ನು ಅನುಭವಿಸಿಲ್ಲವಲ್ಲ! ಇನ್ನು ಇದರಿಂದ ನಮ್ಮನ್ನು ವಂಚಿಸಬೇಡ ಮಗು. ಇಲ್ಲಿಂದ ಬೆಳಿಗ್ಗೆ ಬೆಂಗಳೂರಿಗೆ ವಿಮಾನ ಎಷ್ಟುಹೊತ್ತಿಗೆ ಹೊರಡುವುದೆಂದು ವಿಚಾರಿಸಿ, ಹೋಗಿ ಆದಷ್ಟು ಬೇಗ ಅವರನ್ನು ಕರೆದುಕೊಂಡು ಬಂದುಬಿಡು ಮಗು."

ತಾಯಿಯ ಮುಖದಮೇಲಿನ ಭಾವದಿಂದ ನಾರಾಯಣನಿಗೆ ಒಂದು ತಿಳಿಯಿತು, ''ತಂದೆಯ ಹೃದಯ, ಆವೇಗ, ಆಶಾಭಂಗಗಳನ್ನು ತಡೆಯ ಲಾರದು. ಆದ್ದರಿಂದ ಅವರ ಇಚ್ಛೆಯನ್ನು ತಕ್ಷಣ ಮಾನ್ಯ ಮಾಡಲೇ ಬೇಕು.'' ತಕ್ಷಣ ಹೇಳಿದ,

''ಆಗಲಮ್ಮ ಹಾಗೇ ಮಾಡುತ್ತೇನೆ.''

ಸ್ವಲ್ಪವೇ ಸ್ವಲ್ಪ ಹೊತ್ತು ಮೂವರೂ ಮಾತನಾಡಿದರೇನೋ, ಅಷ್ಟ ರಲ್ಲಿ ವೈದ್ಯರಿಬ್ಬರೂ ಒಳಕ್ಕೆ ಬಂದರು,

"ಇನ್ನು ಸ್ವಾಮೀ ಗೋವಿಂದಪ್ಪನವರೇ, ತಾವು ವಿಶ್ರಾಂತಿ ತೆಗೆದು ಕೊಳ್ಳಬೇಕು. ಒಂದು ಗಂಟೆಯ ಕಾಲದಿಂದ ಉತ್ತೇಜಿತ ಸ್ಥಿತಿಯಲ್ಲಿ ದ್ದೀರಿ. ಇದನ್ನು ನಾನು ಮುಂದುವರೆಯಲು ಬಿಡುವುದಿಲ್ಲ" ಎಂದು ರಾಮಕೃಷ್ಣರವರು ನಾರಾಯಣನಿಗೆ ಹೇಳಿದರು, "ಸಂಜೆ ಪುನಃ ನಿಮ್ಮ ತಂದೆಯವರನ್ನು ನೋಡುವಿರಂತೆ. ಈಗ ಅವರನ್ನು ಹೆಚ್ಚು ಉದ್ವೇಗ ಗೊಳಿಸದೆ ಈಚೆಗೆ ಬಂದುಬಿಡಿ."

ವೈದ್ಯರ ಮಾತಿಗೆ ಎದುರಾಡದೆ ನಾರಾಯಣ ಎದ್ದ.

"ಅಪ್ಪಾ, ಸಾಯಂಕಾಲ ನಿನ್ನನ್ನು ಪುನಃ ನೋಡುತ್ತೇನೆ. ಅಮ್ಮಾ ನೀನು ಇಲ್ಲಿಯೇ ಇರುವಿಯೇನು?" ಯಶೋದಮ್ಮ ನಸುನಗೆಯಿಂದ ನುಡಿದರು,

"ಇಬ್ಬರು ವೈದ್ಯರಿರುವಾಗ ನನ್ನ ಅವಶ್ಯಕತೆ ಅಷ್ಟಾಗಿ ಇಲ್ಲ ಈ ಕೊಠಡಿಯಲ್ಲಿ. ನಡೆ ಮಗು ನಿನಗೆ ಉಪಹಾರದ ವ್ಯವಸ್ಥೆಯನ್ನು ಮಾಡಿ ಬರುತ್ತೇನೆ"

ಕೊಠಡಿಯಿಂದ ಈಚೆಗೆ ಬರುತ್ತಲೇ ಯಶೋದಮ್ಮನವರ ಗಾಂಭೀರ್ಯ ಎತ್ತಲೋ ಹಾರಿಹೋಯಿತು.

"ಅವರು ಹೇಳಿದ್ದು ಯಾವುದಕ್ಕೂ ಇಲ್ಲವೆನ್ನಬೇಡ ಮಗು. ಅವರು ಎಷ್ಟು ಅಸ್ವಸ್ಥರಾಗಿದ್ದಾರೆಂದು ನಿನಗೆ ಇನ್ನೂ ತಿಳಿಯದು. ಯಾವ ಕ್ಷಣಕ್ಕೆ ಏನೋ ಅನ್ನಿಸಿಬಿಟ್ಟಿತ್ತು" ಎನ್ನುತ್ತಿರುವಾಗಲೇ ಅವರ ಕಣ್ಣಿನಿಂದ ಅಶ್ರುಪ್ರವಾಹ ಹರಿಯತೊಡಗಿತು, "ನೀನು ಎಲ್ಲಿದ್ದೆಯೆಂದು ತಿಳಿಯದು ನಮಗೆ. ನಾವಿಲ್ಲಿದ್ದೇವೆ ಎಂದು ಬಹುಶಃ ನಿನಗೂ ತಿಳಿದಿರಲಾರದು ಎಂದೂ ಗೊತ್ತು. ಜೊತೆಗೆ ಇವರು ಮನಸ್ಸಿನಲ್ಲಿ ಇಷ್ಟು ವಾತ್ಸಲ್ಯ ಇಟ್ಟುಕೊಂಡಿದ್ದರೂ ಮೇಲೆ ನಿನ್ನ ವಿಷಯದಲ್ಲಿ ಬಹಳ ನಿಷ್ಠುರರಂತೆ ತೋರ್ಪಡಿಸಿಕೊಳ್ಳುವುದು ಬೇರೆ. ನಮಗೆ ಏನು ಮಾಡುವುದೆಂದೇ ತಿಳಿಯಲಿಲ್ಲ ಮಗು."

ನಾರಾಯಣನಿಗೆ ತಾಯಿಯ ಮಾತಿನಿಂದ ಮತ್ತೆ ಆಶ್ಚರ್ಯವಾಯಿತು,

"ಅಮ್ಮಾ, ನಿನ್ನ ದೊಡ್ಡಪ್ಪನವರ ಮಗ ಒಬ್ಬರು ವಿಶ್ವಂಭರಯ್ಯ ಎನ್ನುವರು ಇದ್ದಾರೆಯಷ್ಟೆ ?"

"ಹೂಂ, ವಿಶ್ವಂಭರ ಗೊತ್ತಿಲ್ಲವೇ ನನಗೆ. ಇಲ್ಲಿಗೆ ಬಂದ ಮೇಲೆ ಅವನು ಆಗಾಗ್ಗೆ ಬರುತ್ತಿದ್ದ ಇಲ್ಲಿಗೆ"

"ಅವರಿಗೆ ನನ್ನ ವಿಳಾಸ ಚೆನ್ನಾಗಿ ಗೊತ್ತಿತ್ತಲ್ಲಮ್ಮ ?"

"ಯಾವಾಗಿನಿಂದ ಗೊತ್ತು ಮಗು ?

"ಕೊನೆಯ ಪಕ್ಷ ಮೂರು ನಾಲ್ಕು ತಿಂಗಳಿಂದಲೂ ಗೊತ್ತು"

"ಓ ! ಸರಿ ಹಾಗಾದರೆ. ಅವನು ಮನೆಗೆ ಕೊನೆಯ ಬಾರಿ ಬಂದದ್ದೇ ಈಗ್ಗೆ ಐದಾರು ತಿಂಗಳ ಹಿಂದೆ ಮಗು"

"ಅವೇನು, ಇಲ್ಲಿಗೆ ಬರುವುದನ್ನು ಬಿಟ್ಟುಬಿಟ್ಟಿದ್ದಾರೆಯೆ ಅವರು?"

"ಹೌದು. ನಾರಾಯಣ ಅದು ಒಂದು ದೊಡ್ಡ ಕಥೆ. ಅದನ್ನೆಲ್ಲ ಈಗ ಹೇಳಲು ಪುರಸೊತ್ತಿಲ್ಲ. ನೀನು ಮತ್ತೆ ಬಂದ ಮೇಲೆ ಬೇಕಾದಷ್ಟು ಹೊತ್ತಿರುತ್ತದೆಯಲ್ಲ? ಆಗ ಎಲ್ಲವನ್ನೂ ಹೇಳುತ್ತೇನೆ"

ನಾರಾಯಣನಿಗೂ ಆ ಮಾತು ಅಷ್ಟಾಗಿ ಬೇಕಾಗಿರಲಿಲ್ಲ.

"ಅಮ್ಮಾ, ಅಪ್ಪನ ಸ್ಥಿತಿ ಈಗ ಹೇಗಿದೆಯಮ್ಮಾ?"

"ಸರಿ ಹೋಗುತ್ತಾರೆ ಮಗು. ಮೊನ್ನೆ ದಿವಸ ರಮೇಶ್‌ರವರು ನೀನು ಬರುವ ವಿಷಯವನ್ನು ತಿಳಿಯಿಸಿ ರಾಮಕೃಷ್ಣರವರಿಗೆ ತಂತಿ ಕೊಟ್ಟಿದ್ದರಂತೆ. ಅವರು ಆಗಿನಿಂದ ಮೆಲ್ಲಗೆ ನೀನು ಇಲ್ಲಿಗೆ ಬರುವೆಯೆಂದು ಅವರಿಗೆ ತಿಳಿಸಿದರು. ಆ ಕ್ಷಣದಿಂದಲೇ ಅವರ ರೋಗ ವಾಸಿಯಾಗುತ್ತಿದೆ ಎನ್ನಬಹುದು. ಅವರು ನಗುವುದನ್ನು ಬಿಟ್ಟೇಬಿಟ್ಟಿದ್ದರು. ಇವತ್ತೇ ಸರಿಯಾಗಿ ನಕ್ಕಿದ್ದು ಮತ್ತೆ ಅವರು. ಅದನ್ನು ನೋಡಿ ನನಗೆ ಜೀವ ಬಂದಿತು. ಇನ್ನು ಅವರ ಜೀವಕ್ಕೆ ಭಯವಿಲ್ಲ."

"ಲಲಿತೆಯೇಕೆ ಹೀಗೆ ಒಣಗಿ ಹೋಗಿದ್ದಾಳವ್ಮಾ?"

"ಅವಳಿಗೆ ನೂರೆಂಟು ಯೋಚನೆಗಳು ಮಗು. ಆದರೆ ಸದ್ಯ ದೇವರ ದಯೆ. ಅವಳ ವಿಚಾರದಲ್ಲಿ ಈಗ ನನಗೆ ಚಿಂತೆಯಿಲ್ಲ ಮಗು" ಎಂದರು ಯಶೋದಮ್ಮ "ಇದ್ದ ಯೋಚನೆಯೆಲ್ಲ ನಿಮ್ಮ ತಂದೆಯದೇ"

ನಾರಾಯಣನನ್ನು ಉಪಹಾರಕ್ಕೆ ಕೂಡಿಸಿ ಅವರು ಮತ್ತೆ ಮತ್ತೆ ಹೇಳಿದರು,

"ಅಂತೂ, ನಿನ್ನ ಮೇಲಿನ ಸಿಟ್ಟಿನಿಂದ ಅವರಿಗೆ ಹುಚ್ಚು ಹಿಡಿಯದಿದ್ದದು ಹೆಚ್ಚು. ಲಲಿತೆಯೆಲ್ಲಿ ನಿನ್ನನ್ನು ನೋಡಲು ಹೊರಟುಬಿಡುತ್ತಾಳೋ ಎಂದು ಅವಳನ್ನು ಎಡೆಬಿಡದೆ ಕಾದರು. ತಾವು ನೋಡಿದರೆ ಒಳಗಡೆ ಪುತ್ರವಾತ್ಸಲ್ಯಕ್ಕೆ ಸೋತು ಹಣ್ಣಾಗುತ್ತಿದ್ದರು"

ನಾರಾಯಣ ಕೇಳಿದ,

"ಈ ಊರಿನಲ್ಲಿಯೇ ಇರಬೇಕೆಂದು ಅಪ್ಪನ ಯೋಚನೆ ಇದೆಯೇ ಅಮ್ಮಾ?"

"ಅದೇನು ಕೇಳುತ್ತೀಯಪ್ಪ! ನಮ್ಮ ತಮ್ಮವರಿದ್ದಾರೆ ಎಂದು ಇಲ್ಲಿಗೆ ಬಂದರು. ಆದರೆ ಮಗು ಬೆಳೆದ ಮೇಲೂ ಅಣ್ಣತಮ್ಮಂದಿ ರಲ್ಲಿ ಮೊದಲಿನ ಸೌಹಾರ್ದವಿರುತ್ತದೆ ಎಂದು ತಿಳಿದಿರುತ್ತೇವೆ. ಅದು ಎಷ್ಟು ಕಡೆ ಸುಳ್ಳಾಗುತ್ತದೆ ಬಲ್ಲೆಯಾ? ಬೆಂಗಳೂರಿಗೆ ಹೋಗಿ ತುಂಬ ಗಂಟುಮಾಡಿದ್ದೇವೆಂದು ತಿಳಿದು ನಮ್ಮ ನೆಂಟರೆಲ್ಲಾ ನಮ್ಮಲ್ಲಿ ತೋರಿಸಿದ ಅಸೂಯೆ, ಅಸಹನೆ ಹೇಳತೀರದು"

"ಮತ್ತೆ ಇಲ್ಲಿನ್ನು ಏತಕ್ಕಾಗಿ ಇರಬೇಕಮ್ಮಾ?"

"ಇನ್ನು ಇರಬೇಕಾಗಿಲ್ಲ ಮಗು. ಅದಕ್ಕೇ ಹೇಳುವುದು. ನಾಲ್ಕು ದಿನ ಸೊಸೆ ಮೊಮ್ಮಕ್ಕಳ ನಡುವೆ ಇದ್ದರೆ ಅವರು ಬೇಗನೇ ಚೇತರಿಸಿ ಕೊಳ್ಳಬಹುದು. ಆಮೇಲೆ ಬೆಂಗಳೂರಿಗೆ ಎಲ್ಲರೂ ಒಟ್ಟಿಗೆ ಹೋಗೋಣ"

ಮಾತನಾಡುತ್ತ ತಿಂಡಿ ಮುಗಿಸಿ ನಾರಾಯಣ ಏಳುವ ಹೊತ್ತಿಗೆ ಲಲಿತೆಯೂ ಬಂದಳು,

"ಎಲ್ಲಿದ್ದೆ ಲಲಿತಾ, ಇಷ್ಟು ಹೊತ್ತೂ?" ನಾರಾಯಣ ಅಕ್ಕರೆ ಯಿಂದ ಕೇಳಿದ.

ಲಲಿತೆ ನಕ್ಕಳು. ಯಶೋದಮ್ಮ ಹೇಳಿದರು,

"ಸ್ನಾನಮಾಡಿ ಬಂದಳೆಂದು ತೋರುತ್ತದೆ. ಇನ್ನು ಪೂಜೆ ಪುನಸ್ಕಾರಗಳು ನಡೆಯಬೇಕಲ್ಲ?"

"ಓಹೋ ಅದೇನದು?" ಚಕಿತನಾಗಿ ಕೇಳಿದ ನಾರಾಯಣ.

"ಹುಂ. ಅವಳೀಗ ನಿತ್ಯ ಸ್ನಾನ ಮಾಡಿ, ತಾನೇ ಹೂವು ಕಿತ್ತಿ, ಕಟ್ಟಿ ಅದನ್ನು ಪೂಜೆ ಮಾಡಿ, ಗಂಟೆಗಟ್ಟಲೆ ದೇವರ ಧ್ಯಾನ ಮಾಡಿ ಊಟದ ಹೊತ್ತಿಗೇ ಏನಾದರೂ ಬಾಯಿಗೆ ಹಾಕಿಕೊಳ್ಳುವುದು. ಮಧ್ಯಾಹ್ನ ನೋಡು, ಭಗವದ್ಗೀತೆಯನ್ನು ತಂದೆಯೆದುರಿಗೆ ಓದುತ್ತಾಳೆ"

"ಓ! ಹಾಗಾದರೆ ಅಮ್ಮಾ ಇನ್ನು ಮೇಲೆ ಲಲಿತೆ ಬಂದರೆ ನಾನು ಎದ್ದು ನಿಲ್ಲಬೇಕೋ ಏನೋ. ಒಂದು ಪೂಜೆ, ದೇವರು ಏನೂ ಕಂಡವ ವನಲ್ಲ ನಾನು" ಎಂದು ನಾರಾಯಣ ನಕ್ಕ, "ಹೋಗಲಿ, ಲಲಿತಾ ನಿನ್ನ ಪೂಜೆಯ ಪರಮಾರ್ಥವೇನು ಹೇಳಮ್ಮ, ಅದನ್ನಾದರೂ ಕೇಳೋಣ."

ಲಲಿತೆ ನಗುತ್ತ ಒಳಕ್ಕೆ ಹೋದಳು, ಯಶೋದಮ್ಮನವರಿಗೆ ನಗು ಬಂದಿತು,

"ಮಗೂ ಅವಳು ಸ್ನಾನವಾದ ಮೇಲೆ ಪೂಜೆ ಮುಗಿಯುವವರೆಗೆ ಯಾರೊಡನೆಯೂ ಮಾತನಾಡುವುದಿಲ್ಲ. ನನ್ನನ್ನು ಕೇಳು ಏತಕ್ಕೆ ಅವಳಿಷ್ಟು ಪೂಜೆ ಮಾಡುತ್ತಾಳೆ ಎಂದು. ನಾನು ಹೇಳುತ್ತೇನೆ"

"ಹೇಳಮ್ಮ ನೀನೇ ಹಾಗಾದರೆ"

"ನೀನೇ ಊಹಿಸಬಹುದಿತ್ತು ನಾರಾಯಣ. ತಂದೆ ಹೀಗೆ, ಅಣ್ಣ ಹಾಗೆ, ದೇವರ ಮರೆಹೊಕ್ಕರಾದರೂ ಇದೆಲ್ಲಾ ಸರಿಹೋಗಬಹುದು ಎಂದು ಅವಳು ಇದೆಲ್ಲಾ ಮಾಡುತ್ತಿದ್ದಾಳೆ"

"ಹಾಗಾದರೆ ಇನ್ನು ನಿಲ್ಲಿಸಿಬಿಡಲಿ. ಈ ರೀತಿ ದೇಹದಂಡನೆ ಮಾಡಿದರೆ ಏನಾದರೂ ಆಗೀತು"

"ಈಗ ಲಲಿತೆಯೆ ನಿಲ್ಲಿಸುವವಳು ? ಮಾಡಲಿ ಬಿಡು ನಾರಾಯಣ. ಅವಳ ಮನಸ್ಸಿಗೆ ಸಮಾಧಾನ ಬರುವುದಕ್ಕೆ ಏನಾದರೂ ಮಾಡಬೇಕಲ್ಲ ? ಮಾಡಲಿ ಬಿಡು. ಇದರಿಂದ ಆರೋಗ್ಯ ಕೆಡುವುದೆಂಬುದು ನಿಜವಲ್ಲ, ಅವಳು ತನ್ನನ್ನು ಮುತ್ತುತ್ತಿದ್ದ ಚಿಂತೆಗೆ ಮನಸ್ಸು ಕೊಟ್ಟಿದ್ದರೆ ಇಷ್ಟು ಹೊತ್ತಿಗೆ ಅವಳೂ ಹಾಸಿಗೆ ಹಿಡಿದಿರುತ್ತಿದ್ದಳು ಎಂಬುದು ನಿಜ"

ಸ್ವಲ್ಪ ಹೊತ್ತು ಅವನೊಡನೆ ಮಾತನಾಡಿ ಬಳಿಕ ಯಶೋದಮ್ಮ ಎದ್ದರು,

"ಇನ್ನು ಅವರ ಬಳಿಗೆ ಹೋಗುತ್ತೇನೆ ನಾರಾಯಣ. ನೀನು ಈಗಲೇ ವಿಮಾನ ನಿಲ್ದಾಣದಿಂದ ಟಿಕೇಟಿನ ಬಗ್ಗೆ ವಿಚಾರಿಸು"

ನಾರಾಯಣ ಫೋನು ಮಾಡಿ ಮಾರನೆಯ ದಿನ ಹೊರಡಲಿರುವ ವಿಮಾನಕ್ಕೆ ಟಿಕೇಟನ್ನು ಕಾದಿರಿಸಿದ.

ವೈದ್ಯ, ರಾಮಕೃಷ್ಣರು ಅವನು ಫೋನು ಮಾಡುವುದನ್ನು ಕೇಳಿದರು,

"ಓಹೋ, ನಾಳೆ ಬೆಳಿಗ್ಗೆ ಹೊರಡುವಿರೇನು ತಾವು ಸಂತೋಷ. ನನ್ನ ಕಾರಿನಲ್ಲಿ ಕರೆದುಕೊಂಡು ಹೋಗುತ್ತೇನೆ ವಿಮಾನ ನಿಲ್ದಾಣಕ್ಕೆ ಬೇಕಾದರೆ" ಎಂದು ತಕ್ಷಣ ಹೇಳಿದರು.

"ತಮಗೆ ತೊಂದರೆಯಾಗದಿದ್ದರೆ........" ಎಂದ ಕೃತಜ್ಞತೆಯಿಂದ ನಾರಾಯಣ.

"ತೊಂದರೆಯೇನಿಲ್ಲ. ಇನ್ನು ನೀವು ಬೇಕೆನ್ನಿಸಿದರೆ ನಿಮ್ಮ ತಂದೆಯ ಕೊಠಡಿಗೆ ಹೋಗಿ. ಆದರೆ ಒಂದೇ ಮಾತು. ಅವರಿಗೆ ಅಳು ಬರದಂತೆ, ಸಿಟ್ಟು ಬರದಂತೆ, ಎಚ್ಚರಿಕೆಯಾಗಿರಿ, ಅಷ್ಟೆ"

ಅವರ ಮಾತಿಗೆ ತಲೆದೂಗಿ ನಾರಾಯಣ ತಂದೆಯ ಕೊಠಡಿಗೆ ಹೋದ. ಅಲ್ಲಿ ಗೋವಿಂದಪ್ಪನವರಿಗೆ ಜೋಂಪು ಹತ್ತಿತ್ತು. ಯಶೋದಮ್ಮನವರು ಅವನಿಗೆ ಮೌನವಾಗಿ ಕುಳಿತುಕೊಳ್ಳಲು ಸೂಚಿಸಿದರು.

ಎಷ್ಟೋ ಹೊತ್ತಾದ ಮೇಲೆ ಊಟಕ್ಕೆ ಕರೆಬಂದಿತು. ಇಬ್ಬರು ವೈದ್ಯರು ಹಾಗೂ ಲಲಿತೆಯೊಂದಿಗೆ ಕುಳಿತು ಊಟಮಾಡಿದ.

ಊಟ ಮುಗಿದ ಮೇಲೆ ಲಲಿತೆ ಮಾತನಾಡಿದಳು,

"ಅಣ್ಣ ನಾಳೆ ಬೆಳಿಗ್ಗೆ ಹೊರಡುವಿಯಂತೆ ಊರಿಗೆ, ಹೌದೇ ?"

"ಹೌದು, ಲಲಿತಾ, ನಿನ್ನ ಅತ್ತಿಗೆ ಮತ್ತು ಅಳಿಯಂದಿರನ್ನು ಇಲ್ಲಿಗೆ ಕರೆತರಬೇಕೆಂದು ಅಪ್ಪನ ಅಪ್ಪಣೆಯಾಗಿದೆ."

"ಈಗಲೀಗ ಅಪ್ಪ ಅಪ್ಪಣೆ ಮಾಡುವುದಿಲ್ಲ. ಎಷ್ಟು ಮೃದುವಾಗಿ ಬಿಟ್ಟಿದ್ದಾರೆ, ನೀನೇ ನೋಡುವೆ." ಎಂದಳು ಲಲಿತೆ, "ಮಾಲತಿ ನನ್ನನ್ನು ಎಂದಾದರೂ ಜ್ಞಾಪಿಸಿಕೊಳ್ಳುತ್ತಾಳೆಯೇನಣ್ಣ ?"

"ಅದೇನೋ ನನಗೆ ತಿಳಿಯದು ಲಲಿತ. ಆದರೆ "ಅಮ್ಮ, ಲಲಿತೆ ಕೂಡ ನನ್ನನ್ನು ಮರೆತಿದ್ದಾರೆ" ಎಂದು ನಾನು ಕೊರಗಿದಾಗಲೆಲ್ಲ, "ಎಂದಿಗೂ ಅವರು ಮರೆಯುವುದಿಲ್ಲ. ಒಂದಲ್ಲ ಒಂದು ದಿನ ಬಂದು ನಮ್ಮನ್ನು ನೋಡುತ್ತಾರೆ" ಎನ್ನುತ್ತಿದ್ದಳು, ನಿನ್ನಲ್ಲಿ ಅವಳಿಗೆ ಅಪಾರವಾದ ನಂಬಿಕೆಯಿದೆ, ಲಲಿತಾ"

"ನೀನೂ ಬೆಂಗಳೂರಿಗೆ ಈಗ ಬರುವಿಯೇನು ಲಲಿತ?" ನಾರಾಯಣ ಹೇಳಿದ, "ಈಗಲೂ ಬೇಕಾದರೆ ಇನ್ನೊಂದು ಟಿಕೇಟನ್ನು ಕಾದಿರಿಸಬಹುದು"

"ಬೇಡ, ಬೇಡ. ನೀನು ಹೋಗಿ ಅವರನ್ನು ಕರೆದುಕೊಂಡು ಬಾ. ನಾನು ಅಪ್ಪನನ್ನು ಬಿಟ್ಟು ಈಗ ಎಲ್ಲೂ ಹೋಗುವುದಿಲ್ಲ"

"ನನಗಿಂತ ನೀನೇ ವಾಸಿ ಲಲಿತಾ"

"ಹೋಗಣ್ಣ. ಈಗ ನನ್ನನ್ನು ಹೊಗಳಿ ಸೋಲಿಸಬೇಡ. ಮಾಲತಿ ಬರಲಿ, ನಿಮ್ಮಿಬ್ಬರ ಜೊತೆಯಲ್ಲಿ ಒಟ್ಟಿಗೆ ಜಗಳವಾಡುತ್ತೇನೆ" ಎಂದಳು ಲಲಿತ.

ಲಲಿತೆ ತನ್ನ ತಂದೆಯ ಎದುರಿಗೆ ಗೀತೆಯನ್ನು ಓದಲು ಹೋಗ ಬೇಕಾದಾಗ ನಾರಾಯಣನನ್ನೂ ಕರೆದುಕೊಂಡು ಹೋದಳು.

"ಭೇಷ್ ಲಲಿತಾ, ಪುರಾಣ ಹೇಳಬಹುದು ನೀನು ಇನ್ನುಮೇಲೆ. ನಮ್ಮ ಹರಿಕಥೆಯ ಕೃಷ್ಣದಾಸರಂತೆಯೇ ಮಾತನಾಡುತ್ತೀ ಈಗ" ಎಂದು ನಾರಾಯಣ ಅವಳನ್ನು ಹಾಸ್ಯಮಾಡಿದ.

ಒಂದು ದಿನ ಒಂದು ನಿಮಿಷದಂತೆ ಕಳೆದು ಹೋಯಿತು, ನಾರಾಯಣನಿಗೆ. ಮರುದಿನ ಬೆಳಗ್ಗೆ ಅವನು ಹೊರಟು ನಿಂತಾಗ ಲಲಿತೆಗೆ ಅವನನ್ನು ಬೀಳ್ಕೊಡಲು ಮನಸ್ಸೇ ಇಲ್ಲ,

"ಅಣ್ಣ ಆದಷ್ಟು ಬೇಗ ಬಂದುಬಿಡು. ನಿನಗೆ ಹೇಳಬೇಕಾದುದು ಎಷ್ಟೋ ಇದೆ" ಎಂದು ಬಾಗಿಲವರೆಗೂ ಬಂದು ಹೇಳಿದಳು.

ಯಶೋದಮ್ಮ ಹಾಗೂ ಗೋವಿಂದಪ್ಪನವರು ಅವನಿಗೆ ಆಶೀರ್ವಾದವನ್ನು ಮಾಡಿ ಕಳುಹಿಸಿದರು,

"ಅಲ್ಲಿ ಏನೇನು ಮಾಡಬೇಕೋ ಎಲ್ಲ ಮಾಡಿ ಬಾ ಮಗು, ಸ್ವಲ್ಪ ನಿಧಾನವಾದರೂ ಚಿಂತೆಯಿಲ್ಲ. ಇಷ್ಟು ದಿನವೇ ಕಾದೆವಂತೆ. ಇನ್ನು ನಾಲ್ಕು ದಿನಗಳಲ್ಲಿ ಏನಾಗುತ್ತದೆ?"

ವಿಮಾನವನ್ನು ಹತ್ತುವವರೆಗೂ ನಾರಾಯಣ ನಿಶ್ಚಿಂತೆಯಿಂದಲೇ ಇದ್ದ. ವಿಮಾನ ನಿಲ್ದಾಣದಿಂದ ಹೊರಟಮೇಲೆ ಅವನಿಗೆ ಯೋಚನೆ

ಬಂದಿತು, "ಊರಿಂದ ಬಂದು ಎಷ್ಟು ದಿನಗಳಾಗಿ ಹೋದುವು! ಮಾಲತಿ ಬಹಳ ಚಿಂತಿಸುತ್ತಿರಬಹುದು. ನಾನು ನೀಲಗಿರಿಗೆ ಹೋಗುವಾಗ ಅವಳಿಗೆ ಸ್ಪಷ್ಟವಾಗಿ ಎಷ್ಟು ದಿನಗಳ ಮಟ್ಟಿಗೆ ಹೋಗುತ್ತೇನೆ ಎಂದು ಹೇಳಿ, ವಿಳಾಸವನ್ನು ಕೊಟ್ಟು ಬರಬೇಕಾಗಿತ್ತು. ಮರುಕ್ಷಣ ಅವನಿಗೆ ನೀರಜೆಯ ನೆನಪು ಬಂದಿತು, "ಅಥವಾ ಮಾಲತಿ ಅಷ್ಟು ಚಿಂತಿಸದೆಯೇ ಇರಬಹುದು. ಅವಳು ಸ್ವಭಾವತಃ ಯಾರನ್ನೂ ತುಂಬ ಹಚ್ಚಿಕೊಳ್ಳು ವುದಿಲ್ಲ ನೀರಜೆಯಂತೆ. ಮೊದಲಿನಿಂದ ಸ್ವತಂತ್ರವಾಗಿ ಇದ್ದು ಒಬ್ಬರ ಮೇಲೆಯೂ ಭಾರ ಹಾಕದೆ ಇರಬೇಕೆಂದೇ ಅವಳ ಇಚ್ಛೆ. ನೀರಜೆಯಂತೆ ಅವಳು ನನಗಾಗಿ ಎಂದೂ ಒದ್ದಾಡಿಲ್ಲ. ಪಾಪ! ನೀರಜ! ಅವಳಂಥ ಸುರದ್ರೂಪಿ, ಅನುಕೂಲಸ್ಥರ ಮನೆಯ ಹುಡುಗಿಗೆ ವರ ಸಿಗುವುದು ಬಹಳ ಸುಲಭ. ಎಲ್ಲರನ್ನೂ ಬಿಟ್ಟು ನನಗಾಗಿ ಇಷ್ಟು ಒದ್ದಾಡಿಕೊಳ್ಳು ತ್ತಾಳೆ. ನನ್ನನ್ನು ಬಿಟ್ಟಿರಬೇಕೆಂದರೆ ಅವಳಿಗೆ ಎಷ್ಟು ಸಂಕಟ......"

ನಾರಾಯಣ ನಾಲ್ಕಾರು ದಿನಗಳ ಮಟ್ಟಿಗೆ ನೀಲಗಿರಿಗೆ ಹೋಗು ತ್ತೇನೆಂದು ಹೇಳಿದ್ದು ಮಾಲತಿಗೆ ಸ್ವಲ್ಪವೂ ಬೇಸರಕ್ಕೆ ಕಾರಣವಾಗಲಿಲ್ಲ. ಏಕೆಂದರೆ ಮರುದಿನವೇ ಅವಳ ಉಪಾಧ್ಯಾಯಿನಿಯರ ಶಿಕ್ಷಣ ಶಿಬಿರ ಪ್ರಾರಂಭವಾಗುವುದೆಂದು ಹೇಳಿದ್ದರು. ಇತ್ತ ನಾರಾಯಣ ಹೊರಟು ಹೋದ ಮೇಲೆ ಅವಳಿಗೆ ತಿಳಿಯಿತು. ಶಿಕ್ಷಣ ಶಿಬಿರವೂ ಇಲ್ಲ ಏನೂ ಇಲ್ಲವೆಂದು. ಅದೊಂದು ಯೋಜನೆ ಮುಖ್ಯೋಪಾಧ್ಯಾಯಿನಿಯವರ ಮನಸ್ಸಿನಲ್ಲಿ ರೂಪುಗೊಂಡಿತ್ತು. ಆದರೆ ಅವರು ಅದನ್ನು ಮೇಲಧಿಕಾರಿ ಗಳಿಗೆ ತಿಳಿಸಿದಾಗ ಅವರು ಈ ವರ್ಷ ಅದಕ್ಕೆಲ್ಲಾ ಹಣ ಒದಗಿಸಲಾಗು ವುದಿಲ್ಲ, ಮುಂದಿನ ವರ್ಷಕ್ಕೆ ಬೇಕಾದರೆ ನೋಡೋಣವೆಂದರು.

ಮಾಲತಿಗೆ ಈ ವರ್ತಮಾನವನ್ನು ಕೇಳಿ ಸಂತೋಷವೇ ಆಯಿತು. ಸಧ್ಯ ಇನ್ನು ರಜವನ್ನು ಹಾಯಾಗಿ ಕಳೆಯಬಹುದು ಎಂದುಕೊಂಡಳು.

ಈಗೀಗ ಏನೂ ಕೆಲಸ ಮಾಡದೆ ಕುಳಿತಿರುವುದೆಂದರೆ ಮಾಲತಿಗೆ ಬಹಳ ಕಷ್ಟ. ತಾಯಿ ಮಗಳು ಇಬ್ಬರೂ ಮಕ್ಕಳಿಗೆ ವರ್ಷಕ್ಕೆ ಬೇಕಾಗು

ವಷ್ಟು ಬಟ್ಟೆಗಳನ್ನು ಹೊಲಿದು ಸಿದ್ಧಮಾಡಿಟ್ಟುಕೊಳ್ಳಲು ಮನಸ್ಸು ಮಾಡಿದರು.

"ಅವರು ಊರಿಗೆ ಬರುತ್ತಲೇ ಬಟ್ಟೆಯನ್ನು ಕೊಂಡುಕೊಳ್ಳೋಣ ಅದುವರೆಗೆ ಏನು ಕೆಲಸ ಮಾಡುವುದೂ ಬೇಡಮ್ಮ. ಮಕ್ಕಳೊಡನೆ ಆಟವಾಡಿಕೊಂಡು ಇರುತ್ತೇನೆ" ಎಂದು ಹೇಳಿದಳು ಮಾಲತಿ.

ಹಾಗೆಯೇ ನೀನೂ ಒಂದೆರಡು ಸೀರೆಗಳನ್ನು ತೆಗೆದುಕೋ. ಒಂದೂವರೆ, ಎರಡು ವರ್ಷಗಳಿಂದ ಅಳಿಯಂದಿರು ನಿನಗೆ ಮನೆಯಲ್ಲಿ ಉಡುವ ಸೀರೆ ತಂದಿಲ್ಲ."

"ಸರಿ" ಎಂದಳು ಮಾಲತಿ.

ಹಾಗೇ ಅವಳಿಗೆ ಒಂದು ವಿಷಯ ಗಮನಕ್ಕೆ ಬಂದಿತ್ತು. ಈಚೀಚೆಗೆ ನಾರಾಯಣ ಹಾಲಿನವನಿಗೆ ಮನೆಯ ಮಾಲೀಕರಿಗೆ ಬಾಡಿಗೆ ಇವೆರಡಕ್ಕೆ ಮಾತ್ರ ಕೊಟ್ಟುಬಿಟ್ಟು ಉಳಿದ ತನ್ನ ಸಂಪಾದನೆಯನ್ನೆಲ್ಲಾ ತಾನೇ ಇಟ್ಟುಕೊಳ್ಳುತ್ತಿದ್ದ. ಮನೆಯ ಉಳಿದ ಎಲ್ಲ ಖರ್ಚಿಗೂ ಮಾಲತಿಯೇ ಕೊಡಬೇಕಾಗಿಬಂದು ಅವಳಿಗೆ ಬಟ್ಟೆಬರೆ ಕೊಂಡು ಕೊಳ್ಳಲು ಏನೂ ಉಳಿಯುತ್ತಿರಲಿಲ್ಲ.

"ಸ್ವಲ್ಪ ದುಡ್ಡು ಉಳಿಸಲು ಯತ್ನಿಸುತ್ತಿದ್ದಾರೆಯೇನೋ" ಎಂದು ಕೊಂಡು ಇದ್ದಳು ಅವಳು.

ನಾಲ್ಕಾರು ದಿನಗಳು ಕಳೆದುವು. ನಾರಾಯಣ ಬರಲಿಲ್ಲ. ಒಂದು ವಾರ ಕಳೆಯಿತು. ಏನು ಅವನ ಸುದ್ದಿಯೇ ಇಲ್ಲ. ಮಾಲತಿಗೆ ಯೋಚನೆ ಪ್ರಾರಂಭವಾಯಿತು. ನಾರಾಯಣ ಎಷ್ಟು ಧಾರಾಳತನದಿಂದ ಕೈಯಲ್ಲಿದ್ದು ದನ್ನೆಲ್ಲಾ ಖರ್ಚು ಮಾಡುತ್ತಿದ್ದ ಎಂದು ಅವಳಿಗೆ ಗೊತ್ತಿತ್ತು. ದೂರ ಪ್ರದೇಶಕ್ಕೆ ಹೋಗಿ ಅಲ್ಲಿ ಬರಿಗೈ ಮಾಡಿಕೊಂಡು ನಿಂತುಬಿಟ್ಟಿದ್ದಾ ರೇನೋ ಎಂದು ಆತಂಕವಾಗುತ್ತಿತ್ತು ಅವಳಿಗೆ.

ಇದರ ಮಧ್ಯೆ ರಾಮಚಂದ್ರನಿಗೆ ಸೀತಾಳ ಸಿಡುಬು ಎದ್ದಿತು. ಅದು ಸೀತಾಳ ಸಿಡುಬು ಎಂದು ಮೊದಲು ಮಾಲತಿಗೆ ಗೊತ್ತಾಗಲಿ ಅವನಿಗೆ ಸೆಖೆಯಿಂದ ಗುಳ್ಳೆಗಳು ಎದ್ದಿವೆ ಎಂದು ಚೆನ್ನಾಗಿ ಎಣ್ಣೆ ಹಚ್ಚಿ

ನೀರು ಹಾಕಿದಳು, ಒಳಗಿನ ಸೋಂಕಿಗೆ ಎತ್ತಿಹಾಕಿದಂತಾಯಿತು. ಚೆನ್ನಾಗಿ ಜ್ವರ ಬಂದು, ಮೈಮೇಲೆಲ್ಲಾ ಸ್ವಲ್ಪ ಜಾಗವೂ ಬಿಡದಂತೆ ಗುಳ್ಳೆ ಹೊಯ್ದುವು. ಮಾಲತಿ ಹೆದರಿ ಬಿಟ್ಟಳು,

''ಅಮ್ಮಾ, ದೊಡ್ಡ ಸಿಡುಬಿನಂತೆಯೇ ಇದೆಯಲ್ಲಮ್ಮ? ಇವರು ಕೂಡ ಊರಿನಲ್ಲಿಲ್ಲ. ನಾನೇನು ಮಾಡಲಿ?'' ಎಂದು ತಾಯ ಬಳಿ ಪೇಚಾಡಿದಳು.

ಅವರು ಹೇಳೇ ಹೇಳಿದರು,

"ಮಾಲಾ ಇದು ಜೋರಾಗಿ ಎದ್ದಿರುವ ಸೀತಾಳ ಸಿಡುಬು ಅಷ್ಟೆ. ದೊಡ್ಡ ಸಿಡುಬಲ್ಲ. ನೀನು ಯೋಚನೆ ಮಾಡಬೇಡ. ನೀನು ಸುಮ್ಮನೆ ಅಡಿಗೆ ಕೆಲಸ ಮಾಡಿಕೊಂಡು ಲಕ್ಷ್ಮಣನನ್ನು ನೋಡಿಕೋ. ನನಗೆ ಇದಕ್ಕೆ ರೋಗಿಯನ್ನು ಹೇಗಿಡಬೇಕು ಎಂಬುದು ಗೊತ್ತು" ಎಂದು. ಆದರೂ ಮಾಲತಿಗೆ ಧೈರ್ಯವೇ ಇಲ್ಲ.

ಇದು ಸಾಲದೆಂದು ಲಕ್ಷ್ಮಣನಿಗೆ ಇದ್ದಕ್ಕಿದ್ದಂತೆ ಜ್ವರ ಪ್ರಾರಂಭ ವಾಯಿತು. "ಮಗುವಿಗೆ ವಿಷಮ ಶೀತಜ್ವರವಮ್ಮ, ಎಚ್ಚರಿಕೆ" ಎಂದರು ಆಸ್ಪತ್ರೆಯ ವೈದ್ಯರು, "ಇದಕ್ಕೆ ದೊಡ್ಡ ಮಗುವಿನಿಂದ ಸೋಂಕು ತಗಲೀತು"

"ಸದ್ಯ ಇವರು ಬೇಗ ಬಂದು ಬಿಟ್ಟರೆ...."ಎಂದು ಮಾಲತಿ ಚಿಂತಿಸುತ್ತಿದ್ದಳು.

"ಅವರು ಬಂದೇನು ಮಾಡುತ್ತಾರೆ ಮಾಲಾ? ಇದು ನಮ್ಮ ತಲೆಗೆ ಕಟ್ಟಿದ್ದು. ನಮ್ಮ ಕೈಲಾದಷ್ಟು ನೋಡಿಕೊಳ್ಳೋಣ. ಬೇಗ ವಾಸಿಯಾದೀತು. ಖಾಯಿಲೆ ಕಸಾಲೆಯಿಲ್ಲದೆ ಬೆಳೆಯುವ ಮಕ್ಕಳೇ ಇಲ್ಲ" ಎಂದು ಅವಳನ್ನು ಸಮಾಧಾನಗೊಳಿಸುತ್ತಿದ್ದರು ವನಜಮ್ಮ.

ಎರಡು ವಾರಗಳು ಕಳೆಯುತ್ತ ಬಂದುವು. ರಾಮಚಂದ್ರ ಸ್ವಲ್ಪ ಚೇತರಿಸಿಕೊಂಡಂತೆ ತೋರಿತು.

"ಈಗ ಇನ್ನೂ ಎಚ್ಚರಿಕೆಯಾಗಿರಬೇಕು ಮಾಲಾ, ಸಿಪ್ಪೆ ಸುಲಿಯುವಾಗಲೇ ಸಿಡುಬಿನ ಸೋಂಕು ತಗಲುವುದು." ಎಂದು ವನಜಮ್ಮ ಹೇಳುತ್ತಿದ್ದರು.

ಹಾಗೆ ಹೇಳಿದ ದಿನ ಮಧ್ಯಾಹ್ನವೇ ಲಕ್ಷ್ಮಣನಿಗೂ ಮೈಯೆಲ್ಲ ಕೆಂಪು ಕಂಡಿತು. ಮಾಲತಿಗಿಂತ ವನಜಮ್ಮನೇ ಗಾಬರಿಬಿದ್ದರು,

"ಮಾಲಾ, ಅಳಿಯಂದಿರು ಎಲ್ಲಿರುತ್ತಾರೆ ಎಂದು ತಿಳಿದುಕೊಳ್ಳದೆ ಹೇಗೆ ಬಿಟ್ಟೆ ನೀನು? ಈಗ ಏನಾದರೂ ಆದರೆ ಏನು ಗತಿ?"

ಮಾಲತಿಯೇನು ಮಾಡುವಳು?

"ಅಮ್ಮಾ, ಅವರು ಅಲ್ಲಿ ಆರೋಗ್ಯವಾಗಿದ್ದಾರೆ ಎಂಬ ಭರವಸೆಯಾದರೂ ನನಗೆ ಬಂದರೆ ಸಾಕು. ಏತಕ್ಕೆ ಅವರು ಹೀಗೆ ಕಾಗದ ಬರೆಯದೆ ಇದ್ದಾರೆ ಸುಮ್ಮನೆ!" ಎಂದು ಚಡಪಡಿಸುತ್ತಿದ್ದಳು.

ಸ್ವಲ್ಪ ಹೊತ್ತಾದ ಮೇಲೆ ವನಜಮ್ಮನವರಿಗೆ ನೆನಪು ಬಂದಿತು,

"ಮಾಲಾ, ಆ ರಾಘವಯ್ಯನವರ ಮನೆಯ ಹುಡುಗರೂ ನೀಲಗಿರಿಗೆ ಹೋಗಿದ್ದಾರೆಯಲ್ಲವೇ? ಅವರ ಮನೆಗೆ ಹೋಗಿ ವಿಚಾರಿಸಿದರೆ ಅಳಿಯಂದಿರ ವಿಷಯ ಏನಾದರೂ ತಿಳಿಯಬಹುದು."

"ನಿಜವಮ್ಮಾ, ನನಗೆ ಏತಕ್ಕೆ ಮೊದಲೇ ಇದು ತೋಚಲಿಲ್ಲ! ಅಮ್ಮಾ, ನೀನು ಕೊಂಚ ಹೊತ್ತು ಇವರಿಬ್ಬರನ್ನೂ ಸುಧಾರಿಸಬಲ್ಲೆಯಾದರೆ ನಾನು ಈಗಲೇ ಅವರ ಮನೆಗೆ ಹೋಗಿ ಬರುತ್ತೇನೆ. ಇಲ್ಲೇ ಹತ್ತಿರದಲ್ಲಿಯೇ ಇದೆ ಅವರ ಮನೆ"

"ಆಗಲಿ, ಬೇಗ ಹೋಗಿ ಬಾ" ಎಂದರು ವನಜಮ್ಮ.

ಮಾಲತಿ ರಾಘವಯ್ಯನವರ ಮನೆಗೆ ಹೋದಾಗ, ಅವರು ಅವರ ಪತ್ನಿ ರಾಜಮ್ಮ ಇಬ್ಬರೂ ಹೊರಗಡೆ ಕುಳಿತು ಮಾತನಾಡುತ್ತಿದ್ದರು. ಮಾಲತಿ ಹೋದದನ್ನು ಅವರು ಗಮನಿಸಿರಬೇಕು, ಆದರೂ ತೀರ ಹತ್ತಿರ ಬರುವವರೆಗೆ ಅವಳನ್ನು ಕಾಣದಂತೆ ತಮ್ಮ ಮಾತಿನಲ್ಲಿಯೇ ತಾವು ಇದ್ದರು. ಬಳಿಕ ರಾಜಮ್ಮ ತಲೆಯೆತ್ತಿ ನೋಡಿ, ಅವಳನ್ನು ಕರೆದರು,

"ಬನ್ನಿ ಒಳಕ್ಕೆ"

ಅವರ ಕರೆಯಲ್ಲಿ ಆದರವೂ ಇರಲಿಲ್ಲ, ಬೇಸರವೂ ಇರಲಿಲ್ಲ. ಆದರೆ ಮಾಲತಿಗೆ ಅದ್ಯಾವುದೂ ಬೇಕಾಗಿರಲಿಲ್ಲ. ಅವರು ಕೈ ತೋರಿದ ಕಡೆ ಕುಳಿತುಕೊಂಡು ಕೇಳಿದಳು,

"ನಿಮ್ಮ ಲೀಲಾ ಹಾಗೂ ಜನಾರ್ಧನರು ನೀಲಗಿರಿಯಲ್ಲಿಯೇ ಇದ್ದಾರೇನು ಇನ್ನೂ ?"

"ಹುಂ, ಏತಕ್ಕೆ ?" ರಾಜಮ್ಮ ಪತಿಯ ಕಡೆಗೊಂದು ಬಾರಿ ನೋಡಿ ಸಹಾಸ್ಯವಾಗಿ ಕೇಳಿದರು.

"ಅವರು ನಮ್ಮ ಮನೆಯವರನ್ನು ಯಾವಾಗಲಾದರೂ ನೋಡಿದ್ದೇವೆಂದು ಬರೆದಿದ್ದಾರೆಯೆ ?" ಆತುರದಿಂದ ಮಾಲತಿ ಕೇಳಿದಳು.

"ಏನಮ್ಮ, ಏನಾದರೂ ಪತ್ತೆದಾರಿ ಕೆಲಸಕ್ಕೆ ಬಂದಿದ್ದೀರೇನು ?" ಎಂದು ರಾಘವಯ್ಯನವರು ಕೊಂಚ ಗಡುಸಾಗಿಯೇ ಕೇಳಿದರು.

ಮಾಲತಿ ಅವರ ಪ್ರಶ್ನೆಯಿಂದ ಕಕ್ಕುಬಿಕ್ಕಾದಳು. ರಾಜಮ್ಮನವರಿಗೆ ಅವಳು ಕಣ್ಣು ಕಣ್ಣು ಬಿಡುವುದನ್ನು ನೋಡಿ ನಗುಬಂದಿತು.

"ಸುಮ್ಮನಿರಿ, ಬಂದವರೊಡನೆ ಹೀಗೇ ಮಾತನಾಡುವುದು ?" ಎಂದು ಪತಿಗೆ ದಬಾಯಿಸಿ ಅವರು ಮಾಲತಿಗೆ ಹೇಳಿದರು, "ಏನು ಹೇಳಬೇಕೆಂದು ಇದ್ದೀರೋ ಅದನ್ನು ಸರಿಯಾಗಿ ಸ್ಪಷ್ಟವಾಗಿ ಹೇಳೀಮ್ಮ ಇಲ್ಲದಿದ್ದರೆ ನೀವೊಂದು ಹೇಳುವುದು, ಅದಕ್ಕೆ ನಾವು ಒಂದು ಅರ್ಥ ಕಲ್ಪಿಸುವುದು ಆದೀತು"

ಮಾಲತಿಗೆ ಅವರ ಮಾತಿನ ರೀತಿಯನ್ನು ನೋಡಿ ಸ್ವಲ್ಪ ಸರಿ ಹೋಯಿತು. ನಿಧಾನವಾಗಿ ಹೇಳಿದಳು,

"ಇವರು ಬಹಳ ಅವಸರದಲ್ಲಿ ಹೊರಟರು ನೀಲಗಿರಿಗೆ, ನಿಮ್ಮ ಹುಡುಗರು ಹೊರಟ ದಿನವೇ. ನಾನೂ ಅವರನ್ನು ಅಲ್ಲಿಯ ಅವರ ವಿಳಾಸವೇನೆಂದು ಕೇಳಲಿಲ್ಲ. ಅವರೂ ಮರೆತುಬಿಟ್ಟರು. ನಾಲ್ಕು ದಿನಗಳಲ್ಲಿ ಹಿಂದಿರುಗುವೆನೆಂದು ಹೇಳಿದವರು, ಇವತ್ತಿನವರೆಗೂ ಬಂದಿಲ್ಲ ಒಂದು ಕಾಗದ ಕೂಡ ಬರೆದಿಲ್ಲ. ಮನೆಯಲ್ಲಿ ಮಕ್ಕಳಿಗೆ ಮೈಸರಿಯಿಲ್ಲ,

ಅವರು ತಕ್ಷಣ ಬರದಿದ್ದರೆ..........." ಹೇಳಹೇಳುತ್ತ ಮಾಲತಿಗೆ ಅಳು ಬಂದುಬಿಟ್ಟಿತು.

"ಹೇಳದೇ ಹೊರಟು ಹೋದರೆ? ಈ ಗಂಡಸರ ಬುದ್ಧಿಯೇ ಅಷ್ಟು. ಅವರನ್ನು ನೆಚ್ಚಿದರೆ ಉಪಯೋಗವಿಲ್ಲವಮ್ಮ. ಈಗ........" ರಾಜಮ್ಮ ತಲೆಯಲ್ಲಾಡಿಸಿದರು ಅನುಕಂಪದಿಂದ.

"ನೀವು ಲೀಲೆಗೆ........?" ಅಳುವನ್ನು ತಡೆದುಕೊಳ್ಳಲು ಯತ್ನಿಸುತ್ತ ಮಾಲತಿ ಕೇಳಿದಳು.

"ಅದು ಗೊತ್ತಿಲ್ಲವಲ್ಲಾ? ಏನು ಮಾಡುವುದು?"

"ಓ? ಹಾಗಾದರೆ ಇನ್ನು ಬರುತ್ತೇನೆ" ಮಾಲತಿ ಎದ್ದು ನಿಧಾನವಾಗಿ ಹಿಂದಿರುಗಿ ಹೊರಟಳು.

ಅವಳು ಹತ್ತು ಹೆಜ್ಜೆ ಹೋಗುವುದರಲ್ಲಿ ರಾಘವಯ್ಯನವರ ಧ್ವನಿ ಅವಳ ಕಿವಿಗೆ ಬಿದ್ದಿತು,

"ತಾಯೀ ಸ್ವಲ್ಪ ತಡೆಯಿರಿ"

ಮಾಲತಿ ಅವರು ಬರುವುದನ್ನೇ ನೋಡುತ್ತ ಕ್ಷಣಕಾಲ ನಿಂತಳು ಅಲ್ಲೇ, ರಾಜಮ್ಮ ಬಾಗಿಲಲ್ಲಿ ಕಾಣಲಿಲ್ಲ. ಒಳಕ್ಕೆ ಹೋಗಿರಬೇಕು, ರಾಘವಯ್ಯನವರು ಬೇಗ ಬೇಗ ಬರುತ್ತಿದ್ದರು.

ಅವಳ ಜೊತೆಗೆ ಬರುತ್ತಲೇ ರಾಘವಯ್ಯನವರು ಹೇಳಿದರು,

"ನಡೆಯಿರಿ, ನಿಮ್ಮ ಮನೆಯವರೆಗೂ ನಾನೂ ಬರುತ್ತೇನೆ."

ಸುಪ್ತಾವಸ್ಥೆಯಲ್ಲಿರುವವಳಂತೆ ಮಾಲತಿ ಮುಂದೆ ಹೆಜ್ಜೆ ಹಾಕಿದಳು. ಮನೆಯಿಂದ ಕೊಂಚ ದೂರ ಹೋದ ಮೇಲೆ ರಾಘವಯ್ಯನವರು ಹೇಳಿದರು,

"ತಾಯೀ, ನನಗೆ ಯಾರನ್ನು ನಂಬುವುದೋ ತಿಳಿಯದು. ಆದರೂ ನಿಮ್ಮ ದುಃಖಿತವಾದ ಮುಖವನ್ನು ನಾನು ನೋಡಲಾರೆ. ಏಕಮ್ಮಾ ನಿನ್ನ ಪತಿಯನ್ನು ನೀನು ಸರಿಯಾಗಿ ನೋಡಿಕೊಳ್ಳುವುದಿಲ್ಲ?"

ಮಾಲತಿ ಮತ್ತೆ ಅಪ್ರತಿಭಳಾದಳು,

"ನೀವು ಏನು ಹೇಳುತ್ತಿದ್ದೀರಿ ಎಂದು ನನಗೆ ತಿಳಿಯುವುದಿಲ್ಲ. ಅವರನ್ನು ನೋಡಿಕೊಳ್ಳುವುದಿಲ್ಲವೇ? ಏತಕ್ಕೆ ಇಂತಹ ಮಾತು!"

ರಾಘವಯ್ಯನವರು ಅವಳ ಮುಖವನ್ನು ಸೂಕ್ಷ್ಮವಾಗಿ ನೋಡಿದರು.

"ಅದೇನೇ ಇರಲಿ. ನಾರಾಯಣ ನೀಲಗಿರಿಗೆ ಹೊರಟಿದ್ದು ನಮ್ಮ ಹುಡುಗರೊಡನೆ ಅದು ನಿನಗೆ ತಿಳಿಯದೇ?"

"ಹೌದೇ! ಮತ್ತೆ ರಾಜಮ್ಮನವರು—!"

"ಅದು ನನಗೂ ಅರ್ಥವಾಗುವುದಿಲ್ಲ. ಇಲ್ಲಿ ನಾರಾಯಣ ಸದಾ ನೀರಜೆಯ ಹಿಂದೆ ಮುಂದೆ ಅಲೆಯುತ್ತಿದ್ದ. ಒಂದು ಬಾರಿ ನನ್ನ ಹೆಂಡತಿಯೂ ಹೇಳುತ್ತಿದ್ದಳು, ನೀರಜೆಯನ್ನು ನಾರಾಯಣ ಒಂದಿಲ್ಲ ಒಂದು ದಿನ ಮದುವೆಯಾಗುವನೆಂದು. ಹಾಗಾದರೆ ಮತ್ತೆ ಅವನ ತಂದೆ ಅವನನ್ನು ಮನೆಯೊಳಗೆ ಬರಲು ಅವಕಾಶ ಕೊಡುತ್ತಾರೆಯಂತೆ.

"ಓ!" ಎಂದಳು ಮಾಲತಿ. ಅವಳ ಮುಖ ಬಿಳಿಚಿಕೊಂಡು ಜೀವಕಳೆಯಿಂದ ಶೂನ್ಯವಾಯಿತು.

ರಾಘವಯ್ಯನವರು ಅದನ್ನು ನೋಡಿ ಬೆಚ್ಚಿಬಿದ್ದರು,

"ಆದರೆ ಹೆದರ ಬೇಡ ತಾಯೀ. ನಿನಗೆ ನೀರಜೆಗಿಂತ ಹೆಚ್ಚು ರೂಪವಿದೆ. ನಾನು ತಕ್ಷಣ ಲೀಲೆಗೆ ಬರೆಯುತ್ತೇನೆ. ಅವಳು ಸರಳ್ಳ ಪ್ರಾಮಾಣಿಕ ಹುಡಿಗೆ. ಅವಳು ನಾರಾಯಣನನ್ನು ಇಲ್ಲಿಗೆ ಕಳುಹಿಸುತ್ತಾಳೆ. ಇದರಲ್ಲಿ ನಿನಗೆ ಸಂಶಯ ಬೇಡ. ಅವನು ಬಂದ ಮೇಲಿನ ಕೆಲಸ ನಿನ್ನದು. ಮತ್ತೆ ಅವನು ಹುಚ್ಚಾಟಕ್ಕೆ ಬೀಳದಂತೆ ನೋಡಿಕೋ ಸಾಧ್ಯವಾದರೆ"

"ನಾನು—ನಾನು" ಎಂದು ತಡವರಿಸಿದಳು ಮಾಲತಿ.

ರಾಘವಯ್ಯನವರು ಅವಳ ಕರುಣಾಜನಕ ಅವಸ್ಥೆಯಿಂದ ವ್ಯಥಿತರಾದರು,

"ತಾಯೀ ನಿನ್ನನ್ನು ನೋಡಿದರೆ ನಮ್ಮ ಮಾವನವರು ಬರೆಯುವಂತೆ ನೀನಿಲ್ಲವೆಂದು ನನಗೆ ಅನ್ನಿಸುತ್ತದೆ. ನೀನಾಗಿ ಪುಸಲಾಯಿಸಿ

ಯಾರನ್ನಾದರೂ ದಾರಿ ತಪ್ಪಿಸುವುದಿರಲಿ, ಯಾರಾದರೂ ಆ ರೀತಿ ಇರಬಹುದು ಎಂದು ಕೂಡ ನಿನಗೆ ತಿಳಿದಿರಲಾರದು. ಯೋಚನೆ ಮಾಡ ಬೇಡಮ್ಮಾ, ಧೈರ್ಯವಾಗಿರು. ಈ ಸಂದರ್ಭದಲ್ಲಿ ನಾನು ಏನು ಮಾಡ ಲಾಗುವುದೋ ಎಲ್ಲವನ್ನೂ ಮಾಡುತ್ತೇನೆ''

ಮಾಲತಿ ತಲೆತಗ್ಗಿಸಿಕೊಂಡು ಮೌನವಾಗಿ ನಡೆಯುತ್ತಲಿದ್ದಳು. ರಾಘವಯ್ಯನವರು ಅವಳ ಕಡೆ ನೋಡಿದರು,

"ನಾನಿನ್ನು ಬರಲೇ ಅಮ್ಮ?"

ಮಾಲತಿ ಮಾತನಾಡಲಿಲ್ಲ. ರಾಘವಯ್ಯನವರು ಒಮ್ಮೆ ನಿಟ್ಟುಸಿರು ಬಿಟ್ಟು "ಬರುತ್ತೇನಮ್ಮಾ. ಅಧೈರ್ಯದಿಂದ ಮಾತ್ರ ಕೈಕಾಲುಗೆಡಬೇಡ. ದೇವರಿದ್ದಾನೆ" ಎಂದು ಹೇಳಿ ಹಿಂದಿರುಗಿದರು.

ಮಾಲತಿ ಮನೆಗೆ ಬರುತ್ತಲೇ ಅವಳಿಗೆ ನಿಲ್ಲಲಾಗದಷ್ಟು ನಿಶ್ಶಕ್ತತೆ ತೋರಿಬಂತು. ಹೇಗೋ ಒಳಕ್ಕೆ ಪ್ರವೇಶಿಸಿ ಅಲ್ಲಿ ಕುಳಿತುಬಿಟ್ಟಳು.

"ಏನೂ ತಿಳಿಯಲಿಲ್ಲವೇ ಮಾಲಾ?" ಅವಳಿಗಾಗಿ ಕಾದಿದ್ದ ವನಜಮ್ಮ ಕೇಳಿದರು. ಮಾಲತಿ ತಲೆಯಲ್ಲಾಡಿಸಿದಳು.

ಅವಳಿಗೆ ಹತ್ತು ನಿಮಿಷಗಳಾದ ಮೇಲೆ ನೆನಪಿಗೆ ಬಂದಿತು,

"ಅಮ್ಮಾ ಮಗು ಹೇಗಿದೆ?"

"ಇದಕ್ಕೂ ಶೀತಾಳ ಪಿಡುಬೇ ಎದ್ದಿದೆ, ಮಾಲಾ"

ನಿಟ್ಟುಸಿರನ್ನು ಬಿಟ್ಟು ಮಾಲತಿ ಎದ್ದಳು,

"ನೀನು ಇನ್ನು ಸ್ವಲ್ಪ ವಿಶ್ರಮಿಸಿಕೋಮ್ಮ. ಮಕ್ಕಳನ್ನು ನಾನು ನೋಡಿಕೊಳ್ಳುತ್ತೇನೆ''

"ನೋಡಿಕೋ ಹಾಗಾದರೆ. ಇಬ್ಬರೂ ಮಲಗಿದ್ದಾರೆ. ಸೆಖೆ ತಡೆಯಲಿಕ್ಕೇ ಆಗದು. ನಾನು ಹೋಗಿ ಸ್ನಾನಮಾಡಿ ಏನಾದರೂ ಊಟಕ್ಕೆ ಮಾಡುತ್ತೇನೆ''

ವನಜಮ್ಮ ಎಲ್ಲ ಕೆಲಸಗಳನ್ನು ತೀರಿಸಿಕೊಂಡು ಬಂದಾಗಲೂ ಮಾಲತಿ ಅಲ್ಲಿಯೇ ಕುಳಿತು ಶೂನ್ಯದೃಷ್ಟಿಯಿಂದ ಗೋಡೆಯನ್ನು ನಿಟ್ಟಿಸಿ ನೋಡುತ್ತಿದ್ದಳು. ಅವರು ಅವಳ ತಲೆಯನ್ನು ನೇವರಿಸುತ್ತ ಹೇಳಿದರು,

"ಇಷ್ಟು ಯೋಚಿಸಿದರೆ ಆರೋಗ್ಯ ಕೆಟ್ಟು ಹಾಳಾಗುತ್ತೆ, ಮಾಲಾ. ಅಳಿಯಂದಿರು ಹೆಂಗಸಲ್ಲ. ಏನು ಸಂದರ್ಭವೋ ಇನ್ನೂ ಬಂದಿಲ್ಲ, ಬರುತ್ತಾರೆ. ಏತಕ್ಕೆ ಹೀಗೆ ತಲೆ ಕೆಡಿಸಿಕೊಳ್ಳುವೆಯಮ್ಮ ನೀನು ?"

ಮಾಲತಿ ತಲೆಯೆತ್ತಿ ತಾಯಿಯ ವಾತ್ಸಲ್ಯಪೂರ್ಣವಾದ ಮುಖವನ್ನು ನೋಡಿದಳು. ಅವರಿಗೆ ಅವಳ ಮುಖವನ್ನು ನೋಡಿ ಇನ್ನೂ ಸಂಕಟವಾಯಿತು,

"ಏಳು ಮಾಲಾ, ಮಕ್ಕಳು ಮಲಗಿರುವಾಗಲೇ ಒಂದು ತುತ್ತು ಊಟಮಾಡಿಬಿಡು" ಎಂದು ಅವಳನ್ನೆಬ್ಬಿಸಿದರು, "ಬೆಳಿಗ್ಗೆ ನೀನು ಎಲೆಯ ಮುಂದೆ ಕುಳಿತ ಶಾಸ್ತ್ರಮಾಡಿದೆ ಅಷ್ಟೆ. ಏಳಮ್ಮ"

ಮಾಲತಿಯ ಕಣ್ಣುಗಳಲ್ಲಿ ಅಶ್ರುಪ್ರವಾಹ ಉಕ್ಕಿತು,

''ಅಮ್ಮಾ ನೀನೊಬ್ಬಳಾದರೂ ನನ್ನನ್ನು ಬಿಟ್ಟುಹೋಗುವುದಿಲ್ಲ ಅಲ್ಲವೆ ? ''

"ಮಾಲಾ! ಮಾಲಾ!'' ಎಂದು ಅವರು ಅವಳನ್ನು ತಮ್ಮ ಬಳಿಗೆ ಸೆಳೆದುಕೊಂಡರು, ''ಇಷ್ಟಕ್ಕೇ ನೀನು ಹೀಗಾಡುವುದೇ! ಅಂಥಾದ್ದು ಏನೂ ಆಗಿಲ್ಲ ಮಾಲಾ. ರಾಮು ಈಗ ಹುಷಾರಾಗುತ್ತಿದ್ದಾನೆ. ಲಕ್ಷ್ಮಣನಿಗೆ ಹೆಚ್ಚು ಏಳುವುದಿಲ್ಲ........"

ತಾಯಿಯ ಭುಜದ ಮೇಲೆ ಮಾಲತಿ ಚೆನ್ನಾಗಿ ಅತ್ತುಬಿಟ್ಟಳು. ಅಳುತ್ತ ಅಳುತ್ತ ಅವಳ ಮನಸ್ಸಿನಲ್ಲಿ ಶಾಂತಿ ತಲೆದೋರಿತು. ಅರ್ಧ ಗಂಟೆಯ ಹೊತ್ತಿಗೆ ಅವಳಿಗೆ ದುಃಖ ಸ್ವಲ್ಪ ಹತೋಟಿಗೆ ಬಂದಿತು ಸರಿಯಾಗಿ ಕುಳಿತು ನಗಲು ಯತ್ನಿಸಿದಳು,

"ಅಮ್ಮಾ ಎಂಥಾ ಹುಚ್ಚು ಹುಡುಗಿ ನಿನಗೆ ಮಗಳಾಗಿ ಹುಟ್ಟಿದಳು! ನಿನಗೆ ಎಂಹತ ಕಷ್ಟದಲ್ಲೂ ಇಷ್ಟು ಸ್ಥೈರ್ಯ! ನನಗೆ ನೀನು ಬಳಿಯಲ್ಲಿದ್ದರೂ ಇಷ್ಟು ಹೇಡಿತನ!"

ಅವಳು ಸಮಾಧಾನಗೊಂಡಿದ್ದನ್ನು ನೋಡಿ ಅವರಿಗೆ ಹರ್ಷವಾಯಿತು,

"ನಾನೂ ಹೀಗೇ ಎಷ್ಟೋ ಬಾರಿ ನಡುಗಿಹೋಗಿ ದಿನವೆಲ್ಲಾ ಅಳುತ್ತ ಕಳೆದಿದ್ದೇನೆ ಮಾಲಾ. ಆದರೆ ಈಗ ನನಗೆ ಗೊತ್ತು ಎಲ್ಲಾದಕ್ಕೂ ಒಂದೊಂದು ಕಾಲಾವಧಿ ಉಂಟು ಎಂದು. ಇವತ್ತಿನ ಕಷ್ಟ ಇವತ್ತಿಗೆ ದೊಡ್ಡದು ಅಷ್ಟೆ. ಹುಂ, ಏಳಮ್ಮ ಇನ್ನು ಅಡಿಗೆ ಆರಿ ಅಕ್ಷತೆ ಯಾಗುತ್ತಿದೆ"

ಊಟಕ್ಕೆ ಕುಳಿತಮೇಲೆ ಮಾಲತಿಗೆ ತನ್ನ ಹಸಿವನ್ನು ನೋಡಿ ಆಶ್ಚರ್ಯವಾಯಿತು. ಮನಸ್ಸು ಇನ್ನೂ ಮುದುಡಿ ಹೋಗಿದ್ದರೂ ಸರಿಯಾಗಿ ಊಟವೇನೋ ಸೇರಿತು. ಇವಳು ಊಟ ಮುಗಿಸುವುದೇ ತಡ ರಾಮು ಎಚ್ಚರಗೊಂಡ. ಅವನಿಗೆ ಊಟಮಾಡಬೇಕೆಂದು ಇಚ್ಛೆ. ಆದರೆ ಅವನಿಗೆ ಗಂಜಿ ಹೊರತು ಇನ್ನೇನೂ ಕೊಡುತ್ತಿರಲಿಲ್ಲ ಇನ್ನೂ. ಈಗ ಅವನಿಗೆ ಒಳಗೆ ಊಟ ಮಾಡುತ್ತಿರುವ ಸುಳಿವು ಬಂದ ಕೂಡಲೇ ರಾಗ ತೆಗೆದ. ಮಾಲತಿ ಓಡಿಹೋಗಿ ಅವನನ್ನು ಎತ್ತಿಕೊಂಡು ಲಕ್ಷ್ಮಣ ಏಳುವುದಕ್ಕೆ ಮುಂಚೆ ಅಳು ನಿಲ್ಲಿಸಲು ನೋಡಿದಳು. ಆದರೆ ಅದು ಸಫಲವಾಗಲಿಲ್ಲ. ಲಕ್ಷ್ಮಣ ಎದ್ದುಬಿಟ್ಟ.

ಈ ಜೋಡಿ ಓಲಗದಲ್ಲಿ ಮಾಲತಿ ಅವಳ ಹೊಸ ಚಿಂತೆಯನ್ನು ಮರೆತಳು. ಅವರಿಬ್ಬರ ಹಸಿವನ್ನೂ ತಣಿಸಿ, ಮತ್ತೆ ಅವರನ್ನು ಸಂತಯಿಸಿ ನಿದ್ರೆಮಾಡಿಸುವ ವೇಳೆಗೆ ರಾತ್ರೆ ಒಂಭತ್ತು ಗಂಟೆಯಾಗಿ ಹೋಯಿತು. ಬಳಿಕ ತಾಯಿಗೆ ಈ ಸಮಾಚಾರವನ್ನು ಹೇಳೋಣವೆಂದು ಅವರನ್ನು ಹುಡುಕಿಕೊಂಡು ಹೋದಳು.

"ಮಕ್ಕಳು ಮಲಗಿವರೇ ಮಾಲಾ?" ಅವರು ಕೇಳಿದರು.

"ಹುಂ"

"ಹಾಗಾದರೆ ನೀನೂ ಮಲಗು ಹೋಗು. ಇನ್ನು ಸ್ವಲ್ಪ ಹೊತ್ತಿನಲ್ಲಿಯೋ ನಾನೂ ಬರುತ್ತೇನೆ"

"ಬೇಗ ಬಾಮ್ಮ. ನಿನಗೆ ಹೇಳಬೇಕಾದ ಒಂದು ಮಾತಿದೆ" ಎಂದು ಹೇಳಿ ಮಾಲತಿ ಹಿಂದಿರುಗಿ ಬಂದು ತಮ್ಮಿಬ್ಬರ ಹಾಸಿಗೆಗಳನ್ನೂ ಹಾಸಿ ಹಾಗೇ ಒಂದು ನಿಮಿಷ ಸುಮ್ಮನೆ ಮಲಗಿದಳು.

ವನಜಮ್ಮ ಬೇಗ ಬರಲಿಲ್ಲ. ಅವರು ಅಡಿಗೆ ಮನೆಯನ್ನು ತೊಳೆದು, ತೊಳೆದ ಪಾತ್ರೆಗಳನ್ನೆಲ್ಲಾ ಒರೆಸಿ ಬೋರಲು ಹಾಕಿ, ಒಂದೊಂದಾಗಿ ಎಲ್ಲ ಕೆಲಸವನ್ನೂ ಮುಗಿಸಿ ಈಚೆಗೆ ಬರುವವೇಳೆಗೆ ಅವರಿಗೆ ಸುಸ್ತಾಗಿತ್ತು. ಬಂದವರೇ ದೀಪ ಆರಿಸಿ ಮಲಗಿದರು,

"ಏನು ಮಾಲಾ, ನೀನು ಹೇಳಬೇಕೆಂದಿರುವುದು ?"

ತಾಯಿಯ ಧ್ವನಿಯಲ್ಲಿ ತುಂಬಿದ್ದ ನಿಶ್ಶಕ್ತತೆಯಿಂದ ಮಾಲತಿ ಮೆಟ್ಟಿಬಿದ್ದಳು, "ಈಗಾಗಲೇ ಬಳಲಿ ಬೆಂದು ಹೋಗಿದ್ದಾಳೆ. ಇದೊಂದನ್ನು ಹೇಳಿ ಅವಳನ್ನು ನೋಯಿಸಬಾರದು ನಾನು'' ಎಂದು ಕೊಂಡಳು, "ಆದರೆ ಹೇಳುವೆನೆಂದಿದ್ದೇನೆ. ಏನು ಹೇಳಲಿ ?"

"ಮಾಲಾ, ಆಗಲೇ ನಿದ್ರೆ ಬಂದಿತೇ ?"

ಮಾಲತಿಗೆ ತಕ್ಷಣ ನಿದ್ರೆ ಬಂದವಳಂತೆ ನಟಿಸುವುದೇ ಸರಿಯೆನ್ನಿಸಿತು. ಸಮನಾಗಿ ಉಸಿರಾಡುತ್ತ ಸ್ವಸ್ಥವಾಗಿ ಮಲಗಿದಳು. ವನಜಮ್ಮ ಅವಳಿಗೆ ನಿದ್ರೆ ಬಂದಿರುವುದು ನಿಜವೆಂದು ತಿಳಿದು ತಾವೂ ಮಗ್ಗುಲಾದರು.

ಮಾಲತಿಗೆ ಆ ರಾತ್ರೆ ಬಹಳ ಹೊತ್ತಿನವರೆಗೆ ನಿದ್ರೆ ಬರಲಿಲ್ಲ. "ನಾನು ಏನು ಮಾಡಿದೆನೆಂದು ನನಗೆ ಹೀಗೆ ಮೋಸಮಾಡಿದರು ?" ಎಂದು ತನ್ನನ್ನು ತಾನೇ ಹತ್ತಾರು ಬಾರಿ ಪ್ರಶ್ನಿಸಿಕೊಂಡಳು. ಸರಿಯಾದ ಉತ್ತರವ್ಯಾವುದೂ ತೋಚಲಿಲ್ಲ, "ನಾನು ಶುದ್ಧ ಪೆದ್ದು. ಅವರಿಗೆ ಸರಿಯಾದ ಜೊತೆಯಲ್ಲವೇನೋ" ಎಂದುಕೊಂಡಳು, "ಆದರೆ ಅದನ್ನು ನನಗೆ ಅವರು ಹೇಳಬಹುದಾಗಿತ್ತು. ಈ ನಡುವೆ ಬಹಳ ಸಭ್ಯಸ್ಥರಾಗಿ ಬಿಟ್ಟಿದ್ದರು. ಎಷ್ಟು ಅಭಿಮಾನ ತೋರಿಸುತ್ತಿದ್ದರು. ಇದೇಕೆ ಈಗ........" ಬೆಳಗಿನ ಝಾವದಲ್ಲಿ ಅವಳಿಗೆ ನಿದ್ರೆ ಬಂದಿತು ದೇವರ ದಯೆಯಿಂದ.

ಬೆಳಿಗ್ಗೆ ವನಜಮ್ಮ ಎದ್ದಾಗ ಮಾಲತಿ ಇನ್ನೂ ನಿದ್ರಿಸುತ್ತಿದ್ದಳು. ಅವರು ಏಳು ಗಂಟೆಯ ವರೆಗೂ ನೋಡಿದರು. ಅವಳು ಇನ್ನೂ ಏಳಲಿಲ್ಲ. ಬಳಿಕ ತಾವೇ ಅವಳನ್ನು ಎಬ್ಬಿಸಿದರು.

"ಏಳು ಮಾಲಾ, ಮಕ್ಕಳು ಏಳುವ ಹೊತ್ತಾಯಿತು. ಅವಕ್ಕೆ ಬಿಸಿನೀರು, ಹತ್ತಿ ಎಲ್ಲ ತೆಗೆದಿಟ್ಟುಕೊಳ್ಳಬೇಕಲ್ಲವ್ಮ?"

ಮಾಲತಿ ಮೈಮುರಿದುಕೊಂಡು ಎದ್ದಳು.

"ಎದ್ದೇವ್ಮ. ಮಕ್ಕಳಿರುವವರು ತಮಗಾಗಿ ಯೋಚಿಸಬಾರದು ಅಲ್ಲವೇವ್ಮ?"

ಅವಳ ಮಾತು ಅರ್ಥವಾಗದೆ ವನಜಮ್ಮ ಹೇಳಿದರು,

"ಹಾಗೇನು ಯಾರೂ ನಿಬಂಧನೆ ಮಾಡಿಲ್ಲ, ಮಾಲಾ. ಆದರೆ ತಾಯಿಯಾದವಳಿಗೆ ಪ್ರಪಂಚದಲ್ಲಿ ತನ್ನ ಮಕ್ಕಳಿಗಿಂತ ಇನ್ನಾವ ವಸ್ತುವೂ ಮುಖ್ಯವಲ್ಲವಾಗಿಬಿಡುತ್ತದೆ ಬರುಬರುತ್ತ. ಇದು ಪ್ರಕೃತಿ ದೇವಿ ಹಾಕಿದ ಮೋಹವಮ್ಮ"

"ಬರುಬರುತ್ತ! ಒಮ್ಮೆಲೇ ಈ ಮೋಹ ಬರಬಾರದೇಕೆ? ಅಮ್ಮಾ ಈ ಮಕ್ಕಳಿಗೆ ನಾವು ಬೇಕು. ಆದ್ದರಿಂದ ದೇವರಿದ್ದರೆ ಅವನು ನಮಗೆ ಇವರಲ್ಲಿ ಸಂಪೂರ್ಣವಾಗಿ ಮೋಹವಿರುವಂತೆ ಮಾಡಬೇಕು. ನಮಗೆ ಇನ್ನೇತರಲ್ಲೂ ಆಸಕ್ತಿ ಇರಕೂಡದು ಹಾಗಿರಬೇಕು" ಆವೇಶದಿಂದ ಮಾಲತಿ ಹೇಳಿದಳು.

"ಅದು ಇರುವುದೂ ಹಾಗೆಯೇ ಮಾಲಾ. ಆದರೆ ಸ್ವಲ್ಪ ಕಾಲ ನಮಗೇ ಇದು ಗೊತ್ತಿರುವುದಿಲ್ಲ. ಗೊತ್ತಾಗುವುದಕ್ಕೆ ಬೇಕು ಸ್ವಲ್ಪ ಕಾಲ ಅಷ್ಟೆ" ವನಜಮ್ಮ ಹೇಳಿದರು.

"ಸರಿ ಅಮ್ಮ, ಸರಿ ಹಾಗಾದರೆ. ನನಗೆ ಇವರಿಬ್ಬರ ಹೊರತು ಇನ್ಯಾವುದೂ ಕಣ್ಣಿಗೇ ಬೀಳದಿರಲಿ. ನನಗಿನ್ನೇನೂ ಬೇಡ"

ವನಜಮ್ಮ ವಿಸ್ಮಿತರಾಗಿ ಕೇಳಿದರು,

"ಮಾಲಾ, ನಿನಗೆ ಏನಾಯಿತು ಈಗ?"

"ಏನೂ ಆಗಿಲ್ಲವಮ್ಮ. ಏನೂ ಆಗುವುದಕ್ಕೆ ಸಾಧ್ಯವಿಲ್ಲ" ಎಂದು ಮಾಲತಿ ಹಾಸಿಗೆಯಿಂದ ಎದ್ದಳು.

ಮಾಡಬೇಕಾದುದೆಲ್ಲ ಒಂದೊಂದಾಗಿ ಆಗತೊಡಗಿತು. ಬೆಳಗು ಕಳೆದು ಮಧ್ಯಾಹ್ನವಾಯಿತು, ಸಂಜೆಯಾಯಿತು ರಾತ್ರಿಯೂ ಬಂದಿತು.

ಆಗ ಮಾತ್ರ ಮಾಲತಿ ಚಿಂತೆಯನ್ನು ಹೊರದೂಡಲಾರದೆ ಹೋದಳು. ಎಷ್ಟೆಷ್ಟು ಸಮಾಧಾನಕ್ಕೆ ತಂದುಕೊಂಡರೂ ಮನಸ್ಸಿನ ಯಾವುದೋ ಮೂಲೆಯಿಂದ ಎದ್ದು ಈ ಪ್ರಶ್ನೆ ಅವಳ ಮುಂದೆ ಭೂತಾಕಾರವಾಗಿ ನಿಲ್ಲುತ್ತಿತ್ತು, "ನನಗೆ ಏತಕ್ಕೆ ನಂಬಿಸಿ ನಂಬಿಸಿ ಮೋಸಮಾಡು ತ್ತಿದ್ದಾರೆ ?" ಉತ್ತರವಿಲ್ಲದ ಪ್ರಶ್ನೆ ಅಥವಾ ಯಾವ ಉತ್ತರದಿಂದಲೂ ತೃಪ್ತಿ ಹೊಂದದ ಪ್ರಶ್ನೆ. ನಿತ್ಯವೂ ಹೀಗೆಯೇ ನಾಲ್ಕು ದಿನಗಳಲ್ಲಿ ಮಾಲತಿ ಬಿಳಿಚಿಕೊಂಡು ಬಿಟ್ಟಳು.

ರಾಮಚಂದ್ರನಿಗೆ ಸುಮಾರಾಗಿ ಗುಣವಾಯಿತು. ಲಕ್ಷ್ಮಣ ಮಾತ್ರ ತಾಯಿಯ ಮಡಿಲಿನಲ್ಲಿ ನರಳುತ್ತ ಮಲಗಿರುತ್ತಿದ್ದ. ವನಜಮ್ಮ ಏನೋ ಹೇಳುತ್ತಿದ್ದರು.

"ಇವನಿಗೂ ಇಳಿಮುಖವಾಗುತ್ತಿದೆ. ಇನ್ನು ಹೆದರಿಕೆಯಿಲ್ಲ"ವೆಂದು.

ಅವರ ಸಮಾಧಾನಕ್ಕೆ ಮಾಲತಿ ಹೇಳುತ್ತಿದ್ದಳು, "ನನಗೂ ಹಾಗೆಯೇ ಕಾಣುತ್ತದೆ" ಆದರೆ ಇಬ್ಬರೂ ನರಳಲಾಗದೆ ನರಳುತ್ತಿದ್ದ ಮಗುವನ್ನು ನೋಡಲಾರದೆ ಹೋಗುತ್ತಿದ್ದರು. ಇಬ್ಬರ ಮನಸ್ಸಿನಲ್ಲಿಯೂ ಒಂದೇ ಯೋಚನೆ, "ಏನಾದರೂ ಆಗಿಬಿಟ್ಟರೆ ಏನು ಗತಿ !"

ಈ ವಾತಾವರಣದಲ್ಲಿ ನಾರಾಯಣ ಹಿಂದಿರುಗಿ ಬಂದದ್ದು.

ಅವನು ವಿಮಾನ ನಿಲ್ದಾಣದಿಂದ ಟ್ಯಾಕ್ಸಿಯಲ್ಲಿ ಮನೆಗೆ ಬಂದ. ಟ್ಯಾಕ್ಸಿ ಹೊರಗೆ ನಿಂತ ಶಬ್ದವನ್ನು ಕೇಳಿ ಚಕಿತರಾಗಿ ವನಜಮ್ಮ ಬೀದಿ ಬಾಗಿಲನ್ನು ತೆರೆದರು,

"ಮಾಲಾ, ಮನೆಯಲ್ಲಿದ್ದಾಳೆ ತಾನೇ ?" ನಾರಾಯಣ ಗಟ್ಟಿಯಾಗಿ ಕೇಳಿದ.

"ಹುಂ, ಬನ್ನಿ" ವನಜಮ್ಮ ಕ್ಷೀಣವಾಗಿ ನುಡಿದರು, "ಇಲ್ಲೇ ನಡುಮನೆಯಲ್ಲಿದ್ದಾಳೆ."

ಅವರು ಮಾತನಾಡಿದ ತರಹೆಯಿಂದ ನಾರಾಯಣ ಸ್ವಲ್ಪ ತಗ್ಗಿ, ಒಳಕ್ಕೆ ಪ್ರವೇಶಿಸಿದ.

ನಾರಾಯಣನ ಧ್ವನಿ ಕಿವಿಗೆ ಬೀಳುತ್ತಲೇ ಒಳಗಡೆ ಮಾಲತಿ ಬೆಚ್ಚಿಬಿದ್ದಳು. ಮಡಿಲಿನಲ್ಲಿ ಮಗುವಿರದಿದ್ದರೆ ಎದ್ದು ಓಡಿ ಬಾಗಿಲಿಗೆ ಬಂದುಬಿಡುತ್ತಿದ್ದಳೇನೋ. ಆದರೆ ಮಗುವಿದ್ದದ್ದು ಅವಳನ್ನು ಹಿಡಿದು ನಿಲ್ಲಿಸಿದಂತಾಯಿತು. ಒಳಗಡೆಯೇ ಕೆಲಸ ಮಾಡುತ್ತಿದ್ದ ಆವೇಗ ಅವಳರಿಯದಂತೆಯೇ ಅವಳ ದೇಹವನ್ನು ಸಂಪೂರ್ಣವಾಗಿ ಆವರಿಸಿತು. ಅವಳಿಗೆ ಎಂದೂ ಪರಿಚಿತವಿಲ್ಲದ ಕೋಪ ಅವನಮೇಲೆ ಬಂದುಬಿಟ್ಟಿತ್ತು, ಕ್ಷಣಾರ್ಧದಲ್ಲಿ.

ನಾರಾಯಣ ಒಳಕ್ಕೆ ಪ್ರವೇಶಿಸುತ್ತಲೇ ಕೇಳಿದ,

"ಇದೇನು, ಇಷ್ಟು ಅವ್ಯವಸ್ಥೆ ಮಾಲಾ? ಮಗುವನ್ನು ಹೀಗೇಕೆ ಮಲಗಿಸಿಕೊಂಡು ಕುಳಿತಿದ್ದೀ? ಏನು ನೀನು ತಲೆಗಿಲೆ ಬಾಚಿಕೊಳ್ಳುವುದನ್ನು ಕೂಡ........"

ಅವಳ ಕಣ್ಣುಗಳಿಂದ ಹೊರಡುತ್ತಿದ್ದ ಕೋಪದ ಕಿಡಿಗಳು ಅವನ ಮಾತಿನ ಸೆಲೆಯನ್ನು ತಡೆದುವು. ಅವನನ್ನು ಕಾಲಿನಿಂದ ತಲೆಯವರೆಗೂ ಒಂದು ಬಾರಿ ನೋಡಿ ಮಾಲತಿ ಕೇಳಿದಳು,

"ಏಕೆ ಬಂದಿರಿ?"

ಅವಳ ಮಾತಿನಲ್ಲಿ ಅಡಕವಾಗಿದ್ದ ಕಾಠಿಣ್ಯದಿಂದ ನಾರಾಯಣ ಬೆಚ್ಚಿಬಿದ್ದ.

"ಏನೆಂದೆ ಮಾಲಾ? ನೀನು ಸರಿಯಾಗಿದ್ದೀಯಾ?"

"ಅದನ್ನು ಕಟ್ಟಿಕೊಂಡು ನೀವೇನು ಮಾಡಬೇಕಾಗಿದೆ? ಈಗ ನೀವು ಬಂದಿದ್ದಾದರೂ ಏಕೆ?'' ಮಾಲತಿ ಗದರಿಸಿ ಕೇಳಿದಳು.

''ನಾನು ಬರಬೇಕಾಗಿರಲಿಲ್ಲವೆ?" ನಾರಾಯಣನಿಗೂ ಸ್ವಲ್ಪ ಕೋಪವೇರುತ್ತಿತ್ತು.

"ಇಲ್ಲ. ನಿಮ್ಮ ಆವಶ್ಯಕತೆ ನನಗಿನ್ನು ಇಲ್ಲ. ತಾವಿನ್ನು ಎಲ್ಲಿ ಇದುವರೆಗೆ ಇದ್ದಿರೋ ಅಲ್ಲಿಗೇ ಹೋಗಬಹುದು.'' ಕೋಪ, ಆಣಕದಿಂದ ಮಾಲತಿಯ ಧ್ವನಿ ಅಸಹನೀಯವಾಗಿತ್ತು.

"ನಿನಗೆ ನನ್ನ ಅವಶ್ಯಕತೆಯಿಲ್ಲವೆಂದು ನನಗೆ ಗೊತ್ತು. ಆದರೆ ನನ್ನ ಮಕ್ಕಳು........"

"ಮಕ್ಕಳು!" ಮಾಲತಿ ಹುಚ್ಚಿಯಂತೆ ನಕ್ಕಳು, 'ಇದು' ಲಕ್ಷ್ಮಣನನ್ನು ಎತ್ತಿ ತೋರಿಸುತ್ತ ಹೇಳಿದಳು, 'ಇದು ನಿಮಗೆ ಬೇಕಾಗಲಾರದು. ಇನ್ನು ದೊಡ್ಡ ಮಗು....' ರಾಮೂ! ಇಲ್ಲಿ ಬಾ."

ತಾಯಿಯ ಧ್ವನಿಗೆ ಕೊಠಡಿಯಲ್ಲಿ ನಿದ್ರಿಸುತ್ತಿದ್ದ ರಾಮುವಿಗೆ ಎಚ್ಚರವಾಗಿತ್ತು. ಈಗ ಕರೆದೊಡನೆ ಹೆದರುತ್ತ ಈಚೆಗೆ ಬಂದ.

ಮಾಲತಿ ಅವನನ್ನು ತೋರಿಸಿ ನಾರಾಯಣನಿಗೆ ಹೇಳಿದಳು,

"ಹುಂ, ಬೇಕಾದರೆ ಅವನನ್ನೂ ಕರೆದುಕೊಂಡು ಹೋಗಿರಿ. ಗಂಡಸರ ರಾಜ್ಯದಲ್ಲಿ ಹೆಣ್ಣಿಗೆ ತನ್ನ ಕರುಳಿನಮೇಲೂ ಅಧಿಕಾರವಿಲ್ಲ. ರಾಮೂ! ನಿಮ್ಮಪ್ಪನ ಹತ್ತಿರ ಹೋಗು."

ರಾಮು ಕೋಪದಿಂದ ನಡುಗುತ್ತಿದ್ದ ತಾಯಿಯನ್ನು ನೋಡಿದ, ಶಠತೆಯಿಂದ ಜಗಳವಾಡುವುದಕ್ಕೇ ಬಂದು ನಿಂತಂತೆ ನಿಂತಿದ್ದ ತಂದೆಯನ್ನೂ ನೋಡಿದ. ಅವನಿಗೆ ದುಃಖ ಉಕ್ಕಿಬಂತು,

"ಅಮ್ಮಾ ನನಗೆ ಅಪ್ಪ ಬೇಡ. ನಾನು ಅಪ್ಪನ ಹತ್ತಿರ ಹೋಗಲ್ಲ" ಎಂದು ಅಳುತ್ತ ಓಡಿಹೋಗಿ ಮಾಲತಿಯ ಕೊರಳಿಗೆ ತೆಕ್ಕೆಬಿದ್ದ.

"ಹುಂ, ಕೇಳುವುದೇನು! ಈ ತಾಯಿಯ ಮಗ!" ಎಂದು ಕೂಗಿದ ನಾರಾಯಣ.

"ಇನ್ನು ನೀವು ಹೊರಡಬಹುದು" ಎಂದಳು ಮಾಲತಿ.

ಏನೂ ಅರ್ಥ ಮಾಡಿಕೊಳ್ಳಲಾರದೆ ವನಜಮ್ಮ ಈ ಜಗಳವನ್ನು ನೋಡುತ್ತ ಸ್ತಬ್ಧರಾಗಿ ನಿಂತಿದ್ದರು. ಅವರಿಗೆ ಈಗ ಇದ್ದಕ್ಕಿದ್ದಂತೆ ಹೊಡೆದೆಬ್ಬಿಸಿದಂತಾಯಿತು,

"ಮಾಲಾ!"

ಮಾಲತಿ ತಾಯಿಯ ಕಡೆಗೆ ತಿರುಗಿದಳು,

"ಅಯ್ಯೋ ಸುಮ್ಮನಿರಮ್ಮ. ದೊಡ್ಡ ಮನುಷ್ಯರು ಅವರು, ಅವರ ಕೈಹಿಡಿಯಲು ಎಂತಹ ಧನಿಕ ಸುರಸುಂದರಿಯರು ಮಾಲೆ

ಹಿಡಿದು ಕಾದಿದ್ದಾರೆ, ನಿನ್ನ ಅಳಿಯತನ ಅವರಿಗೇಕೆ!" ಎಂದು ನಾರಾಯಣನಿಗೆ ಹೇಳಿದಳು, "ಇನ್ನು ಹೊರಡಿ ನೀವು ನಿಮ್ಮ ವಿಲಾಸಭವನಕ್ಕೆ"

ನಾರಾಯಣ ಎಂದೂ ಯಾರ ಕೈಯಲ್ಲೂ ಒಂದು ಮಾತನ್ನೂ ಕೇಳಿದವನಲ್ಲವಾದ್ದರಿಂದ ಈ ಅಪಮಾನದಿಂದ ಕ್ರುದ್ಧನಾದ.

"ಹೊರಡುತ್ತೇನೆ. ಆದರೆ ಮಾಲಾ, ನೀನು ಪಶ್ಚಾತ್ತಾಪಪಟ್ಟು ನನಗೆ ಮತ್ತೆ ಬರಹೇಳಬೇಡ. ನಾನು ಮತ್ತೆ ಬರುವುದಿಲ್ಲ" ಎಂದು ಅವಹೇಳನದ ನಗೆಯಿಂದ ನುಡಿದ, "ಸ್ವತಂತ್ರ ಪ್ರಿಯೆ ನೀನು ಸ್ವತಂತ್ರಳಾಗಿರು"

ನಾರಾಯಣ ಅತ್ತ ಹೊರಡುತ್ತಲೂ ಇತ್ತ ವನಜಮ್ಮ ಮಗಳನ್ನು ಕೇಳಿದರು,

"ಮಾಲಾ ಇದೇನನ್ನು ಮಾಡಿಕೊಂಡೆಯಮ್ಮಾ?"

"ಶ್....ಅಮ್ಮಾ ನನ್ನ ಮಗು....ಮಗು ಬದುಕುವುದೇನಮ್ಮಾ?" ಎಂದು ಹೇಳುತ್ತ ಮಾಲತಿ ತಾಯಿಯ ಸೆರಗಿನಿಂದ ತನ್ನ ಮುಖವನ್ನು ಮುಚ್ಚಿಕೊಂಡಳು, "ಅಮ್ಮಾ ಇನ್ನು ಮುಂದೆ ನನ್ನ ಮಕ್ಕಳೇ ನನ್ನ ಸರ್ವಸ್ವ. ನನಗೆ ನೀನು ಇನ್ನು ಏನೂ ಹೇಳಬೇಡಮ್ಮಾ. ನನಗೆ ಇನ್ನೇನೂ ಬೇಡ."

ವನಜಮ್ಮನವರಿಗೆ ಬಾಯಿ ಕಟ್ಟಿಹೋಯಿತು. ಅವರು ಹೇಳಬೇಕೆಂದು ಇದ್ದುದ್ದೆಲ್ಲ ಮಾಲತಿಯ ಅಳುವಿನಿಂದ ಕೊಚ್ಚಿಹೋಯಿತು.

"ಹೋಗಲಿ ಬಿಡು ಮಾಲಾ. ಮಕ್ಕಳು ಹೆದರಿಬಿಟ್ಟಿದ್ದಾರೆ. ಇನ್ನು ಶಾಂತಳಾಗು" ಎಂದು ಅವಳನ್ನು ಸಂತೈಸತೊಡಗಿದರು.

ನಾರಾಯಣ ಟ್ಯಾಕ್ಸಿಯನ್ನು ಹತ್ತಿ ಕುಳಿತದ್ದು ಒಂದೇ ಗೊತ್ತು ಅವನಿಗೆ. ಯಾವುದೋ ಜ್ಞಾನದಲ್ಲಿ ಹೇಳಿದ್ದ, "ರೈಲ್ವೇ ನಿಲ್ದಾಣಕ್ಕೆ ಬಿಡು" ಎಂದು. ನಿಲ್ದಾಣದಲ್ಲಿ ಇಳಿದಾಗ ಅವನಿಗೆ ಆಶ್ಚರ್ಯವಾಯಿತು, "ಈಗೇತಕ್ಕೆ ಇಲ್ಲಿ ಬಂದೆ? ಟ್ಯಾಕ್ಸಿಯಲ್ಲೇ ನೀಲಗಿರಿಗೆ ಹೋಗಬಹುದಾಗಿತ್ತು!"

ಬೆಂಗಳೂರಿನಿಂದ ಮೈಸೂರಿಗೆ ಹೊರಡುವ ಗಾಡಿ ಇನ್ನೇನು ನಿಲ್ದಾಣದಿಂದ ಕದಲುವುದರಲ್ಲಿತ್ತು, ನಾರಾಯಣ ಟಿಕೇಟನ್ನು ತೆಗೆದು ಕೊಂಡು ನಿಲ್ದಾಣದೊಳ ಹೊಕ್ಕಾಗ. ಒಂದೇ ಓಟ ಓಡಿ ಗಾಡಿಯನ್ನು ಹತ್ತಿದ, ಅದೂ ಹೊರಟಿತು.

"ಆಯಿತು, ನೀರಜಾ ಎಲ್ಲ ವಿಧದಲ್ಲೂ ನನಗೆ ಅನುಕೂಲಳಾಗಿರ ಬಲ್ಲಳು........" ಎಂದು ಯೋಚಿಸತೊಡಗಿದ. ತನ್ನ ಮಗುವೂ ಕೂಡ ಮಾಲತಿಯೇ ತನಗೆ ಬೇಕೆಂದು ಹೇಳಿದ್ದು ಅವನ ಅಭಿಮಾನಕ್ಕೆ ನೋವಾಗಿದ್ದಿತು, "ಮನೆಯ ಸೇವಕರ ಮೇಲೆ ರೇಗಾಡುವಂತೆ ನನ್ನ ಮೇಲೆ ಜೋರು ಮಾಡಿದಳಲ್ಲ ಮಾಲತಿ! ಅವಳಿಗೆ ಇದೇ ಸರಿಯಾದ ಶಿಕ್ಷೆ. ಯಾರಾದರೂ ಕೇಳಿದರೆ ನಡೆದದ್ದನ್ನು ನಡೆದಂತೆ ಹೇಳಿಬಿಟ್ಟ ರಾಯಿತು.——ಲಲಿತೆಗೆ ಸ್ವಲ್ಪ ದುಃಖವಾಗಬಹುದು. ಆದರೆ ನೀರಜ ತುಂಬ ಸರಸಿ. ಎಲ್ಲರ ಮನಸ್ಸನ್ನೂ ಅವಳು ಬೇಗನೇ ಒಲಿಸಿಕೊಳ್ಳು ವುದರಲ್ಲಿ ಸಂಶಯವಿಲ್ಲ............"

ಯೋಚಿಸುತ್ತ ಯೋಚಿಸುತ್ತ ನಾರಾಯಣನಿಗೆ ಯಾವಾಗಲೋ ನಿದ್ರೆ ಬಂದುಬಿಟ್ಟಿತು ಹಿರೋಡೆ ಸಿಗುವವರೆಗೂ ನಿದ್ರೆಮಾಡಿ ಬಳಿಕ ಎದ್ದು ಕುಳಿತ. "ಒಂದು ದೊಡ್ಡ ಚಿಂತೆ ತನ್ನಷ್ಟಕ್ಕೆ ತಾನೇ ಬಗೆಹರಿಯಿತು——" ಎಂದುಕೊಂಡು ಆ ನಿಲ್ದಾಣದಲ್ಲಿ ಒಂದು ವರ್ತಮಾನ ಪತ್ರಿಕೆಯನ್ನು ಕೊಂಡುಕೊಂಡು ಅದನ್ನು ಓದತೊಡಗಿದ, ಮೈಸೂರನ್ನು ತಲುಪುವವರೆಗೂ. ಮೈಸೂರಿನಲ್ಲಿ ಊಟಮಾಡಿ ನೀಲಗಿರಿಗೆ ಹೊರಡಲಿದ್ದ ಬಸ್ಸನ್ನು ಹತ್ತಿದ. ಅವನ ಮನಸ್ಸು ಒಂದು ರೀತಿಯಿಂದ ನೋಡಿದರೆ ಪ್ರಸನ್ನವಾಗಿರಬೇಕಾಗಿದ್ದರೂ ಏನೋ ಹುಚ್ಚು ಗುಪ್ತಚಿಂತೆ ಒಳಗಡೆಯೇ ಅವನನ್ನು ಬಾಧಿಸುತ್ತಿತ್ತು. ಅದೇನು ಎಂಬುದೂ ಅವನಿಗೆ ಸರಿಯಾಗಿ ತಿಳಿಯಲಿಲ್ಲ. "ಛೇ ಇದಕ್ಕೆ ಒಂದೇ ಉಪಾಯ. ಇಲ್ಲಿ ಹರಟುತ್ತಿರುವ ಗುಂಪಿನೊಡನೆ ಸೇರಿ ಹರಟುವುದೇ ಇದಕ್ಕೆ ಮದ್ದು" ಎಂದುಕೊಂಡು ಮುಂದುಗಡೆ ಕುಳಿತಿದ್ದವನು ಅವಕಾಶ ಸಿಗುತ್ತಲೇ ಹಿಂದುಗಡೆಗೆ ಬಂದ.

ಮಾತು ಸಿಕ್ಕಿದ ವಿಷಯಗಳನ್ನೆಲ್ಲಾ ಬಳಸಿಕೊಂಡು ಸಾಗುತ್ತಿತ್ತು. ಮಾತನಾಡುತ್ತ ಆಡುತ್ತ ಒಬ್ಬರು ಹೇಳಿದರು,

"ಏನೋ ಎಲ್ಲ ವಿಷಯಕ್ಕೂ ಈ ಕಾಲವನ್ನು ದೂಷಿಸುವುದು ಜನಗಳಿಗೆ ಒಂದು ಕೆಟ್ಟ ಅಭ್ಯಾಸ ಬಿದ್ದುಹೋಗಿಬಿಟ್ಟಿದೆ. ಕಳ್ಳತನ, ಸುಳ್ಳು, ಮೋಸ ಎಂದು ಇರಲಿಲ್ಲ? ಯಾವ ದೇಶದ ಚರಿತ್ರೆಯನ್ನು ಬೇಕಾದರೆ ತೆಗೆದುಕೊಳ್ಳಿ. ಮಾತೆತ್ತಿದರೆ ಯುದ್ಧ. ಮಾತಾಡಿದರೆ ಕೊಲೆ. ಹಿಂಸೆಯ ಆಸೆಗೇ ಅವರು ಮಾಡುತ್ತಿದ್ದರೋ, ಅಧಿಕಾರದ ಲಾಲಸೆಗೋ ಇಲ್ಲವೇ ಹುಚ್ಚು ಪ್ರತಿಷ್ಟೆಯನ್ನು ಕಾಯ್ದುಕೊಳ್ಳಲೋಸುಗವೋ ಏನೋ ಒಂದು ಅರ್ಥವಿಲ್ಲದ ಕಾರಣ. ರಾಜರೇ ಹೀಗಿದ್ದ ಮೇಲೆ ಪ್ರಜೆಗಳ ಅವಸ್ಥೆ ಇನ್ನೇನು?

"ಅದಲ್ಲ ಅವರು ಹೇಳಿದ್ದು ಸ್ವಾಮೀ" ಇನ್ನೊಬ್ಬರು ವಿಶದೀಕರಿಸಿದರು, "ಈಗ ಈ ಸಿನೇಮಾ, ನಾಟಕಗಳು ಹೆಚ್ಚಿ ಚಿಕ್ಕ ಹುಡುಗ ಹುಡುಗಿಯರ ಮನಸ್ಸಿನ ಮೇಲೆ ಕೆಟ್ಟ ಪರಿಣಾಮವನ್ನುಂಟು ಮಾಡುತ್ತಿವೆ ಎಂದು ಅನ್ನುತ್ತಾರೆ ಅವರು"

"ಹಾಗೋ? ಅದರಲ್ಲೂ ನನಗೆ ನಂಬಿಕೆಯಿಲ್ಲ. ಈಗಲೂ ಸಭ್ಯಸ್ಥರಾದ ಗೃಹಸ್ಥರು, ಪತಿವ್ರತೆಯರಾದ ಹೆಣ್ಣು ಮಕ್ಕಳು ಎಲ್ಲ ಇದ್ದಾರೆ." ಎಂದರು ಆತ

"ಪತಿವ್ರತೆಯರು ಎನ್ನುವ ಮಾತಿಗೆ ಈಗ ಅರ್ಥ ಬದಲಾಗಿಬಿಟ್ಟಿದೆ ಸ್ವಾಮಿ. ಮೊದಲಿಗೆ ಆ ಮಾತಿಗೆ ಪತಿಯ ಮನೋನುಕೂಲೆಯರಾದ ಸತಿಯರು ಎಂದರ್ಥ ಮಾಡುತ್ತಿದ್ದರು. ಈಗ ಅದಕ್ಕೆ ಅರ್ಥ ಪತಿಯನ್ನು ಹತೋಟಿಯಲ್ಲಿ ಇಟ್ಟುಕೊಳ್ಳಬಲ್ಲ ಗಟ್ಟಿಗಿತ್ತಿಯರು ಎಂದು" ನಾರಾಯಣ ಹೇಳಿದ.

"ನೀವು ಹೇಳಿದ ಅರ್ಥ ಬರುವುದಕ್ಕೆ ಕಾರಣ ಗೊತ್ತುಂಟೇ ಸ್ವಾಮಿ? ಈಗಿನ ಗಂಡಸರು ಪೌರುಷ ಹೀನರಾಗಿ ಪತ್ನಿಯರ ಆಜ್ಞಾಧಾರಕರಾಗಿರುವುದರಿಂದ. 'ಇದ್ದರೆ ಹೇಳಿದಂತೆ ಕೇಳಿಕೊಂಡು ಇರು. ಇಲ್ಲದಿದ್ದರೆ ಹೊರಡು' ಎಂದರೆ ಸರಿಹೋಗುತ್ತೆ. ಅದನ್ನು ಬಿಟ್ಟು" ಎಂದು ಮತ್ತೊಬ್ಬರು ಹೇಳಿದರು.

"ಓಹೋ! ನಿಧಾನ, ಸ್ವಾಮೀ, ನಿಧಾನ. ಈಗ ತಾವಿರುವುದು ಇಪ್ಪತ್ತನೆಯ ಶತಮಾನದಲ್ಲಿ. ಅರ್ಧಾಂಗಿಯರನ್ನು "ಹೋಗು" ಎನ್ನುವ ಹಕ್ಕು ನಮಗೆ ಎಂದೋ ಹೊರಟು ಹೋಯಿತು. ಇನ್ನೂ ಅವರೇ "ಹೋಗು" ಎಂದು ನಮಗೆ ಅನ್ನುವ ಕಾಲವಿದು" ಎಂದರು ಇನ್ನೊಬ್ಬರು.

"ನಿಜ, ಆ ಕಾಲ ಬಂದಿದೆ" ಎಂದ ನಾರಾಯಣ.

"ಯಾರು ಹೋಗು ಅಂದರೇನು? ಒಟ್ಟಿನಲ್ಲಿ ಆ ದುಷ್ಟ ಹೆಂಡತಿಯಿಂದ ಅವನಿಗೆ ಬಿಡುಗಡೆ ಉಂಟಷ್ಟೇ?"

"ನಿಮಗೂ ಉಂಟು ಸ್ವಾಮೀ. ಆದರೆ ಆಕೆಗೂ ಉಂಟು" ಎಂದರು ಮೊದಲು ಮಾತನಾಡಿದವರು, "ಇಲ್ಲಿ ಕೇಳಿ ಸ್ವಾಮೀ, ನಾನು ನಿಮಗೊಂದು ಸಣ್ಣ ನಡೆದ ಸಂಗತಿಯನ್ನು ಹೇಳುತ್ತೇನೆ.

"ಮಂಗಳೂರಿನಲ್ಲಿ ನಾನು ಒಂದು ಹೋಟೆಲಿನಲ್ಲಿ ಕೆಲವು ತಿಂಗಳಿದ್ದೆ. ಅಲ್ಲಿ ಒಬ್ಬ ಹುಡುಗಿ, ಸುಮಾರಾಗಿ ಲಕ್ಷಣವಾಗಿದ್ದವಳು ಕೆಲಸಕ್ಕೆ ಇದ್ದಳು. ಅವಳಿಗೆ ಇಬ್ಬರೋ ಮೂವರೋ ಮಕ್ಕಳು. ಅವಳ ಗಂಡ ಯಾವುದೋ ಸಣ್ಣಮಾತಿಗೆ ಅವಳ ಮೇಲೆ ಸಿಟ್ಟುಗೊಂಡು ಅವಳನ್ನೂ ಅವಳ ಮಕ್ಕಳನ್ನೂ ಏಕಾಏಕಿ ಬಿಟ್ಟು ಹೊರಟು ಬಿಟ್ಟ. ಒಂದೆರಡು ತಿಂಗಳಿನ ಮೇಲೆ ತಿಳಿಯಿತು ಅವನು ಬೇರೆ ಹೆಂಗಸಿನೊಡನೆ ಸಂಸಾರ ಮಾಡಿಕೊಂಡು ತನ್ನ ಪಾಡಿಗೆ ತಾನು ಇದ್ದುಬಿಟ್ಟಿದ್ದಾನೆ. ಬೇರೆ ಊರಿನಲ್ಲಿ ಎಂದು,

"ಈ ವರ್ತಮಾನ ಬರುವವರೆಗೆ ಆ ಹುಡುಗಿ ಏನೂ ಮಾಡಲಿಲ್ಲ. ಆದರೆ ಬಳಿಕ ಅವಳಿಗೆ ಕೋಪಬಂದಿತೇನೋ ತನ್ನ ಜಾತಿಯ ಹಿರಿಯರು ಕೆಲವರಿಗೆ ಹೇಳಿ ಅವರ ಒಪ್ಪಿಗೆ ಪಡೆದು, ಅದೇ ಹೋಟೆಲಿನಲ್ಲಿ ಕೆಲಸಕ್ಕಿದ್ದ ಇನ್ನೊಬ್ಬನನ್ನು ಮದುವೆಯಾದಳು. ಇದಾದ ಸುಮಾರು ಒಂದು ತಿಂಗಳಿಗೆ ಆ ಮೊದಲಿನವ ಊರಿಗೆ ಬಂದ. ಬಂದವನೇ ಹೋಟೆಲಿಗೆ ಹೆಂಡತಿಯನ್ನು ನೋಡಲು ಬಂದ. ಅವಳು ಎಲ್ಲರೆದುರಿಗೆ ಅವನನ್ನು ಚೆನ್ನಾಗಿ ಅಪಹಾಸ್ಯಮಾಡಿಬಿಟ್ಟಳು. ಅವಳಿಗೆ ಪುನಃ ಮದುವೆಯಾಯಿ

ತೆಂದು ಅವನಿಗೆ ತಿಳಿಯುತ್ತಲೇ ಅವನಿಗೆ ಹುಚ್ಚು ಪಶ್ಚಾತ್ತಾಪ ಬಂದಿತು. ಅವಳನ್ನು ಪುನಃ ತನ್ನ ಮನೆಗೆ ಹಿಂದಿರುಗೆಂದು ಬೇಡಿದ. ಅವಳು ಒಪ್ಪದೆ ಇರಲು ತಮ್ಮ ಜಾತಿಯ ಮುಖಂಡರನ್ನು ನೋಡಿದ. ಏನಾದರೂ ಅವಳು ಬರಲಿಲ್ಲ ಮತ್ತೆ ಅವನ ಮನೆಗೆ.

"ಅವನ ಮನೆ ಹೋಟೇಲಿನ ಹತ್ತಿರವೇ ಇತ್ತು. ಅದರಲ್ಲಿ ಅವನ ತಾಯಿ ಇದ್ದಳು. ತಾನೂ ಇನ್ನು ಮುಂದೆ ಅಲ್ಲೇ ತಾನು ಮಾಡುತ್ತಿದ್ದ ಮರಗೆಲಸವನ್ನು ಮಾಡುವೆನೆಂದು ಹೇಳಿದ. ಆದರೆ ಅದೇನಾಯಿತೋ ಅವನು ಊರಿಗೆ ಬಂದ ಎಂಟು ಹತ್ತು ದಿನಗಳಲ್ಲಿಯೋ ಅವನಿಗೆ ಹುಚ್ಚು ಹಿಡಿಯಿತು.

ಹೋಟೇಲಿನಲ್ಲಿ ನಾನು ಕೇಳಿದ್ದು ಈ ಕೆಲಸದ ಹುಡುಗಿ ತನ್ನ ಎರಡನೆಯ ಗಂಡನೊಡನೆ ಲಲ್ಲೆಯಾಡುತ್ತ ಬೇಕೆಂದು ನಾಲ್ಕಾರು ಬಾರಿ ಅವನು ಕೆಲಸ ಮಾಡುತ್ತಿದ್ದ ಹಾದಿಯಿಂದ ಹೋಟೆಲಿಗೆ ಬರುತ್ತಿದ್ದಳು, ಆ ದೃಶ್ಯವನ್ನು ನೋಡಿ ಸಹಿಸಲಾರದೆ ಅವನು ಹುಚ್ಚನಾದ ಎಂದು.

ಈ ಸಂಗತಿ ನಡೆದುದು ಕೇವಲ ಅವಿದ್ಯಾವಂತರ ಗುಂಪಿನಲ್ಲಿ. ಆದರೆ ಒಬ್ಬ ಮನುಷ್ಯ ಸೇಡಿಗೆ ಹೊರಟರೆ, ಅದೆಂತಹ ಸುಧಾರಿತ ಸಮಾಜವಾದರೂ ಇನ್ನೊಬ್ಬರು ಏನು ಮಾಡುವರೆಂದು ಹೇಳಲಾಗದು. ನಾವು–ಗಂಡಸರು–ನಮಗೆ ಸೇರಿದುದನ್ನು ಮತ್ತೊಬ್ಬರು ನೋಡಿದರೇ ಉದ್ವಿಗ್ನರಾಗುತ್ತೇವೆ. ಅದು ಇನ್ನೊಬ್ಬರಿಗೆ ಸೇರಿದರೆ ಹುಚ್ಚು ಹಿಡಿಯೂ ವುದರಲ್ಲಿ ಆಶ್ಚರ್ಯವಿಲ್ಲ"

"ಈ ಮಾತೇಕೆ ಈಗ? ಸುಮ್ಮಸುಮ್ಮನೆ ಯಾರೂ ಹೆಂಡತಿಯರ ಮೇಲೆ ಜೋರು ಮಾಡಲು ಹೋಗುವುದಿಲ್ಲ. ಎಲ್ಲೋ ಕೆಲವು ಹುಚ್ಚು ಸಂಸಾರಗಳಲ್ಲಿ ಆ ರೀತಿ ಇರುತ್ತದೆ ಅಷ್ಟೆ."

ಸಮಾಜದ ಸಾಧಕ ಬಾಧಕ ವ್ಯವಹಾರಗಳನ್ನೆಲ್ಲಾ ತಿರುಗಿಸಿ ತಿರುಗಿಸಿ ಚರ್ಚೆ ಮಾಡುವುದರೊಳಗೆ ಗಂಟೆಗಳು ಹಾರಿದುವು. ಮಾತು ಮುಗಿಯದ ಮುನ್ನ ಎಲ್ಲರೂ ನೀಲಗಿರಿಯಲ್ಲಿದ್ದರು.

ಬಸ್ಸು ಇಳಿದು ತಾರು ಮಾರಾಗಿ ಕಾಲಿಡುತ್ತ ನಾರಾಯಣ ಹೋಟೇಲನ್ನು ಸೇರಿದ. ಅವನು ಬಾಗಿಲ ಬಳಿಗೆ ಬರುವಾಗಲೇ ನೀರಜೆ ಓಡಿ ಬರುತ್ತಿರುವುದು ಅವನಿಗೆ ಕಾಣಿಸಿತು,

"ಕಿಡಿಕೆಯಿಂದ ನೀವು ಬರುವುದನ್ನು ನೋಡಿ, ಓಡಿ ಕೆಳಗೆ ಬಂದೆ. ಅಷ್ಟರಲ್ಲಿ ನೀವೇ ಬಂದುಬಿಟ್ಟಿರಿ" ಎಂದು ಉಲ್ಲಾಸದ ಮೂರ್ತಿಯಾದಳು ನೀರಜೆ.

"ಏನು ಮಾಡುತ್ತಿದ್ದಿರಿ ನೀವು?" ನಾರಾಯಣ ಅವಳನ್ನು ಕೇಳಿದ.

"ಲೀಲೆಯೊಡನೆ ಹರಟುತ್ತಿದ್ದೆ. ಅಬ್ಬ! ನೀವು ಊರಿಗೆ ಹೋಗಿ ಎಷ್ಟು ಯುಗಗಳಾದುವು!"

"ಎಷ್ಟು ಯುಗಗಳಾದುವು? ಇನ್ನೂ ಒಂದು ವಾರ ಕೂಡ ಇಲ್ಲ" ಎಂದ ನಾರಾಯಣ ನಗುತ್ತ.

ಸುಳ್ಳು! ಶುದ್ಧ ಸುಳ್ಳು! ನೀವು ಇಲ್ಲಿಂದ ಹೊರಟಾಗ ನಾನಿನ್ನೂ ಹುಡುಗಿಯಾಗಿದ್ದೆ. ಬಳಿಕ ಎಷ್ಟು ಮುದುಕಿಯಾಗಿದ್ದೆ ಗೊತ್ತೇ? ಯಾರ ಸಹವಾಸವೂ ಬೇಡ, ಯಾರ ಮಾತೂ ಬೇಡ ನನಗೆ. ನನ್ನ ದೇಹದಲ್ಲಿ ಚೈತನ್ಯವೇ ಇರಲಿಲ್ಲ."

"ಈಗ ಮತ್ತೆ ಹುಡುಗತನ ಬಂದಂತಿದೆಯಲ್ಲ?"

"ಎರಡನೆಯ ಬಾಲ್ಯವೆಂದು ತೋರುತ್ತದೆ. ಇದೇ ಕೊನೆಯ ಅವಸ್ಥೆ. ಅಲ್ಲವೇ ನಾರಾಯಣ್?"

"ನಿಮಗೆ ಇದೊಂದೇ ಅವಸ್ಥೆಯಾದ್ದರಿಂದ ಇದನ್ನು ಮೊದಲನೆಯದು ಎಂದೂ ಹೇಳಬಹುದು, ಕೊನೆಯದೂ ಎಂದೂ ಹೇಳಬಹುದು."

ಅವನನ್ನು ಕುರ್ಚಿಯಲ್ಲಿ ಕೂಡಿಸಿ ನೀರಜೆ ಟೀ ತರಲು ಗಂಟೆ ಬಾರಿಸಿದಳು.

"ಹುಂ, ಇನ್ನು ಹೇಳಿ. ಬರುವುದಕ್ಕೆ ಏತಕ್ಕೆ ಇಷ್ಟು ತಡವಾಯಿತು?"

"ಏತಕ್ಕೇ? ಬೊಂಬಾಯಿಗೆ ಹೋಗಿದ್ದೆ."

"ಬೊಂಬಾಯಿಗೆ ?''

"ಬೊಂಬಾಯಿಗೆ ?"

"ಹೌದು. ನಮ್ಮ ತಂದೆಯವರನ್ನು ನೋಡಲು ಹೋಗಿದ್ದೆ."

"ಜಗಳ ಇದ್ದಿತಲ್ಲವೇ ನಿಮಗೂ ಅವರಿಗೂ ?"

"ಇದ್ದಿತೇ ನೀರಜಾ ? ನೋಡಿದಿರಾ, ಪ್ರಕೃತ ಸಂದರ್ಭದಲ್ಲಿ ಹಿಂದೆ ಹಾಗೆಲ್ಲ ಇದ್ದಿತೆಂದು ನೆನಪು ಸಹ ಉಳಿಯುವಂತಿಲ್ಲ."

"ಅಂದರೆ ನಾರಾಯಣ್, ನಿಮ್ಮ ತಂದೆಯವರು ನಿಮ್ಮಲ್ಲಿ ಪ್ರಸನ್ನ ರಾದರೆನ್ನಿ."

"ಹಾಗೇ ಅನ್ನಿರಿ ಬೇಕಾದರೆ. ನನ್ನ ಪಾಲಿಗೆ ಎಂದೂ ಅಪ್ರಸನ್ನತೆ ಇರಲೇ ಇಲ್ಲ."

ನೀರಜೆ ನಗುತ್ತ ಕೇಳಿದಳು,

"ಅದಕ್ಕೋ ಇಷ್ಟು ಸಂತೋಷ ? ಇರಲಿ ಇದು. ನಾರಾಯಣ್, ನೀವು ನಮಗೆ ತಿಂಡಿ ಕೊಡಿಸಬೇಕು.''

"ನಿಮ್ಮನ್ನು ಒಂದು ದಿನ ಬೊಂಬಾಯಿಗೆ ಕರೆದುಕೊಂಡು ಹೋಗಿ ತೃಪ್ತಿಯಾಗುವಷ್ಟು ತಿಂಡಿ ಕೊಡಿಸುತ್ತೇನೆ, ಆಯಿತೇ ?''

"ನನಗೆ ಈಗಲೇ ತೃಪ್ತಿಯಾಯಿತು'' ಎಂದು ನೀರಜೆ ನಕ್ಕಳು.

ತುಸು ಹೊತ್ತಾದಮೇಲೆ ನಾರಾಯಣ ಕೇಳಿದ,

"ನೀರಜಾ ನಿಮ್ಮ ತಂದೆತಾಯಿಗಳಿರುವುದೆಲ್ಲಿ ?''

"ಬೊಂಬಾಯಿಯಲ್ಲೇ ತಾತನ ಜೊತೆಯಲ್ಲಿದ್ದಾರೆ. ಏತಕ್ಕೆ ನಿಮಗೆ ಅವರು ?"

"ಅವರನ್ನು ಒಂದು ವಿಷಯ ಕೇಳಬೇಕಾಗಿತ್ತು ನೀರಜಾ.''

"ನನ್ನನ್ನು ಕೇಳಬಾರದೇ ನಾರಾಯಣ್ ? ನನಗೆ ಸ್ವಲ್ಪ ತಿಳುವಳಿಕೆ ಇದೆ. ಬೇಕಾದರೆ ಕೇಳಬಹುದು."

"ನಿಮ್ಮನ್ನು ಕೇಳಬೇಕಾಗಿಲ್ಲ'' ಎಂದು ನಾರಾಯಣ ನಗತೊಡಗಿದ. "ನೀವು ನನ್ನಿಂದ ಪ್ರಶ್ನೆ ಮಾಡಲ್ಪಡದೆಯೇ ಒಂದು ಪ್ರಶ್ನೆಗೆ ಉತ್ತರ ಕೊಟ್ಟಿದ್ದೀರಿ."

"ಯಾವ ಪ್ರಶ್ನೆ ಅದು? ಏತಕ್ಕೆ ಇಷ್ಟು ಗುಟ್ಟು ಮಾಡುತ್ತೀರಿ? ಒಳ್ಳೆಯ ಮಾತಿನಲ್ಲಿ ಹೇಳುವಿರೋ ಇಲ್ಲದಿದ್ದರೆ ಈ ಟೀಯನ್ನು ನಿಮ್ಮ ಬಟ್ಟೆಯ ಮೇಲೆ........" ಎಂದು ಲೋಟವನ್ನು ಸ್ವಲ್ಪ ಬಗ್ಗಿಸಿದಳು ನೀರಜೆ

ಟೀ ಬಟ್ಟಲನ್ನು ಅವಳ ಕೈಯಿಂದ ಎಚ್ಚರಿಕೆಯಿಂದ ಕಿತ್ತುಕೊಂಡು ನಾರಾಯಣ ಅದನ್ನು ದೂರ ಇಟ್ಟು ನಸುನಕ್ಕ,

"ಹೆದರಿಸಿ ಕೇಳಬೇಕಾಗಿಲ್ಲ ನೀರಜಾ. ನಿಮಗೆ ಹೇಳುವುದಕ್ಕೆ ಯಾವ ಆಕ್ಷೇಪಣೆಯೂ ಇಲ್ಲ........"

"ಹೇಳಿ ಹಾಗಿದ್ದರೆ" ಎಂದು ಕುತೂಹಲದಿಂದ ಕೇಳಿದಳು ನೀರಜೆ.

"ನಿಮ್ಮ ತಂದೆತಾಯಿ ನನ್ನನ್ನು ಅಳಿಯನನ್ನಾಗಿ ಮಾಡಿಕೊಳ್ಳಲು ಒಪ್ಪಿಕೊಳ್ಳುತ್ತಾರೆಯೇ?"

ನೀರಜೆ ಗಟ್ಟಿಯಾಗಿ ನಗತೊಡಗಿದಳು. ನಾರಾಯಣ ಅದನ್ನು ನೋಡಿ ಕೇಳಿದ,

"ನಗುವುದೇತಕ್ಕೆ ನೀರಜಾ? ಅವರು ಒಪ್ಪುವುದು ಅಷ್ಟು ಅಸಂಭವವೇ?"

"ಅಲ್ಲ, ಅದಕ್ಕಲ್ಲ ನನಗೆ ನಗುಬರುವುದು" ಎಂದು ನಗುವನ್ನು ತಡೆಯಲೆತ್ನಿಸುತ್ತ ನೀರಜೆ ನುಡಿದಳು,

"ಇದನ್ನು ಹೇಳುವುದಕ್ಕೆ ನಿಮಗೆ ಏತಕ್ಕೆ ಇಷ್ಟು ನಾಚಿಕೆ, ಸಂಕೋಚ?"

ಅವಳ ನಗು ಏತಕ್ಕೋ ಅವನಿಗೆ ಅಷ್ಟು ಇಷ್ಟವಾಗಲಿಲ್ಲ. ಆದರೂ ಕೇಳಿದ,

"ಪ್ರಶ್ನೆ ಕೇಳಿದ್ದಾಯಿತಲ್ಲ? ಉತ್ತರ ಬರಲಿ ಬೇಗ."

ನಗುವನ್ನು ಸಾವರಿಸಿಕೊಂಡು ನೀರಜೆ ಉತ್ತರ ಕೊಟ್ಟಳು,

"ಅವರು ನಿಮ್ಮನ್ನು ಒಪ್ಪಿಕೊಳ್ಳಲೇಬೇಕೆಂದು ನಾನು ಎಂದೋ ತೀರ್ಮಾನಿಸಿದೆ.

"ನೀವು!" ನಾರಾಯಣನಿಗೂ ನಗು ಬಂದಿತು,

"ಲೀಲೆ ಗಂಡುಬೀರಿ ಎಂದಿರಿ ನೀರಜಾ. ನೀವೇನು ಅಷ್ಟು ಲಜ್ಜಾ ಪ್ರಕೃತಿಯವರಲ್ಲ ಅಲ್ಲವೇ?"

"ಇದೇನಿದು, ಇನ್ನೂ 'ನೀವು' 'ತಾವು'? ನನಗೆ ನಿಜವಾಗಿ ಹೇಳುತ್ತೇನೆ, ಸುಳ್ಳು ಸುಳ್ಳು ನಾಚಿಕೆ ಗೊತ್ತಿಲ್ಲ. ನಿಸರ್ಗದ ಔರಸ ಪುತ್ರಿ ನಾನು."

"ಭಲಾ, ನೀರಜಾ. ಹಾಗಾದರೆ ನಾವು ಬೆಂಗಳೂರಿಗೆ ಹಿಂದಿರುಗುತ್ತಲೂ ನಿಮ್ಮ ತಂದೆತಾಯಿಗಳಿಗೆ ಬರೆದುಬಿಡುವುದು."

"ಅಷ್ಟು ದೂರ ಏಕೆ? ನಾಳೆಯೇ ಒಂದು ಟ್ಯಾಕ್ಸಿ ನೋಡಿಕೊಂಡು ಬೆಂಗಳೂರಿಗೆ ಹೋಗಿ ಚಿಕ್ಕಮ್ಮನಿಗೆ ಹೇಳಿ, ಅಲ್ಲಿಂದ ನೆಟ್ಟಗೆ ಬೊಂಬಾಯಿಗೆ ಹೋಗೋಣ. ಇಲ್ಲಿ ನಮಗೆ ಇನ್ನೇನು ಕೆಲಸ?"

ಇವರು ಮಾತನಾಡುತ್ತಿದ್ದಂತೆಯೇ ಲೀಲೆ ಒಳಕ್ಕೆ ಬಂದಳು,

"ಓ! ನೀವು ಬಂದಿದ್ದಕ್ಕೇ ನೀರಜಾ ಹೀಗೆ ಓಡಿಬಂದದ್ದು? ಏನು, ನೀರಜಾ ನೀನು ಹೀಗೆ ಆಡುತ್ತಿದ್ದರೆ ನೋಡಿದವರು ಏನೆಂದುಕೊಳ್ಳುತ್ತಾರೆ?" ಎಂದು ನಸುನಗುತ್ತ ಪ್ರಶ್ನಿಸಿದಳು.

ಅವಳ ಮಾತನ್ನು ಕೇಳಿ ನೀರಜ ನಾರಾಯಣನ ಮುಖವನ್ನು ನೋಡಿ ಕಣ್ಣುಮಿಟುಕಿಸಿ ಸುಳ್ಳುಗಾಂಭೀರ್ಯದಿಂದ ಕೇಳಿದಳು,

"ಏನೆಂದುಕೊಳ್ಳುತ್ತಾರೆ ಲೀಲಾ?"

"ಲೀಲೆ ಅರ್ಧಸ್ಮಿತವದನೆಯಾಗಿ ಹೇಳಿದಳು,

"ನಿನಗೆ ನಾರಾಯಣ್‌ರವರಲ್ಲಿ ಆಸಕ್ತಿ ಸ್ವಲ್ಪ ಮಿತಿಮೀರುತ್ತಿದೆ ಎಂದುಕೊಂಡಾರು"

"ಅಂ? ಕೇಳಿದಿರಾ ನಾರಾಯಣ್? ಈಗ ನಾನು ಈ ಅಪವಾದದಿಂದ ಹೇಗೆ ಮುಕ್ತಳಾಗುವೆ, ಲೀಲಾ?"

ನಾರಾಯಣನಿಗೆ ಬಹಳ ನಗು ಬಂದಿತು,

"ನೀವು ಈ ಅಪವಾದದಿಂದ ಪಾರಾಗಲು ಬಯಸುವಿರೇನು ನೀರಜಾ?"

ನೀರಜಾ ಒಮ್ಮೆ ಜೋರಾಗಿ ನಕ್ಕು ಹೇಳಿದಳು,

"ಕೆಲವು ಬಾರಿ ಜನಗಳ ನಿಂದೆಯೂ ನನಗೆ ಪ್ರಿಯವಾಗಿ ಕಾಣು ತ್ತದೆ, ನಾರಾಯಣ್. ಲೀಲಾ, ನನ್ನ ಜೀವನದಲ್ಲಿ ಒಂದೆರಡು ಏರುತಗ್ಗು ಗಳಿದ್ದರೆ ಅದರಿಂದ ಬಾಧಕವೇನು ? ನನಗಂತೂ ಇದರಿಂದ ವ್ಯಥೆಯಾಗು ವುದಿಲ್ಲವೆಂದೇ ಕಾಣುತ್ತದೆ"

ನಾರಾಯಣ ಅವಳ ಮಾತಿಗೆ ನಗತೊಡಗಿದ. ಲೀಲೆ ವಿಸ್ಮಿತಳಾಗಿ ಅವರಿಬ್ಬರನ್ನೂ ಸುಮ್ಮನೆ ನೋಡಿದಳು.

"ಲೀಲೆಗೆ ಅರ್ಥವಾದಂತಿಲ್ಲ ನಾರಾಯಣ್. ಅವಳಿಗೆ ಪ್ರತಿ ಯೊಂದನ್ನೂ ಬಿಡಿಸಿ ಹೇಳದಿದ್ದರೆ ನಾವು ಹುಚ್ಚರೆಂದು ತಿಳಿದುಬಿಡು ವಳು." ಎಂದಳು ನೀರಜೆ.

ನಾರಾಯಣ ತಲೆದೂಗಿದ ಆ ಮಾತಿಗೆ,

"ಇರಲಿ ನೀರಜಾ. ಲಗ್ನ ಪತ್ರಿಕೆ ಕೈಸೇರಿದರೆ ಅವತ್ತಾದರೂ ನಮ್ಮ ಬುದ್ಧಿ ಸರಿಯಾಗಿದೆಯೆಂದು ಅವರು ತಿಳಿಯುತ್ತಾರಷ್ಟೆ ?"

ಲೀಲೆಗೆ ಮುಖ ಕೆಂಪಾಯಿತು,

"ಯಾರ ಲಗ್ನ ಪತ್ರಿಕೆ ನಾರಾಯಣ್ ? ನೀವಂತೂ ಮದುವೆ ಯಾದವರು, ಮನೆಯಲ್ಲಿ ಸ್ಫುರದ್ರೂಪಿಯಾದ ಹೆಂಡತಿ ಇದ್ದಾರೆ, ಮಕ್ಕಳಿ ದ್ದಾರೆ. ಇನ್ನು ನೀರಜೆಯ ಲಗ್ನ ಪತ್ರಿಕೆ. ಅವಳು ಇನ್ನೂ ಲಗ್ನವಾಗಲು ಸಿದ್ಧಳಿಲ್ಲವೆಂದು ತಾರಾನಾಥರಿಗೆ ಹೇಳಿದ್ದಾಳೆ ಮೊನ್ನೆ ತಾನೇ, ಈಗಾಗಲೇ ಆ ಮಾತು ಸುಳ್ಳಾಯಿತೆ ?"

"ತಾರಾನಾಥ! ಯಾರು ಅವರು ?" ಆಶ್ಚರ್ಯದಿಂದ ನಾರಾಯಣ ನೀರಜೆಯ ಕಡೆ ತಿರುಗಿ ಪ್ರಶ್ನಿಸಿದ.

ನೀರಜೆ ಸಿಂಹಿಣಿಯಂತೆ ಲೀಲೆಯ ಕಡೆಗೆ ಅಷ್ಟರಲ್ಲಿಯೇ ಧಾವಿಸಿ ದ್ದಳು. ಲೀಲೆ ಆವಳು ಕೊಂಚ ದೂರದಲ್ಲಿರುವಾಗಲೇ ಅವಳ ಎರಡು ಕೈಗಳನ್ನೂ ಹಿಡಿದುಕೊಂಡಳು. ನಾರಾಯಣನ ಪ್ರಶ್ನೆ ನೀರಜೆಯ ಕಿವಿಗೆ ಬೀಳಲಿಲ್ಲ. ತನ್ನ ಕೈಗಳನ್ನು ಬಿಡಿಸಿಕೊಳ್ಳಲು ಯತ್ನಿಸುತ್ತ

ಪೂತ್ಕರಿಸಿದಳು, "ನೀನು! ನೀನು, ಲೀಲಾ! ಯಾರ ಆಶ್ರಯದಲ್ಲಿ ಬಿದ್ದಿದ್ದೀ ನೀನು ಎಂಬುದನ್ನು ಮರೆತಿದ್ದಿ ನೀನು ಎಂದು ತೋರುತ್ತದೆ!"

ಆ ಕ್ಷಣದಲ್ಲಿ ಹೇಳಿ ಕರೆಯಿಸಿದಂತೆ ಜನಾರ್ಧನ ಪ್ರವೇಶಿಸಿ, ಈ ದೃಶ್ಯವನ್ನು ನೋಡಿ ತಬ್ಬಿಬ್ಬಾದ.

"ನೀರಜಾ, ನೀನು ಲೀಲೆಗೆ ಏನು ಹೇಳುತ್ತಿದ್ದೀ? ಯಾರ ಆಶ್ರಯ ಯಾರಿಗೆ!"

ನೀರಜೆ ತಿರುಗಿ ನೋಡಿದಳು ಸ್ತಬ್ಧನಾಗಿ ಕುಳಿತಿದ್ದ ನಾರಾಯಣ, ವಿಸ್ಮಯ ಕೋಪಗಳಿಂದ ವಿಚಿತ್ರವಾಗಿ ಕಾಣುತ್ತಿದ್ದ ಜನಾರ್ಧನರನ್ನು ಕಂಡಳು. ತಕ್ಷಣದಲ್ಲಿ ಅವಳ ಮುಖಭಾವ ಬದಲಾಯಿಸಿತು,

"ಕ್ಷಮಿಸು ಲೀಲಾ, ನಾನು ಹೇಳಿದ ಮಾತನ್ನು ಕ್ಷಮಿಸು" ಎಂದು ದೈನ್ಯದ ಮೂರ್ತಿಯಾಗಿ ಲೀಲೆಯ ಕಡೆಗೆ ತಿರುಗಿದಳು.

ಲೀಲೆ ಒಂದು ಬಾರಿ ಅಸಹ್ಯದಿಂದ ಅವಳ ಕಡೆಗೆ ನೋಡಿ ಅವಳ ಕೈಗಳನ್ನು ಬಿಟ್ಟಳು.

"ಏನಾಯಿತು ಲೀಲಾ? ಜಗಳವಾಗುತ್ತಿದೆಯೇನು ಇಲ್ಲಿ?" ಎಂದು ಕೇಳುತ್ತ ಜನಾರ್ಧನ ಲೀಲೆಯ ಬಳಿಗೆ ಸಾರಿದ.

"ಏನಿಲ್ಲ ಜನ್ನ. ನೀರಜಾ ನಾರಾಯಣ್‌ರವರನ್ನು ಮದುವೆ ಯಾಗುವಳಂತೆ" ಎಂದು ಲೀಲೆ ತನ್ನನ್ನು ತಾನು ಹತೋಟಿಗೆ ತಂದು ಕೊಳ್ಳುತ್ತ ಹೇಳಿದಳು.

ಜನಾರ್ಧನ ತಟ್ಟನೆ ನುಡಿದ.

"ಸುಳ್ಳು ಲೀಲಾ. ಅದು ಹೇಗೆ ಸಾಧ್ಯ?"

"ಸುಳ್ಳಲ್ಲ, ನಿಜ" ನೀರಜೆ ಈಗ ಶಾಂತಳಾಗಿದ್ದಳು.

ಜನಾರ್ಧನ ನಾರಾಯಣನ ಕಡೆಗೆ ತಿರುಗಿ ಕೇಳಿದ,

"ನಾರಾಯಣ್, ಇವಳು ಹೇಳುತ್ತಿರುವುದೇನು?"

ನಾರಾಯಣನ ಮುಖ ಕಳಾಹೀನವಾಗಿತ್ತು. ಯಂತ್ರದಂತೆ ಮಾತುಗಳನ್ನು ಉಚ್ಛರಿದ,

"ನಿಜ ಜನಾರ್ಧನ್"

"ನಿಜ! ಮಾಲತಿ........?"

ನಾರಾಯಣನಿಗೆ ಉತ್ತರ ಕೊಡಲಾಗಲಿಲ್ಲ. ನೀರಜೆ ಕೇಳಿದಳು,

"ನಿನ್ನ ಕೆಲಸಕ್ಕೆ ನೀನು ಹೋಗು ಜನ್ನ. ನೀನು! ಲೀಲಾ! ಸರಿಯಾಗಿದ್ದೀರಿ. ಎಲ್ಲರ ಮಾತಿನಲ್ಲಿಯೂ ಬಾಯಿ ಹಾಕಿಕೊಂಡು ಬರಲು ನಿಮಗೆ ನಾಚುಗೆಯಾಗುವುದಿಲ್ಲವೆ?"

ಜನಾರ್ಧನ ಅವಳನ್ನೇ ಕ್ಷಣಕಾಲ ನಿಟ್ಟಿಸಿ ನೋಡಿದ, ಬಳಿಕ

"ತಾರಾನಾಥರಿಗೂ ಇದೇ ಮಾತನ್ನು ಹೇಳುವಿಯಲ್ಲವೆ, ನೀರಜಾ?" ಎಂದು ಲೀಲೆಯ ಕಡೆಗೆ ತಿರುಗಿದ, "ಬಾ, ಲೀಲಾ ಪಾಪ ಅವಳ ಮಾತು ನಮಗೇತಕ್ಕೆ? ಇಷ್ಟಕ್ಕೂ ನಾಳೆ ಇನ್ನೊಬ್ಬರು ನಾರಾಯಣ್‌ರವರಿಗಿಂತ ಉತ್ತಮ ವರ ದೊರಕಿದರೆ, ಅವಳು ತನ್ನ ಆತುರದ ಕೆಲಸಕ್ಕೆ ನಾಚಿಕೊಂಡಾಳು, ಪಶ್ಚಾತ್ತಾಪ ಪಟ್ಟಾಳು. ಅವಳ ರೀತಿ ಎಂದೂ ನಮ್ಮಿಂದ ಭಿನ್ನವಾದುದು ಎಂದು ನಮಗೆ ತಿಳಿದಿರಲಿಲ್ಲವೆ? ಏನಾದರೂ ಮಾಡಿಕೊಳ್ಳಲಿ, ಬಾ ನಾವು ಹೋಗೋಣ"

ಹೋಗ ಹೋಗುತ್ತ ಜನಾರ್ಧನ ನಾರಾಯಣನಿಗೆ ಒಂದು ಮಾತು ಹೇಳಿದ, "ನಾರಾಯಣ್, ನೀವು ಮರ್ಯಾದಸ್ಥರೆಂದು ತಿಳಿದಿದ್ದೆನಲ್ಲ ನಾನು! ದಯೆಯಿಟ್ಟು ನನ್ನನ್ನು ಮನ್ನಿಸಿ"

ಅವರಿಬ್ಬರೂ ಹೊರಟುಹೋದಮೇಲೆ ನೀರಜೆ ನಾರಾಯಣನ ಬಳಿ ಬಂದು ಕುಳಿತು ಹೇಳಿದಳು,

"ಅವರ ಮಾತಿಗೆ ಏನೂ ತಿಳಿದುಕೊಳ್ಳಬೇಡಿರಿ ನಾರಾಯಣ್. ಇದರ ಪೂರ್ಣಕಥೆ ಅವರಿಗೆ ಗೊತ್ತಿಲ್ಲ. ಅದನ್ನು ತಿಳಿಯುವ ಸಾಮರ್ಥ್ಯವೂ ಅವರಿಗಿಲ್ಲ"

ನಾರಾಯಣ ಅವಳ ಮುಖವನ್ನು ನೋಡಿದ. ಕೋಪ ದೈನ್ಯಗಳ ಚಿನ್ಹೆ ಸಹ ಇಲ್ಲದೆ ಪ್ರಫುಲ್ಲೆಯಾಗಿ ಮಾತನಾಡುತ್ತಿದ್ದಳು ನೀರಜೆ.

"ನೀರಜಾ, ತಾರಾನಾಥರು ಯಾರು?"

"ಓ ಅವನು ನಮ್ಮ ದೂರ ಸಂಬಂಧಿ. ನೋಡಿ ನಾರಾಯಣ್ ಲೀಲೆ ಹೇಳಿದ ಮಾತನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡಿರಿ. ನಮ್ಮ ಮನೆ

ಯಲ್ಲಿ ಹುಡುಗಿಯರು ಎಲ್ಲರೊಂದಿಗೆ ತಮಾಷೆಯಾಗಿ ಮಾತು ಕತೆ ಆಡುವುದುಂಟು. ಅದರಲ್ಲಿ ಏನೂ ಇಲ್ಲ."

"ಹುಂ" ಎಂದ ನಾರಾಯಣ.

ನೀರಜೆಗೆ ಅವನ ನೀರಸ ಉತ್ತರದಿಂದ ಒಂದು ಸ್ವಲ್ಪ ಉತ್ಸಾಹ ಭಂಗವಾಯಿತು, ತನ್ನಷ್ಟಕ್ಕೆ ತಾನೇ ಮಾತನಾಡುವವಳಂತೆ ಹೇಳ ತೊಡಗಿದಳು,

"ಪಾಪ, ತಾರಾನಾಥ! ಅವನು ನನ್ನ ಮಾತು, ನಡತೆಗಳಿಗೆಲ್ಲ ವಿಪರೀತವಾಗಿ ಅರ್ಥಕಲ್ಪಿಸಿಬಿಟ್ಟ. ನಮ್ಮ ತಂದೆಯೂ ಅದಕ್ಕೆ ಸ್ವಲ್ಪ ಕಾರಣರಾದರು. ನನಗೆ ಅವನು ಒಂದು ದಿನ ತನ್ನ ಮನಸ್ಸಿನಲ್ಲಿ ಇದ್ದುದನ್ನು ಹೇಳಿದಾಗ, ನನಗೆ ಒಮ್ಮೆಲೇ ಅವನಿಗೆ ಆಶಾಭಂಗ ಮಾಡಲು ಮನಸ್ಸು ಬರಲಿಲ್ಲ. "ಈಗ ಈ ಮಾತು ಬೇಡ. ಮುಂದೆ ನೋಡೋಣ" ಎಂದು ಹೇಳಿದೆ. ಅದು ಯಾವ ರೂಪದಲ್ಲಿ ನಮ್ಮ ನೆಂಟರ ಮಧ್ಯೆ ಪ್ರಚುರವಾಯಿತೋ ನನಗೆ ತಿಳಿಯದು. ಅದೂ ಅಲ್ಲದೆ ನಮ್ಮ ತಾತನವರಿಗೆ ಈ ಸಂಬಂಧದ ಮಾತೇ ಸರಿಬೀಳುತ್ತಿರಲಿಲ್ಲ. ನನಗೆ ಎಷ್ಟೋ ಬಾರಿ, "ಏನು ಹುಚ್ಚು ನಿನಗೆ ನೀರಜಾ? ಅವನ ಸಂಪಾದನೆ ನಿನ್ನ ಅಲಂಕಾರ ದ್ರವ್ಯಗಳಿಗೇ ಸಾಲದು" ಎಂದು ಹೇಳುತ್ತಿದ್ದರು."

ಹಠಾತ್ತಾಗಿ ಮಾತಿನ ಮಧ್ಯೆ ನೀರಜೆಯ ಗಮನಕ್ಕೆ ಬಂದಿತು, ತನ್ನ ಮಾತುಗಳನ್ನು ನಾರಾಯಣ ಕೇಳುತ್ತಿಲ್ಲವೆಂದು, ಅವನು ಅವಳ ಕಡೆ ತಿರುಗಿದ್ದರೂ ದೃಷ್ಟಿ ಎಲ್ಲೋ ಅನಂತದಲ್ಲಿ ಲೀನವಾಗಿತ್ತೆಂದು.

ಒಂದು ಸಂಕುಚಿತ ನಗುವಿನೊಂದಿಗೆ ಅವಳು ಎದ್ದು ನಾರಾಯಣ ನನ್ನು ಎಬ್ಬಿಸಿದಳು.

"ಏಳಿ, ಏಳಿ. ಹೊರಗೆ ಹೋಗೋಣ. ನಾವಿಲ್ಲದೆ ಈ ಸಂಜೆಯ ಸೊಬಗು ವ್ಯರ್ಥವಾದೀತು"

"ಹುಂ ಹೋಗೋಣ ಬೇಕಾದರೆ" ಎಂದ ನಾರಾಯಣ.

ದಾರಿಯಲ್ಲಿ ನೀರಜೆ ನಾರಾಯಣ ವ್ಯಸ್ತನಾಗಿರಲು ಅವಕಾಶವನ್ನು ಕೊಡಲಿಲ್ಲ. "ನೋಡಿ ಹೇಗಿದೆ ಪ್ರಪಂಚ? ಮಾಲತಿಯ ವಿಷಯ

ನನಗೆ ಗೊತ್ತು, ಆದರೂ ಅದನ್ನು ಒಂದು ಬಾರಿಯೂ ನಾನು ಕೆದಕಿ, ಕೆಣಕಿ ಮಾತನಾಡಿಲ್ಲ. ನೀವು ಒಂದು ಸುಳ್ಳು ವರ್ತಮಾನವನ್ನು ಕೇಳಿ ಇಷ್ಟು ಹೌಹಾರಿ ಹೋಗಿದ್ದೀರಿ"

ನಾರಾಯಣ ಒಂದು ನಿಮಿಷ ವಿಚಾರಿಸಿ ನುಡಿದ,

"ಆ ವರ್ತಮಾನ ಕೇಳಿ ನನಗೇನೂ ಅನಿಸಲಿಲ್ಲ ನೀರಜಾ. ಆದರೆ ನಿಮ್ಮ ಚಂಡ ಕೋಪವನ್ನು ನೋಡಿ ನನಗೆ ಇನ್ನೂ ಚೇತರಿಸಿಕೊಳ್ಳ ಲಾರದಂತಹ ಆಶ್ಚರ್ಯವಾಗಿದೆ. ಇಷ್ಟು ದಿನಗಳೂ ಎಲ್ಲಿತ್ತು ಇದು ?"

ನೀರಜೆ ತುಸು ಹೊತ್ತು ಸುಮ್ಮನಿದ್ದಳು. ಅನಂತರದಲ್ಲಿ ಮೃದು ವಾಗಿ ನಗುತ್ತ ಹೇಳಿದಳು,

"ನಾರಾಯಣ್ ನೀವು ಹಸುಮಕ್ಕಳಂತೆ ಎಂದು ನನಗೆ ಗೊತ್ತಿ ದ್ದರೂ ಇಷ್ಟು ಸರಳರೆಂದು ತಿಳಿದಿರಲಿಲ್ಲ. ನಿಷ್ಕಪಟಿಗಳಿಗೆ ಬೇಗ ಕೋಪ ಬರುವುದೆಂದು ನಿಮಗೆ ತಿಳಿಯದೇ? ತೀಕ್ಷ್ಣವಾದರೂ ಅದು ಕ್ಷಣಿಕ ಕೋಪವಷ್ಟೆ. ಬಂದಂತೆಯೇ ಹೊರಟು ಹೋಯಿತು. ನನಗೆ—ನಿಮ್ಮ ದೃಷ್ಟಿಯಲ್ಲಿ ನನ್ನನ್ನು ಕೀಳು ಮಾಡಲು ಲೀಲೆ ಯತ್ನಿಸಿದಳೆನ್ನಿಸಿತು— ಆ ನಿಮಿಷದಲ್ಲಿ ಹುಚ್ಚು ಕೋಪ ಬಂಧಿತು. ಬಳಿಕ ಹೊರಟು ಹೋಯಿತು. ಮತ್ತೆ ಅವರು ನಿಮ್ಮನ್ನು ಅವಹೇಳನ ಮಾಡಲು ಉದ್ದೇಶಿಸಿ ಪ್ರಶ್ನಿಸುತ್ತಾರಲ್ಲ ಎಂದು ನಿಮಗಾಗಿ ಕೋಪ ಬಂದಿತು— ಹೀಗೆ ನನಗೆ ಕೋಪ ಬಂದೀತೆಂದು ನನಗೇ ತಿಳಿದಿರಲಿಲ್ಲ. ತಮಗೆ ಅತ್ಯಂತ ಪ್ರಿಯವಾದ ವಸ್ತು ದೂರವಾದೀತೆಂಬ ಅಂಜಿಕೆ ಬಂದರೆ ಎಂತಹ ಕುರಿಯಂತಹ ಮನುಷ್ಯನೂ ಹುಲಿಯಂತೆ ಕಾದುತ್ತಾನೆ ಎಂದು ಕೇಳಿದ್ದೆ. ಆದರೆ ಅದಕ್ಕೆ ನಾನೇ ಉದಾಹರಣೆಯಾಗುತ್ತೇನೆಂದು ತಿಳಿದಿರಲಿಲ್ಲ.

ಕೇವಲ ಅರ್ಧ ಗಂಟೆಯಲ್ಲಿ ನಾರಾಯಣನ ನೀರಸತೆ ಮಾಯ ವಾಗಿತ್ತು. ತಾನು ಬೊಂಬಾಯಿಗೆ ಹೋಗಿದ್ದ ವಿಷಯಗಳನ್ನೆಲ್ಲಾ ಮತ್ತೆ ವಿಶದವಾಗಿ ಹೇಳಿದ. ಇಬ್ಬರೂ ಭವಿಷ್ಯವನ್ನು ಕೂಲಂಕುಷವಾಗಿ ಚರ್ಚಿಸಿದರು. ಊಟಕ್ಕೆ ಕುಳಿತಾಗಲೂ ಅವರ ಮಾತಿಗೆ ಬಿಡುವಿರಲಿಲ್ಲ.

ರಾತ್ರಿ ಹತ್ತು ಗಂಟೆಯ ವರೆಗೂ ಆಡಿದ್ದರೂ ಅವರ ಮಾತು ಮುಗಿಯಲಿಲ್ಲ.

"ಬೆಳಿಗ್ಗೆ ಮುಂದುವರೆಸಿದರಾಯ್ತು" ಎಂದು ನೀರಜೆಯೇ ನಾರಾಯಣನನ್ನು ನಿದ್ರೆ ಮಾಡಲು ಅಟ್ಟಬೇಕಾಯಿತು.

ಲೀಲಾ ಜನಾರ್ಧನರು ಮರುದಿವಸ ಬೆಳಿಗ್ಗೆಯೂ ಅವರ ಜೊತೆಗೆ ಬರಲಿಲ್ಲ. ಅವರಿಗೂ ಈ ಹುಡುಗು ಬುದ್ಧಿಯವರ ಜೊತೆ ಬೇಕಾಗಿರಲಿಲ್ಲ. ಬೆಂಗಳೂರಿಗೆ ಹೊರಡಲು ಒಂದು ಟ್ಯಾಕ್ಸಿಯನ್ನು ಗೊತ್ತು ಮಾಡಿದರು. ಊಟ ಮಾಡಿಕೊಂಡು ಅಲ್ಲಿಂದ ಹೊರಡುವುದೆಂದು ನಿಶ್ಚಯಿಸಿದರು. ಬಳಿಕ ಪುರಸೊತ್ತೆಲ್ಲಿ? ಸಾಮಾನುಗಳನ್ನು ಆತುರಾತುರವಾಗಿ ಕಟ್ಟಿ ಊಟಮಾಡುವ ಹೊತ್ತಿಗೆ ಟ್ಯಾಕ್ಸಿ ಬಂದೇ ಬಿಟ್ಟಿತು,

ಹೊರಡುವುದಕ್ಕೆ ಮುಂಚೆ ಇಬ್ಬರೂ ಲೀಲಾ ಜನಾರ್ಧನರನ್ನು ನೋಡಿದರು,

"ನಾವು ಊರಿಗೆ ಹೋಗಿಬರುತ್ತೇವೆ ಲೀಲಾ, ಜನ್ನ." ನೀರಜೆ ಸ್ನೇಹಭಾವದಿಂದಲೇ ಹೇಳಿದಳು,

ಲೀಲೆ ಭುಜವನ್ನು ಕೊಡವಿಕೊಂಡು ಕಿಟಕಿಯಿಂದ ಆಚೆಗೆ ನೋಡಿದಳು, ಜನಾರ್ಧನ ನಾಟಕದವರಂತೆ ಕೈ ಎತ್ತಿದ.

"ಸಲಾಂ, ಹೊರಡಬಹುದು."

ನೀರಜೆ ನಗುತ್ತಲೇ ಟ್ಯಾಕ್ಸಿಯನ್ನು ಹತ್ತಿದಳು.

ನಾರಾಯಣನಿಗೆ ದಾರಿ ಕಳೆದುದೇ ತಿಳಿಯಲಿಲ್ಲ ನೀರಜೆಯ ಸುರಸ ಸಂಭಾಷಣೆಯಲ್ಲಿ ಮಧ್ಯೆ ಮದ್ದೂರಿನಲ್ಲಿ ಊಟ ಮುಗಿಸಿಕೊಂಡು ರಾತ್ರಿ ಎಂಟೂವರೆಯ ಹೊತ್ತಿಗೆ ಬೆಂಗಳೂರನ್ನು ಸೇರಿದರು.

ರಾಘವಯ್ಯನವರು ರಾಜಮ್ಮ ಇಬ್ಬರೂ ಇವರನ್ನು ನೋಡಿ ಚಕಿತರಾದರು.

"ಇದೇನು, ಇಷ್ಟು ಹೊತ್ತಿನಲ್ಲಿ?" ಎಂದು ಆತ ನಾರಾಯಣನನ್ನು ಕೇಳಿದರು.

"ಚಿಕ್ಕಪ್ಪಾ ಈಗ ಆ ಮಾತೆಲ್ಲ ಬೇಡ. ನಮಗೆ ತುಂಬಾ ಆಯಾಸ

ವಾಗಿದೆ. ನಾನು ಆಮೇಲೆ ನಿಮಗೆ ಎಲ್ಲ ವಿಷಯಗಳನ್ನೂ ಹೇಳುತ್ತೇನೆ" ಎಂದು ನೀರಜೆ ಚಿಕ್ಕಮ್ಮನ ಕಡೆಗೆ ನೋಡಿದಳು.

ರಾಜಮ್ಮ ಅವಳ ಮಾತನ್ನು ಅನುಮೋದಿಸಿದರು,

"ಹೌದು, ಪಾಪ! ಹೋಗು ನೀರಜಾ. ನಾರಾಯಣ್‌ರವರಿಗೆ ಜನಾರ್ಧನನ ಕೊಠಡಿಯನ್ನು ತೋರಿಸು. ನಾನು ಹೋಗಿ ಅಡಿಗೆಯನ್ನು ಸ್ವಲ್ಪ ಬಿಸಿಮಾಡಲು ಹೇಳುತ್ತೇನೆ."

"ಆಗಲಿ, ಬೆಳಿಗ್ಗೆ ಅದೇನು ವಿಷಯವೋ ಕೇಳೋಣವಂತೆ" ಎಂದು ರಾಘವಯ್ಯ ತಮ್ಮ ಕೊಠಡಿಯ ಕಡೆಗೆ ಹೊರಟರು.

ನಾರಾಯಣ ಏನೋ ಹೇಳಲು ಹೋದ. ರಾಜಮ್ಮ ಅವನನ್ನು ತಡೆದರು,

"ಏನೂ ಹೇಳಬೇಕಾಗಿಲ್ಲಪ್ಪ, ನನಗೆಲ್ಲಾ ಗೊತ್ತು. ಇನ್ನೂ ಹೊಸ ವಿಚಾರಗಳಿದ್ದರೆ ನೀರಜೆ ಹೇಳುತ್ತಾಳೆ."

ಸರಿ, ಬಿಸಿ ಬಿಸಿ ಊಟವಾಯಿತು. ಮೆತ್ತನೆಯ ಸುಪ್ಪತ್ತಿಗೆಯಲ್ಲಿ ಮಲಗಿ ರೇಡಿಯೋವಿಂದ ಸಣ್ಣಗೆ ಬರುತ್ತಿದ್ದ ಸಂಗೀತವನ್ನು ಕೇಳುತ್ತ ನಾರಾಯಣ ನಿದ್ರೆಹೋದ.

ಮರುದಿವಸ ಆರು ಗಂಟೆಗೇ ರಾಜಮ್ಮ ಬಂದು ನಾರಾಯಣನನ್ನು ಎಚ್ಚರಿಸಿದರು.

"ಬೆಳಗಿನ ಗಾಡಿಗೇ ಹೊರಡುವಿರಂತೆ, ಏಳೀಪ್ಪ. ನಾನು ಇವರಿಗೆ ಹೇಳಬೇಕಾದುದನ್ನು ಹೇಳುತ್ತೇನೆ. ಹಳೆಯಕಾಲದವರು, ಸುಮ್ಮನೆ ಇಲ್ಲದ್ದೊಂದು ಗಲಾಟೆ ಮಾಡಿಯಾರು. ಅದಕ್ಕೆ ಏತಕ್ಕೆ ನೀವು ಸಿಕ್ಕಿಕೊಳ್ಳಬೇಕು ?"

ರಾತ್ರೆ ನಿದ್ರೆ ಮಾಡಿದ್ದರೂ, ನಾರಾಯಣನಿಗೆ ಏಕೋ ಅಷ್ಟಾಗಿ ಲವಲವಿಕೆಯಿರಲಿಲ್ಲ.

"ಏಕೋ ಉಸಿರಾಡಲು ಅವಕಾಶವಿಲ್ಲದಂತೆ ಏನೇನೋ ಒಂದರ ಹಿಂದೆ ಒಂದು ನಡೆಯಬೇಕಾಗಿದೆ" ಎಂದುಕೊಂಡು ಎದ್ದ.

ಇವರ ಸ್ನಾನ ಉಪಹಾರಗಳು ಮುಗಿಯುತ್ತಲೇ ಆಳು ಗಾಡಿ

ಯನ್ನು ತರಲು ಹೋದ. ಅವನು ಬರುವುದರೊಳಗೆ ನಾರಾಯಣ ನೀರಜೆಯರು ಉಡುಪನ್ನು ಧರಿಸಿಕೊಂಡು ಸಿದ್ಧರಾದರು.

"ಇನ್ನು ಬರೋಣವೇ ಚಿಕ್ಕಮ್ಮ?"

"ಹುಂ ಹೋಗಿ ಬನ್ನಿ. ನಾನು ಸಾಧ್ಯವಾದರೆ ಇನ್ನೊಂದು ವಾರದಲ್ಲಿ ಬರುತ್ತೇನೆ" ಎಂದು ರಾಜಮ್ಮ ಅವರನ್ನು ಬೀಳ್ಕೊಂಡರು.

ಗಾಡಿಯಲ್ಲಿ ನೀರಜೆ ನಾರಾಯಣನನ್ನು ಕೇಳಿದಳು,

"ಏತಕ್ಕೆ ಹೀಗಿದ್ದೀರಿ? ನಿದ್ರೆ ಬರಲಿಲ್ಲವೇ ರಾತ್ರೆ?"

"ಬಂತು. ಆದರೆ ಅಷ್ಟು ಚೆನ್ನಾಗಿ ಬರಲಿಲ್ಲ. ಸಾಕುಸಾಕಾಗಿ ಹೋಗಿದ್ದುದು ಒಳ್ಳೆಯ ನಿದ್ರೆಗೆ ಅವಕಾಶವಿರಲಿಲ್ಲವೇನೋ"

"ಅಷ್ಟು ಸುಸ್ತಾಗುವುದಕ್ಕೆ ಏನಾಯಿತು?"

ನಾರಾಯಣನಿಗೂ ಅದೇ ಅನ್ನಿಸಿದ್ದು, ಏನೋ ಆಯಾಸ. ದೇಹಕ್ಕೆ ಮಾತ್ರವಲ್ಲ ಮನಸ್ಸಿಗೂ ಕಿರಿಕಿರಿಯಾದಂತಿತ್ತು.

"ಈಗ್ಗೆ ಒಂದು ವಾರದಿಂದ ತುಂಬ ಗಡಿಬಿಡಿಯಾಗಿ ಬಿಟ್ಟದೆ. ಆದರಿಂದ ಒಂದು ತರಹೆ ಆಗಿದೆ. ಸ್ವಲ್ಪ ವಿಶ್ರಾಂತಿ ಸಿಕ್ಕಿದರೆ ಸರಿ ಹೋದೀತು"

"ಗಾಡಿಯಲ್ಲಿ ಒಂದು ಬಾರಿ ಕುಳಿತುಬಿಟ್ಟರೆ ಗುಂತಕಲ್ಲು ಸಿಗುವ ವರೆಗೂ ನಿದ್ದೆಯನ್ನೇ ಮಾಡಬಹುದು ಬೇಕಾದರೆ. ವಿಶ್ರಾಂತಿಗೇನು?" ಎಂದಳು ನೀರಜೆ.

"ನೀವು? ನಿಮಗೆ ವಿಶ್ರಾಂತಿ ಬೇಡವೇ?" ಎಂದು ನಗುತ್ತ ಕೇಳಿದ ನಾರಾಯಣ.

"ನನಗೆ? ಚಿಂತೆಯಿಲ್ಲ ಇಲ್ಲದಿದ್ದರೆ ಬಹುಶಃ ನಾನು ಬೊಂಬಾಯಿಗೆ ಹೋಗುವಾಗಲೂ ಬರುವಾಗಲೂ ಒಬ್ಬಳೇ ಇರುತ್ತೇನೆ. ಆಗ ಹೇಗೆ–ನಿದ್ರೆ ಬಂದರೂ–ನಿದ್ರೆ ಮಾಡುವುದು? ಈಗಲೂ ಹಾಗೆಯೇ ತಿಳಿದುಕೊಂಡರಾಯ್ತು"

"ನನಗೂ ನಿದ್ರೆ ಮಾಡುವ ಅಭ್ಯಾಸವಿಲ್ಲ ರೈಲುಗಾಡಿಯಲ್ಲಿ" ಎಂದ ನಾರಾಯಣ, "ವಿಶ್ರಾಂತಿ ಬೇಕಾದರೆ ಸುಮ್ಮನೆ ಕಾಲುಗಳನ್ನು ನೀಡಿ ಕೊಂಡು ಮಲಗಿದರೇ ಸಾಕು. ನಿದ್ದೆಯೇ ಬೇಕೆಂದಿಲ್ಲ"

ನಿಲ್ದಾಣದಲ್ಲಿ ಆದೇ ತಾನೇ ಗುಂತಕಲ್ಲಿನ ಕಡೆಗೆ ಹೋಗುವ ಗಾಡಿ ಸಿದ್ಧವಾಗಿ ಬಂದಿತ್ತು. ಎರಡನೆ ತರಗತಿಯಲ್ಲಿ ಉತ್ತಮವಾದ ಜಾಗವೊಂದನ್ನು ನೋಡಿ ನಾರಾಯಣ ನೀರಜೆಯನ್ನು ಕೂಡಿಸಿದ. ಸಾಮಾನುಗಳನ್ನೆಲ್ಲ ಸರಿಯಾಗಿ ಇಡಿಸಿದ ಬಳಿಕ ಟಿಕೇಟನ್ನು ತರಲು ಗಾಡಿಯಿಂದ ಇಳಿದ.

"ಹಾಗೆಯೇ ಒಂದು ವರ್ತಮಾನ ಪತ್ರಿಕೆಯನ್ನೂ ಹಿಡಿದು ಕೊಂಡು ಬನ್ನಿ" ನೀರಜೆ ಅವನಿಗೆ ಹೇಳಿದಳು, "ಒಬ್ಬರಿಗೆ ನಿದ್ರೆ ಬಂದರೆ ಇನ್ನೊಬ್ಬರಿಗೆ ಏನಾದರೂ ಓದಲಿಕ್ಕೆ ಇರಲಿ"

"ಆಗಲಿ" ಎಂದು ಹೊರಟ ನಾರಾಯಣ.

ಇನ್ನೂ ಟಿಕೇಟುಗಳನ್ನು ಕೊಡುವುದಕ್ಕೆ ಪ್ರಾರಂಭಿಸಿರಲಿಲ್ಲ ಗುಂತಕಲ್ಲಿನ ಗಾಡಿಗೆ "ಇನ್ನು ಹತ್ತು ನಿಮಿಷ ಸ್ವಾಮಿ" ಎಂದ ಆ ಗುಮಾಸ್ತೆ.

"ಪರವಾ ಇಲ್ಲ ಅಷ್ಟು ಹೊತ್ತಿಗೆ ವರ್ತಮಾನ ಪತ್ರಿಕೆಯನ್ನು ತಂದುಬಿಡುತ್ತೇನೆ" ಎಂದು ಹಿಂದಿರುಗಿದ ನಾರಾಯಣ.

ವರ್ತಮಾನ ಪತ್ರಿಕೆಯನ್ನು ತೆಗೆದುಕೊಂಡು ನಾರಾಯಣ ಹಿಂದಿರುಗಿ ನೀರಜೆಯಿದ್ದ ಗಾಡಿಯ ಬಳಿಗೆ ಬಂದಾಗ ನೀರಜೆ ಕಿಡಿಕೆಯ ಮೂಲಕ ಯಾರೊಡನೆಯೋ ಮಾತನಾಡುತ್ತಿದ್ದಳು. ನಾರಾಯಣ ಇಪ್ಪತ್ತು ಮಾರು ದೂರದಲ್ಲಿರುವಾಗಲೇ ಅವರ ನಗು ಇವನ ಕಿವಿಗೆ ಬಿದ್ದಿತು,

"ಹಾಗಾದರೆ ತಾವು ಇನ್ನು ನಮ್ಮಂಥಾ ಬಡವರೊಡನೆ ಮಾತ ನಾಡುವುದಿಲ್ಲ ?" ಆ ಆಗಂತುಕ ಅವಳನ್ನು ಕೇಳಿದ ಗಟ್ಟಿಯಾಗಿಯೇ.

"ನೋಡಬೇಕಾದರೆ ಮುಂಚಿತವಾಗಿ ತಿಳಿಸಿ, ಅಪ್ಪಣೆ ಕೊಟ್ಟರೆ ನಾನು ಅನಂತರದಲ್ಲಿ ನೀವು ಬಂದು ನನ್ನನ್ನು ನೋಡಬಹುದು" ಎಂದಳು ನೀರಜೆ.

"ಓಹೋಹೋ, ಹಾಗೋ ? ಒಳ್ಳೆಯದು ನೀರಜಾ, ನಿನ್ನ ಮುಂದಿನ ನಿವಾಸದ ವಿಳಾಸವನ್ನಾದರೂ ಕೊಡು. ಆಗಾಗ ಬಂದು

ನೀನು ನಿನ್ನ ಗುಗ್ಗು ಪತಿಯೊಂದಿಗೆ ಜಗಳವಾಡುವಾಗ ನಿನ್ನ ಬಲವಾಗಿ ಬರುತ್ತೇನೆ"

ಜಗಳ ಇರುವುದಿಲ್ಲ. ಆದರೂ ಇಷ್ಟವಿದ್ದರೆ ಬರಬಹುದು. ಇಲ್ಲಿಯೇ ಒಂದು ಭಾರಿ ಮನೆಯಿದೆ ಅವರಿಗೆ. ಅಲ್ಲೇ ನಾನು ಇರುವುದು ಎಂದು ಕೊಂಡಿದ್ದೇನೆ."

"ಅವರಿಗೆ ತಾಯಿ ತಂದೆ ಇದ್ದಾರಷ್ಟೆ? ಅಂದಮೇಲೆ ನಿಮಗೆ ಅವರ ಮೇಲೆ ಪೂರ್ತಿ ಅಧಿಕಾರವೆಲ್ಲಿ ಬಂದಿತು ?"

"ನನ್ನ ಹಕ್ಕನ್ನು ನಾನು ಯಾರಿಗೂ ಬಿಟ್ಟುಕೊಡುವುದಿಲ್ಲ. ನನ್ನನ್ನು ಕೆಣಕಿದರೆ........"

ನಾರಾಯಣನಿಗೆ ನೀರಜೆಯ ಮಾತುಗಳನ್ನು ಕೇಳಿ ಆಶ್ಚರ್ಯ ವಾಯಿತು. ಯಾವನೊಂದಿಗೋ ಇಷ್ಟು ಸಲಿಗೆಯಿಂದ ಏತಕ್ಕೆ ಹೀಗೆ ಮಾತನಾಡುತ್ತಾಳೆ ಎಂದು ಬೇಸರವೂ ಆಯಿತು. ಹಾಗೆಯೇ ಮನಸ್ಸಿನಲ್ಲಿ ಅಂದುಕೊಂಡ,

"ಛೇ ಮಾಲತಿ ಎಂದೂ ಹೀಗೆ ಇತರರೊಡನೆ ಚೆಲ್ಲಾಟವಾಡುತ್ತಿರಲಿಲ್ಲ"

ಈ ಮಾತು ಮನಸ್ಸಿಗೆ ಬಂದ ಕೂಡಲೆ ಅವನಿಗೆ ಅಚ್ಚರಿಯಾಯಿತು. "ಇದೇನಿದು? ಎರಡು ದಿನಗಳಿಂದ ಪೂರ್ತಿ ಮರೆತಿದ್ದ ಮಾಲತಿಯ ನೆನಪು ಈಗ ಹಠಾತ್ತಾಗಿ ಬರುವುದೇಕೆ? ಹೇಗೂ ಈಗ ನಾನೂ ಅವಳೂ ದೂರವಾದೆವು ಇನ್ನು ಅವಳಿಗೂ ನನಗೂ ಸಂಬಂಧವಿಲ್ಲ"

ನೀರಜೆ ಆ ಮನುಷ್ಯನಿಗೆ ಹೇಳುತ್ತಿದ್ದಳು,

"ಅವರ ಮೊದಲಿನ ಪತ್ನಿಗೆ ಅವರಲ್ಲಿ ಸ್ವಲ್ಪವೂ ಅಭಿಮಾನವಿರಲಿಲ್ಲ. ಅದಕ್ಕೇ ನಾನು ಒಪ್ಪಿದೆ. ಇಲ್ಲದಿದ್ದರೆ........"

ಆತ ಹೇಳಿದ,

"ನಿನಗೆ ಹೇಗೆ ಗೊತ್ತು ನೀರಜಾ ಅವರಿಗೆ ಅಭಿಮಾನವಿತ್ತೋ ಇಲ್ಲವೋ ಎಂದು? ಆಕೆಗೆ ಮನೆಯಲ್ಲಿ ಮಕ್ಕಳು ಇರಬಹುದು. ಮನೆ

ಗೆಲಸ, ಮಕ್ಕಳ ಸೇವೆಯಲ್ಲಿ ಇವರ ಹಿಂದೆ ಮುಂದೆ ನಿನ್ನಂತೆ ಆಕೆ ಕುಣಿದಾಡದೇ ಇರಬಹುದು........"

"ಅದೇನೋ ಅದೆಲ್ಲಾ ಕಟ್ಟಿಕೊಂಡು ನಾನೇನು ಮಾಡಲಿ? ಅವಳು ಪತಿಯನ್ನು ಸರಿಯಾಗಿ ಕೈಯಲ್ಲಿ ಇಟ್ಟುಕೊಳ್ಳದೆ ಇದ್ದದ್ದು ಅವಳ ತಪ್ಪು"

"ಹಾಗೆ ಹೇಳು. ತಿಳಿಯದೇ ಆಕೆಯನ್ನು ಆರೋಪಿಸುವುದಕ್ಕಿಂತ, "ಅವರಿಗೆ ದುಡ್ಡಿದೆ ಅದು ನನಗೆ ಬೇಕು" ಎಂದು ಸ್ಪಷ್ಟವಾಗಿ ಹೇಳು. ನಿನಗೆ ಬೇಕಾದುದನ್ನು ಹೇಗೆ ತೆಗೆದುಕೊಳ್ಳುವುದು ಎಂದು ನೀನು ಬಲ್ಲೆ, ಅಲ್ಲವೆ ನೀರಜಾ ?"

ನೀರಜೆ ಗಟ್ಟಿಯಾಗಿ ನಗುತ್ತ ಹೇಳಿದಳು,

"ನೀವೇನಾದರೂ ಹೇಳಿಕೊಳ್ಳಿ. ನನಗೆ ಅದರಿಂದ ಬೇಸರವಿಲ್ಲ"

ನಾರಾಯಣನ ಕಿವಿಗೆ ಇವರ ಸಂವಾದ ಹಿತವಾಗಿರಲಿಲ್ಲ. ಮುಂದಕ್ಕೆ ಅಲ್ಲಿಂದ ಹೆಜ್ಜೆ ಇಡದೆ ಹಿಂದಿರುಗಿದ.

"ನೀರಜೆಗೇನೋ ತಿಳಿಯದು. ಆದರೆ ನಿನಗೆ ತಿಳಿಯದೇ ಮಾಲತಿಗೆ ಎಷ್ಟು ಕೆಲಸದ ಗಡಿಬಿಡಿಯೆಂದು ? ಅಷ್ಟು ಕೆಲಸದ ಮಧ್ಯೆ ನಿನ್ನನ್ನು ಸದಾ ಸಂತೋಷಪಡಿಸುತ್ತಿರಲಿಲ್ಲವೆಂದೇ ಇಟ್ಟುಕೊಳ್ಳೋಣ. ಆದರೆ ಅದರಿಂದ ಅವಳಿಗೆ ನಿನ್ನಲ್ಲಿ ತಾತ್ಸಾರವೆಂದು ಹೇಗೆ ಕಲ್ಪನೆ ಮಾಡಿದೆ ?" ಎಂದು ಅವನ ಮನಸ್ಸಿನಲ್ಲಿ ಒಂದು ಪ್ರಶ್ನೆ ಎದ್ದಿತು.

"ಇಲ್ಲ ನನ್ನ ಕಲ್ಪನೆಯಲ್ಲ ಅದು. ಮಾಲತಿ ಕೆಲಸಕ್ಕೆ ಸೇರಿದ ಮೇಲೆ ನಾನು ಅವಳಿಗೆ ಬೇಕಿಲ್ಲವೆಂದು ಎಷ್ಟು ಬಾರಿ ತೋರ್ಪಡಿಸಿ ಕೊಂಡಳು ? ಮೊನ್ನೆಯ ಜಗಳ ಬೇರೆ—" ಎಂದು ಆ ಪ್ರಶ್ನೆಯನ್ನು ಅದುಮಿಡಲು ಯತ್ನಿಸಿದ,

"ಆದರೆ ಮಾಲತಿಯನ್ನು ಬಲಾತ್ಕಾರವಾಗಿ ಕೆಲಸಕ್ಕೆ ಸೇರಿಸಿ ದವರ್ಯಾರು ?"

"ಅವಳು ಕೆಲಸಕ್ಕೆ ಸೇರುವ ಮೊದಲು ಈ ಅತೃಪ್ತಿ ಇತ್ತೇ ?"

"ನೀನು ಇಷ್ಟು ಅವಳಿಗೆ ಕಣ್ಣಿಗೆ ಮಣ್ಣೆರಚಿ ಮೋಸಮಾಡ

ಬಹುದು. ಅವಳು ಜಗಳವಾಡ ಕೂಡದೋ? ನೀರಜೆಗೆ ಕೋಪ ವಿಲ್ಲವೋ?"

"ಕೈ ತುಂಬ ಹಣವಿದೆ, ಕೆಲಸವಿಲ್ಲ, ಜವಾಬ್ದಾರಿಯಿಲ್ಲ, ನೀರಜೆಗೆ. ಮಾಲತಿ ಇದೇ ರೀತಿ ಸುಮಾರಾಗಿ ಇದ್ದಾಗ ಅವಳು ಹೇಗಿರುತ್ತಿದ್ದಳು?"

ಒಂದೇ ಸಮನೆ ನಾರಾಯಣನ ಮನಸ್ಸಿನಲ್ಲಿ ಪ್ರಶ್ನೆಗಳು ಏಳಲಾ ರಂಭಿಸಿದುವು.

"ಛೇ ಇದೇನಿದು, ನೀರಜೆ ಯಾರೊಡನೆಯೋ ಸ್ವಲ್ಪ ನಗುನಗುತ್ತ ಮಾತನಾಡಿದರೆ ನನಗೇನೇನೋ ಆಗುತ್ತಿದೆಯಲ್ಲ? ಮಾಲತಿಯೇ ಹೀಗೆ ಮಾಡಿದ್ದರೆ ನನಗೆ ಏನೂ ಅನ್ನಿಸುತ್ತಲೇ ಇರಲಿಲ್ಲ." ಎಂದುಕೊಂಡ.

ಮರುಕ್ಷಣ ಅವನಿಗೆ ತಾನು ಅಂದುಕೊಂಡಿದ್ದು ಅಸಂಭವವೆನ್ನಿಸಿತು,

"ಮಾಲತಿ ಎಂದಿಗೂ ಹೀಗೆ........"

"ಅರೇ ಇದೇನು! ಮತ್ತೆ ಅದನ್ನೆ ಯೋಚಿಸುತ್ತಿದ್ದೇನೆ! ಯಾವುದು ತಾನೇ ಅಸಂಭವವಾಗಬೇಕು? ನನ್ನ ಮಾಲತಿಯ ಸಂಬಂಧ ಕಡಿದು ಹೋಯಿತು. ಇನ್ನು ಅವಳು ಏನಾದರೂ ಮಾಡಿಕೊಳ್ಳಲಿ. ಅದನ್ನು ತೆಗೆದುಕೊಂಡು ನನಗೇನು?—ಆದರೂ ನನಗೆ ಗೊತ್ತು, ಮಾಲತಿ ಎಂದೂ ಹೀಗೆ ಚೆಲ್ಲಾಟಕ್ಕೆ ಹೋಗುವವಳಲ್ಲ. ಎರಡು ಮಕ್ಕಳ ತಾಯಿ. ಅವರ ರಕ್ಷಣೆ ಹೊರತು ಇನ್ನಾವ ಯೋಚನೆಯೂ ಅವಳ ಮನಸ್ಸಿನಲ್ಲಿ ಬರಲಾರದು."

ಹಾಗೆಯೇ ಅವನಿಗೆ ಅವತ್ತು ಬಸ್ಸಿನಲ್ಲಿ ನಡೆದ ಸಂಭಾಷಣೆ ನೆನಪಿಗೆ ಬಂದಿತು,

"ಆ ಹುಡುಗಿ ತನ್ನ ಪತಿ ಬೇರೊಬ್ಬಳನ್ನು ಮದುವೆಯಾದನೆಂದು ತಿಳಿದಮೇಲೆ, ತಾನೂ ಅಲ್ಲಿಯ ಕೆಲಸಗಾರನೊಬ್ಬನನ್ನು ಮತ್ತೆ ಮದುವೆಯಾದಳು. ಮಾಲತಿ! ಮಾಲತಿಗೆ ತಾನು ನೀರಜೆಯನ್ನು ಮದುವೆ ಮಾಡಿಕೊಳ್ಳುವೆನೆಂದು ತಿಳಿದರೆ ಏನು ಮಾಡಬಹುದು?"

ಕೋಪದಿಂದ ಅವನನ್ನು ಮನೆಯಿಂದ ಆಚೆಗೆ ಕಳುಹಿಸಿದ ಮಾಲತಿಯ ಮೂರ್ತಿ ಅವನ ಕಣ್ಣೆದುರಿಗೆ ಬಂದಿತು,

"ಅವಳಿಗೆ ಬಹಳ ಕೋಪ ಬರಬಹುದು. ಕೋರ್ಟಿನಲ್ಲಿ ನನ್ನ ಮೇಲೆ ಫಿರ್ಯಾದನ್ನು—ಛೇ ಎಂದಿಗೂ ಇಲ್ಲ. ಸ್ವಲ್ಪ ರೇಗಾಡಿ ಕೂಗಾಡ ಬಹುದು. ಬಳಿಕ ಅಳಬಹುದು, ನನಗೆ ಪತ್ರ ಬರೆಯಬಹುದು...."

ಯೋಚಿಸುತ್ತ ಯೋಚಿಸುತ್ತ ನಾರಾಯಣ ಟಿಕೀಟನ್ನು ಕೊಳ್ಳು ವೆಡೆಗೆ ಬಂದಿದ್ದ. ಯಂತ್ರದಂತೆ ಹಣವನ್ನು ಕಿಟಕಿಯಿಂದ ಒಳಗಿಟ್ಟು ಹೇಳಿದ,

"ಬೊಂಬಾಯಿಗೆ ಎರಡು ಟಿಕೀಟುಗಳು, ಎರಡನೆ ತರಗತಿಯವು."

ಟೀಕೀಟುಗಳನ್ನು ತೆಗೆದುಕೊಂಡಮೇಲೆ ಅವನಿಗೆ ತಾನು ಮೊದಲು ಅಂದುಕೊಂಡಂತೆ ಆಗದೆಯೇ ಇರಬಹುದು ಎನ್ನಿಸಿತು,

"ಮಾಲತಿಗೆ ಈಗ ಬಹಳ ಅಭಿಮಾನ ಬಂದಿದೆ. ಅವಳೆಂದಿಗೂ ಪತ್ರ ಬರೆಯಲಾರಳು. ಕೋರ್ಟು ಕಛೇರಿಗೆ ಹೋದರೂ ಹೋಗ ಬಹುದು. ಇನ್ನೂ ಕೋಪದ ಆವೇಶವಿದ್ದರೆ ನನ್ನ ಮೇಲೆ ಸೇಡು ತೀರಿಸುವ ಸಲುವಾಗಿ ಮತ್ತೆ ಇನ್ಯಾರನ್ನಾದರೂ........"

ಹೀಗೆನ್ನಿಸಿದ ಕೂಡಲೇ ನಾರಾಯಣನ ಮನಸ್ಸು ಹುಚ್ಚೆದ್ದು ಕುಣಿಯಿತು,

"ಇಲ್ಲ, ಹೀಗೆಂದಿಗೂ ಆಗದು" ಎಂದು ತನಗೆ ತಾನೇ ಹೇಳಿ ಕೊಂಡ.

"ಆಗದೆಂದು ಹೇಗೆ ಗೊತ್ತು? ಸಂಬಂಧ ಕಡಿದು ಹೋದಮೇಲೆ ಅವಳೇನಾದರೂ ಮಾಡಿಕೊಳ್ಳಬಹುದಷ್ಟೆ?" ಎಂದು ಅಂದೇ ಅನ್ನಿಸಿತು ಮನಸ್ಸಿಗೆ, "ಇದಕ್ಕೂ ನೀನು ಸಿದ್ಧನಾಗಿರಬೇಕು. ಮುಂದೆ ಒಂದು ದಿನ ನೀನು ಅವಳನ್ನು ಸಂಧಿಸಿದರೆ,............"

ನಾರಾಯಣನ ಮುಖ ಬೆವತು ಸುರಿಯಲಾರಂಭಿಸಿತು. ಬಾಯಿ ಒಣಗಿತು.

"ಹೀಗೇನಾದರೂ ಆದರೆ ನನಗೆ ನಿಜವಾಗಿ ಹುಚ್ಚು ಹಿಡಿಯುತ್ತದೆ." ಎಂದುಕೊಂಡ.

ನಿಲ್ಲಲಾರದೆ ನಾರಾಯಣ ಅಲ್ಲಿಯೇ ಇದ್ದ ಒಂದು ಬೆಂಚಿನಮೇಲೆ ಕುಳಿತುಕೊಂಡ. ಮನಸ್ಸು ನಾಗಾಲೋಟದಿಂದ ಓಡುತ್ತಿತ್ತು.

"ಅಂದರೆ ಅರ್ಥ ಗೊತ್ತೇ? ನೀರಜೆ ಹೇಳಿದಂತೆ ಮಾಲತಿ ನಿನ್ನ ಮೇಲೆ ಸಂಪೂರ್ಣವಾಗಿ ತನ್ನ ಹಕ್ಕನ್ನು ಸ್ಥಾಪಿಸಿಬಿಟ್ಟಿದ್ದಾಳೆ. ಅವಳಿಗೆ ನೀನು ಬೇಕೋ ಬೇಡವೋ ಎಂಬ ಪ್ರಶ್ನೆಯೇ ಇಲ್ಲ ಇಲ್ಲಿ. ನಿನಗೆ ಅವಳು ಬೇಕು."

"ಆದರೆ ನೀರಜೆ?"

"ನೀರಜೆಗೆ ಇಲ್ಲಿ ಸ್ಥಾನವಿಲ್ಲ. ಅವಳ ಚಿಂತೆಯನ್ನು ನೀನು ಮಾಡಬೇಡ. ನಿನಗೆ ಹಿಡಿಯುವ ಹುಚ್ಚನ್ನು ಹತ್ತು ಜನ ನೀರಜೆಯರು ಬಿಡಿಸಲಾರರು."

"ನಿಜ, ನಿಜ" ಎಂದುಕೊಂಡ ನಾರಾಯಣ,

"ಹಾಗಾದರೆ ಇನ್ನು ಮನೆಗೆ, ಮಾಲತಿಯಲ್ಲಿಗೆ ಹಿಂದಿರುಗು" ಮನಸ್ಸು ಹೇಳುತ್ತಿತ್ತು ಒಂದು ಕಡೆ.

ಕಾಲುಗಂಟೆ ತನ್ನೊಂದಿಗೇ ತಾನು ಹಿಗ್ಗಾಮುಗ್ಗಲಾಡಿ ಕೊನೆಗೆ ನಾರಾಯಣ ಸ್ವಲ್ಪ ಶಾಂತನಾದ,

"ಎಲ್ಲ ನಿಜ. ಮಾಲತಿಗೆ ನಾನು ಬೇಡದೆ ಇರಬಹುದು. ನೀರಜೆಗೆ ಬೇಕಾಗಿರಬಹುದು. ಆದರೆ ಮಾಲತಿ ಎಂದೆಂದೂ ನನ್ನವಳೇ ಆಗಿರದಿದ್ದರೆ ನನಗೆ ಬದುಕಿರಲಾಗುವುದಿಲ್ಲ. ಅವಳು ನನಗೆ ಹೆಚ್ಚೋ. ಅಥವಾ ನನ್ನ ಮರ್ಯಾದೆಯೇ ಈ ರೂಪದಿಂದ ನನ್ನನ್ನೆಳೆಯುತ್ತದೋ ಇಲ್ಲವೇ ನನ್ನ ಮಕ್ಕಳಿಗಾಗಿ ಅವಳಲ್ಲಿ ನನಗೆ ಈ ಮೋಹವೋ ಗೊತ್ತಾಗುವುದಿಲ್ಲ—ಹುಂ, ಇರಲಿ—ಏನು ಮಾಡುವುದು, ಮತ್ತೆ ಮನೆಗೆ ಹೋಗುವುದೇ ಸರಿಯಾದ ಮಾರ್ಗ.

ಸ್ವಲ್ಪ ದೂರದಲ್ಲಿ ರೇಲ್ವೆ ನೌಕರನೊಬ್ಬ ಹೋಗುತ್ತಿದ್ದ. ನಾರಾಯಣ ಅವನನ್ನು ಕರೆದು, ಆ ಎರಡು ಟಿಕೇಟುಗಳನ್ನೂ ಒಂದು ಕಾಗದದಲ್ಲಿ ಸುತ್ತಿ ಕೊಟ್ಟು,

"ನೋಡು, ಇದನ್ನು ಅಲ್ಲಿ ಎರಡನೆಯ ತರಗತಿಯಲ್ಲಿ ಕುಳಿತು ಕೆಳಗೆ ನಿಂತಿರುವರೊಡನೆ ಮಾತನಾಡುತ್ತಿದ್ದಾರಲ್ಲ ಅವರಿಗೆ ಕೊಡು. ಓಡು ಬೇಗ. ಹಿಂದಿರುಗಿ ಬಂದ ಮೇಲೆ ನಾಲ್ಕಾಣೆ ಕೊಡುತ್ತೇನೆ"

ನೌಕರ ಓಡಿಹೋಗುವುದನ್ನು ನೋಡುತ್ತ ನಾರಾಯಣನಿಗೆ ಸ್ವಲ್ಪ ನಗುವೇ ಬಂದಿತು.

"ಪಾಪ! ನೀರಜಾ. ಬೆಂಗಳೂರಿನ ದೊಡ್ಡಮನೆ ನಿನಗೆ ಕನಸಿನ ಮನೆಯಾಯಿತು. ಈಗ ಬಹುಶಃ ಆ ತಾರಾನಾಥ—ಇದನ್ನು ನೆನೆಸಿ ಕೊಂಡರೆ ನನಗೇಕೆ ಅಷ್ಟು ಉದ್ವೇಗವಾಗುವುದಿಲ್ಲ!" ನಾರಾಯಣನಿಗೆ ಆಶ್ಚರ್ಯವಾಯಿತು, "ನಿನ್ನೆ ಸ್ವಲ್ಪ ಒಂದು ತರಹೆ ಇತ್ತು. ಈಗ ಅದೂ ಇಲ್ಲ. ಓ ಬಹುಶಃ ಆತನ ಕಥೆಯಲ್ಲಿನ ಹುಚ್ಚನಂತೆ ನಾನೂ ಎಲ್ಲ ಕೈಮೀರಿ ಹೋದಮೇಲೆ ಹಿಂದಿರುಗಿ ಬರುತ್ತಿದ್ದೆನೇನೋ. ಸದ್ಯ—ಆ ಮನುಷ್ಯನಿಂದ ನನಗೆ ಸರಿಯಾಗಿ ನನ್ನ ಮನಃಸ್ಥಿತಿ ತಿಳಿಯಿತು. ಸರಿಯಾಗಿ ನೋಡಿದರೆ ಅವನಿಗೆ ನಾನು ಒಮ್ಮೆ ನಮಸ್ಕಾರ ಮಾಡಿ ಬರಬೇಕು" ಎಂದು ಯೋಚಿಸುತ್ತ ನಾರಾಯಣ ಅವರ ಕಡೆಗೆ ನೋಡಿದ.

ಏನೋ ಬಹಳ ಹಾಸ್ಯಮಯವಾಗಿದ್ದಂತೆ ಇತ್ತು ಅವರ ಸಂಭಾಷಣೆ. ನೀರಜೆ ನಗುತ್ತ, ಅಣಕಿಸುತ್ತ ವಿಚಿತ್ರ ರೀತಿಯಿಂದ ಅವನೊಡನೆ ಮಾತನಾಡುತ್ತಿದ್ದಳು. ನೌಕರ ಟಿಕೇಟನ್ನು ಕೊಟ್ಟೊಡ ನೆಯೇ ಇಬ್ಬರೂ ಜೋರಾಗಿ ನಗತೊಡಗಿದರು,

"ನೀರಜೆಗೆ ನನ್ನ ಅವಶ್ಯಕತೆಯೆ! ಮೂರ್ಖ ನಾನು" ಎಂದು ಕೊಂಡು ಎದ್ದು ನಾರಾಯಣ ನಾಲ್ಕಾಣೆಯನ್ನು ಆ ನೌಕರನಿಗೆ ಕೊಟ್ಟು, "ಇನ್ನು ಮನೆಗೆ ಸವಾರಿ"

ಮನೆಗೆ ಹೊರಡಲು ಮನಸ್ಸು ಮಾಡಿದ್ದರೂ ಅವನಿಗೆ ಹೃದಯ ದಲ್ಲಿ ಅಳುಕು, "ಇದೇ ಮೊದಲು ಮಾಡಿಕೊಂಡು ಮಾಲತಿ ಇನ್ನು

ಮೇಲೆ ನನ್ನ ಮೇಲೆ ಜೋರು ಮಾಡಿದರೆ....ನನ್ನ ಮಕ್ಕಳಿಗೆ ನನ್ನಲ್ಲಿ ಲಾಘವ ಹುಟ್ಟಿದರೆ....." ಆದರೂ ಏನೋ ಧೈರ್ಯವೂ ಹಿಂದೇ ಮೆಲ್ಲಗೆ ಬರುತ್ತಿತ್ತು.

"ಹಾಗಾಗಲಾರದು. ಒಂದು ಕಾಲದಲ್ಲಿ ಮಾಲತಿ ನಿನ್ನೊಡನೆ ಹೇಗಿದ್ದಳು ಜ್ಞಾಪಿಸಿಕೋ. ಈಗಲೂ ಸರಿಯಾಗಿ ಪ್ರಯತ್ನ ಪಟ್ಟರೆ ಅವಳಿಗೆ ನಿನ್ನಲ್ಲಿ ಆದರ ಹುಟ್ಟಬಹುದು. ಬರುಬರುತ್ತ ಮನೆಯ ಭಾರ ವನ್ನೆಲ್ಲಾ ಅವಳ ಮೇಲೆ ಹಾಕಿದ್ದೀ. ಅದು ಈಗ ಕಡಿಮೆಯಾಗುತ್ತದೆ ಯಲ್ಲ? ಮತ್ತೆ ಹೇಗಾದರೂ ಗೌರವವನ್ನು ಸಂಪಾದಿಸಿಕೋ"

"ಬರಿಯ ಕೈಯಲ್ಲಿ ಇವತ್ತು ಮನೆಗೆ ಹೋಗಬಾರದು. ಮಾಲತಿಗೆ ಪುಸ್ತಕಗಳೆಂಪರೆ ಬಹಳ ಇಷ್ಟ. ಏನಾದರೂ ಒಂದು ಒಳ್ಳೆಯ ಪುಸ್ತಕ —" ನಿಧಾನವಾಗಿ ನಾರಾಯಣ ನಿಲ್ದಾಣದ ಪುಸ್ತಕದಂಗಡಿಯ ಕಡೆಗೆ ಹೊರಟ.

ಗಾಡಿಯು ಹೊರಡುತ್ತದೆಯೆಂದು ಸೂಚಿಸುವ ಮೊದಲನೆ ಗಂಟೆ ಹೊಡೆಯಿತು. "ಎಂತಹ ಪುಸ್ತಕ ಬೇಕು ಸ್ವಾಮಿ" ಅಂಗಡಿಯವನು ಸುಮ್ಮನೆ ಪುಸ್ತಕಗಳನ್ನು ನೋಡುತ್ತ ನಿಂತ ನಾರಾಯಣನನ್ನು ಪ್ರಶ್ನಿಸಿದ.

"ಮನೋರಂಜಕವಾದ ಉತ್ತಮ ಕಾದಂಬರಿ ಯಾವುದಾದರೂ ಬೇಕು. ಎಲ್ಲಿ ಆ ಸಾಲಿನಲ್ಲಿರುವ ಪುಸ್ತಕಗಳನ್ನು ನೋಡೋಣ. ಹೊಸ ದಾಗಿ ಕಾಣುತ್ತವೆ ಅವು."

"ಹೌದು ಎಲ್ಲ ಹೊಸದಾಗಿ ಬಂದುವು. ಇವು ಈ ಬರೆಹಗಾರನ ಅತ್ಯುತ್ತಮ ಬರೆಹಗಳು. ಇದು— ಸ್ವಾಮಿ ನೋಡಿ. ಇದಕ್ಕೆ ನೋಬೆಲ್ ಬಹುಮಾನ ಬಂದಿದೆ."

"ಎಲ್ಲಿ? ಮಾರ್‍ಟಿನ್ ಆರೋಸ್ಮಿತ್, ಚೆನ್ನಾಗಿರಲೇಬೇಕು. ನೋಬೆಲ್ ಬಹುಮಾನ ಬಂದಿದೆಯೆಂದರೆ. ಇದೂ ಇರಲಿ. ಇನ್ನೊಂದೆ ರಡು ಸಾಧಾರಣ ರಸಭರಿತ ಪುಸ್ತಕಗಳನ್ನು ನೋಡೋಣ"

ನಾರಾಯಣ ಪುಸ್ತಕಗಳನ್ನು ಆರಿಸುತ್ತಿರುವಾಗಲೇ ಎಂಜಿನ್ನು ಸಿಳ್ಳುಹಾಕಿತು, ಎರಡನೆಯ ಗಂಟೆಯಾಯಿತು. ಗಾಡಿ ನಿಲ್ದಾಣದಿಂದ

"ನಾರಾಯಣ್!"

ನಾರಾಯಣ ತಿರುಗಿ ನೋಡಿದ. ನೀರಜೆ ಅವನನ್ನು ಕೈಬೀಸಿ ಕರೆಯುತ್ತಲಿದ್ದಳು. ಅವಳ ಪಕ್ಕದಲ್ಲಿ ಆ ಮನುಷ್ಯ ಕುಳಿತು, ತಡೆಯ ಲಾರದ ನಗುವಿನಿಂದ ಇತ್ತ ಕಡೆಗೆ ನೋಡುತ್ತಿದ್ದ ನೀರಜೆಯ ಮುಖದಲ್ಲಿ ತೀವ್ರ ಅಸಹನೆ, ಸ್ವಲ್ಪ ಕೋಪ ಕಾಣುತ್ತಿದ್ದುವು.

ನಾರಾಯಣನಿಗೆ ನಗು ಬಂದಿತು. "ಅಬ್ಬ ಮಾತು ಮಾತಿಗೆ ಕೋಪವೇ ನೀರಜಾ? ನೀನು ಹೀಗಾಡಿದರೆ ಪಾಪ ಆ ತಾರಾನಾಥನ ಗತಿಯೇನು?" ಎಂದುಕೊಳ್ಳುತ್ತ ಜೇಬಿನಿಂದ ತನ್ನ ಕರವಸ್ತ್ರವನ್ನು ತೆಗೆದು ಅವಳ ಕಡೆಗೆ ಬೀಸಿದ.

ಗಾಡಿ ನಿಲ್ದಾಣದಿಂದ ಹೊರಟು ಹೋದಮೇಲೆ ಗದ್ದಲ ಇದ್ದಕ್ಕಿದ್ದಂತೆ ಕಡಿಮೆಯಾಯಿತು. ಏನೋ ಎಲ್ಲ ಕಡೆಯೂ ಶಾಂತತೆ ಹಬ್ಬುತ್ತಿದ್ದಂತೆ ಅವನಿಗೆ ಭಾಸವಾಯಿತು. ಹುಡುಕಿ ಹುಡುಕಿ ಮೂರು ಪುಸ್ತಕಗಳನ್ನು ತೆಗೆದುಕೊಂಡು ಅವಕ್ಕೆ ದುಡ್ಡು ಕೊಟ್ಟು ನಿಲ್ದಾಣದ ಹೊರಗೆ ಹೊರಟ.

ಹಾದಿಯಲ್ಲಿ ಹೆಂಗಸೊಬ್ಬಳು ಮಲ್ಲಿಗೆ ಹೂವನ್ನಿಟ್ಟುಕೊಂಡು ಮಾರುತ್ತಿದ್ದುದು ಅವನ ಕಣ್ಣಿಗೆ ಬಿತ್ತು.

"ಮಾಲತಿಗೆ ಮಲ್ಲಿಗೆ ಹೂವು ಒಂದು ಕಾಲದಲ್ಲಿ ಇಷ್ಟವಾಗಿತ್ತು. ಎರಡು ಕುಚ್ಚು ತೆಗೆದುಕೊಂಡು ಹೋಗಬಾರದೇಕೆ?" ಎಂದುಕೊಂಡು ಎರಡು ಕುಚ್ಚು ಹೂವನ್ನು ಕಟ್ಟಿಕೊಂಡ. ಹಾಗೇ ಅಲ್ಲಿ ಬಂದ ತಳ್ಳುವ ಗಾಡಿಯವನಿಂದ ಒಂದು ಸ್ವಲ್ಪ ಬೆಣ್ಣೆ ಬಿಸ್ಕತ್ತನ್ನೂ ತೆಗೆದುಕೊಂಡು ಈಚೆಗೆ ಬಂದ.

"ಇಷ್ಟು ಸಾಮಾನುಗಳನ್ನು ಹೊತ್ತುಕೊಂಡು ನಡೆದು ಹೋಗುವುದಕ್ಕಿಂತ—ಟ್ಯಾಕ್ಸಿ ಬೇಡ—ಗಾಡಿಯಲ್ಲಿ ಹೋಗುವುದು ಲೇಸು" ಎನ್ನಿಸಿತು. ಒಂದು ಗಾಡಿಯನ್ನು ಕರೆದು ಅದನ್ನು ಹತ್ತಿದ.

"ಬಹುಶಃ ಮಾಲತಿ ನನ್ನೊಡನೆ ಇನ್ನೂ ಕೋಪದಿಂದಲೇ ಇರಬಹುದು. ಮಾತನಾಡದೆ ಹೋದರೂ ಹೋಗಬಹುದು. ಆಗ ಏನು ಮಾಡುವುದು? ಮಗುವಾದರೂ ನನ್ನ ಹತ್ತಿರ ಇವತ್ತು ಬಂದರೆ...." ಎಂದು ಬಿಸ್ಕತ್ತಿನ ಪೊಟ್ಟಣವನ್ನು ನೋಡಿದ. "ಬರಬಹುದು. ಮಕ್ಕಳಿಗೆ ತಿಂಡಿಗಿಂತ ಪ್ರಿಯವಾದುದು ಇನ್ನೇನೂ ಇಲ್ಲ. ಲಕ್ಷ್ಮಣನಿಗೆ ಗೊತ್ತಾಗದೆ ಇರಬಹುದು. ಆದರೆ ರಾಮು ಬಂದೇ ಬರುತ್ತಾನೆ—ಮನೆಗೆ ನಿತ್ಯ ಹೋಗುತ್ತಿದ್ದಂತೆ ಹೋಗುವುದು, ಜಗಳವಾಗಲೇ ಇಲ್ಲವೇನೋ ಎಂಬಂತೆ ಇದ್ದುಬಿಡುವುದು. ಮಕ್ಕಳೊಂದಿಗೆ ಆಟವಾಡುತ್ತ ಕಾಲಕಳೆಯುವುದು. ಮಾಲತಿಯೇನೂ ನನ್ನನ್ನು ಕುತ್ತಿಗೆ ಹಿಡಿದು ಹೊರಕ್ಕೆ ಹಾಕಲಾರಳಷ್ಟೆ? ಅವಳು ಕೋಪದಿಂದ ಏನಾದರೂ ಅಂದರೆ ಅದನ್ನು ಕಿವಿಯಮೇಲೆ ಹಾಕಿಕೊಳ್ಳದೆ ಇದ್ದರಾಯಿತು......."

"ಮನೆ ಎಲ್ಲಿ ಸ್ವಾಮಿ?" ಗಾಡಿಯವನು ಕೇಳಿದ

ನಾರಾಯಣನಿಗೆ ಇನ್ನೂ ತಾನು ಬಾಡಿಗೆಯ ಮಾತನ್ನಾಡಿಲ್ಲವೆಂದು ನೆನಪಿಗೆ ಬಂದಿತು. ಮನೆಯ ಗುರುತನ್ನು ಹೇಳಿ, ಕೇಳಿದ,

"ಎಷ್ಟು ಕೊಡಬೇಕು?"

ಅವನ ಅನ್ಯಮನಸ್ಕತೆಯನ್ನು ಗಮನಿಸಿದ್ದ ಗಾಡಿಯವನು ಹೇಳಿದ,

"ಒಂದು ರೂಪಾಯಿ ಕೊಡಿ ಸ್ವಾಮಿ ಸಾಕು. ನಾನು ಹೆಚ್ಚಿಗೆ ಕೇಳುವುದಿಲ್ಲ"

"ಸರಿ, ಬೇಗ ಗಾಡಿ ಹೊಡಿ" ಎಂದ ನಾರಾಯಣ.

"ಅಂತೂ ಮನೆಗೆ ಹೋಗುವುದು ಅಷ್ಟು ಸುಲಭದ ಮಾತಲ್ಲ—" ಅವನ ಮನಸ್ಸು ಗುಣುಗಣಿಸುತ್ತಿತ್ತು.

ಇಲ್ಲಿ ಮಾಲತಿಯ ಕೋಪ ನಿರ್ಧಾರಗಳು ಒಂದು ದಿನದಲ್ಲಿ ಕರಗಿ ನೀರಾದುವು. ತಾನು ಮಾಡಿದ ಕೆಲಸಕ್ಕೆ ತಾನೇ ಬೆರಗಾದಳು,

"ಅಮ್ಮಾ, ಅವರ ಮೇಲೆ! ನಾನು! ಇದೇನಾಯಿತಮ್ಮಾ ನನಗೆ! ನೀನು ನೋಡಿಕೊಂಡು ಹೇಗೆ ಸುಮ್ಮನೆ ಇದ್ದೆಯಮ್ಮಾ? ಮನೆಗೆ ಬಂದವರನ್ನು ಅಪಮಾನ ಮಾಡಿ...."

ವನಜಮ್ಮ, ಮಗಳು ಅಳುವುದನ್ನು ನೋಡಲಾರದೆ ರಾಮುವನ್ನು ಎತ್ತಿಕೊಂಡು ಹೋಗಿ ಬಾಗಿಲ ಬಳಿ ಕುಳಿತಿದ್ದರು ಗಂಟೆಗಟ್ಟಲೆ, ರಾಮುವೂ ತುಂಬಾ ಹೆದರಿದ್ದ.

"ಏನಾಯಿತಜ್ಜಿ ? ಅಮ್ಮ ಏಕೆ ಹಾಗೆ ಅಳುತ್ತಿದ್ದಾಳೆ ?"

"ನನಗೆ ತಿಳಿಯುದು ಮಗು, ಆ ಮರ ನೋಡು ಹೂವಿನಿಂದ ಹೇಗೆ ತುಂಬಿದೆ..........."ಮಾತಿನಲ್ಲಿ ಅವನ ಪ್ರಶ್ನೆಯನ್ನು ಮರೆಯಲು ಯತ್ನಿಸುತ್ತಿದ್ದರು.

ಎಷ್ಟೋ ಹೊತ್ತಾದ ಮೇಲೆ ಒಳಗಡೆ ನಿಶ್ಯಬ್ದವಾದುದನ್ನು ಕಂಡು ವನಜಮ್ಮ ಒಳಕ್ಕೆ ಎದ್ದು ಹೋದರು. ಮಾಲತಿ ಚಾಪೆಯ ಮೇಲೆ ಸುಮ್ಮನೆ ಕುಳಿತಿದ್ದಳು. ಅವಳ ಮುಖವನ್ನು ನೋಡಿ ಅವರಿಗೆ ಅವಳನ್ನು ಮಾತನಾಡಿಸುವ ಧೈರ್ಯವಾಗಲಿಲ್ಲ. ರಾಮುವನ್ನು ಕಳುಹಿಸಿದರು.

"ಅಮ್ಮನ್ನ ಊಟಕ್ಕೆ ಕರೆಯಪ್ಪ"

ತನ್ನ ಬಳಿಗೆ ಬಂದ ಮಗುವನ್ನು ನೀರವವಾಗಿ ಒಂದು ನಿಮಿಷ ನೋಡಿ ಮಾಲತಿ ಜಡವಾದ ಸ್ವರದಲ್ಲಿ ನುಡಿದಳು,

"ನನಗೆ ಊಟಬೇಕಾಗಿಲ್ಲ ಮಗು. ನೀನು ಹೋಗಿ ಕುಳಿತುಕೋ ಊಟಕ್ಕೆ"

"ಮಾಲಾ ಹಾಗೆ ದೇಹವನ್ನು ಒಣಗಿಸಿದರೆ ಏನು ಬರುತ್ತದೆಯಮ್ಮಾ ? ಒಂದು ತುತ್ತು......" ವನಜಮ್ಮ ಮೆಲ್ಲಗೆ ಹೇಳಿದರು.

"ಏನು ಬರಬೇಕಾಗಿದೆಯಮ್ಮ ನನಗೆ ಇನ್ನು ? ನನ್ನನ್ನು ಕರೆಯಬೇಡ. ನನಗೆ ಊಟವೂ ಬೇಡ, ಏನೂ ಬೇಡ. ಹಾಳು ಊಟ."

ರಾತ್ರೆ ನಿದ್ದೆಯನ್ನೂ ಮಾಡಲಿಲ್ಲ ಮಾಲತಿ. ಲಕ್ಷ್ಮಣನನ್ನು ಎತ್ತಿಕೊಂಡು ಕುಳಿತಲ್ಲೆ ನಿಶ್ಚಲೆಯಾಗಿ ಕುಳಿತಿದ್ದಳು. ವನಜಮ್ಮನವರೂ ಅವಳ ಬಳಿಯಲ್ಲಿ ಮೌನವಾಗಿ ಕುಳಿತಿದ್ದರು. ಬೆಳಗಾದ ಮೇಲೆ ಮಾಲತಿ ಸ್ವಲ್ಪ ಸ್ವಸ್ಥಳಾದಂತೆ ತೋರಿತು. ಎಂದಿನಂತೆ ಸ್ನಾನಾದಿಗಳನ್ನು ಮಾಡಿದಳು. ತಾಯಿ ಸಂತುಷ್ಟರಾಗಿ ಬಿಸಿ ಬಿಸಿಯಾಗಿ ಸ್ವಲ್ಪ ತಿಂಡಿಯನ್ನು ಮಾಡಿ ತಂದಿಟ್ಟರು. ಮಾಲತಿ ಅವರ ಮುಖವನ್ನು ನೋಡಿದಳು,

"ನನಗೆ ಏನೂ ಬೇಡವಮ್ಮಾ"

"ಮಾಲಾ ಉಪವಾಸ ಸಾಯಬೇಕೆಂದು ಇದ್ದೀಯಾ?" ಅವರು ಘಾಂಭರಿಯಿಂದ ಕೇಳಿದರು.

"ಸಾವು ಅಷ್ಟು ಸುಲಭವಾಗಿ ಬರುತ್ತದೆಯೇ ಅಮ್ಮಾ?" ದೀನಳಾಗಿ ಮಾಲತಿ ಪ್ರಶ್ನಿಸಿದಳು. "ಮಾಲಾ! ಮಾಲಾ!" ಆಕೆ ತತ್ತರಿಸಿ ಹೋದರು, "ನೀನು ಹೀಗೆ ಆಡಿದರೆ ಮಕ್ಕಳ ಗತಿಯೇನಮ್ಮಾ?"

"ಮಕ್ಕಳು?" ಮಾಲತಿ ಕ್ಷೀಣವಾಗಿ ನಕ್ಕಳು, "ನೀನಿದ್ದೀಯಲ್ಲ?"

"ನೀನು ಹೀಗೆ ಪ್ರಾಣಬಿಟ್ಟರೆ ನಾನು ಬದುಕಿರುವೆನೆಂದು ತಿಳಿದೆಯಾ ಮಾಲಾ? ನಿನ್ನೊಡನೆ ನಾನೂ ಉಪವಾಸ ಮಾಡುತ್ತೇನೆ"

ಅಮ್ಮಾ ನನ್ನ ಅದೃಷ್ಟ ಈಗಿರುವಷ್ಟು ಕಠಿಣವಾಗಿರುವುದು ಸಾಲದೇ? ನೀನು ಬೇರೆ ಅದಕ್ಕೆ ಸೇರಿಸುವಿಯೇನು....?" ಮಾಲತಿ ಮತ್ತೆ ಅಳತೊಡಗಿದಳು. ವನಜಮ್ಮ ಹತಾಶರಾಗಿ ಕುಳಿತುಬಿಟ್ಟರು.

ಮತ್ತೆ ಸಾಯಂಕಾಲವೇ ತಾಯಿ ಮಗಳು ಮಾತನಾಡಿದ್ದು.

"ಅಮ್ಮಾ, ಮಗುವಿಗೆ ಗುಳ್ಳೆಗಳು ಕಂದಿಹೋಗಿವೆ. ಇನ್ನು ಹೆದರಿಕೆಯಿಲ್ಲ ಅಲ್ಲವೇ? ವನಜಮ್ಮ ಹತ್ತಿರಕ್ಕೆ ಬಂದು ಮೊಮ್ಮಗುವನ್ನು ಪರೀಕ್ಷಿಸಿದರು,

"ಸಧ್ಯ! ಇನ್ನು ಯೋಚನೆಯಿಲ್ಲ"

ಒಂದು ನಿಮಿಷ ತಡೆದು ಮಾಲತಿ ಪ್ರಶ್ನಿಸಿದಳು,

"ಅಮ್ಮಾ, ನೀನಿನ್ನೂ ಉಪವಾಸ ಇದ್ದೀಯಾ?"

"ಮಾಲಾ, ನೀನು ಹೀಗಿರುವಾಗ ನನಗೆ ಗಂಟಲಿನಲ್ಲಿ ಏನಾದರೂ ಇಳಿಯುವುದೆಂದುಕೊಂಡಿದ್ದೀಯಾ?"

"ಇಲ್ಲವೆಂದು ನನಗೆ ಗೊತ್ತು. ಅಮ್ಮಾ ನಾನು ಊಟಮಾಡುತ್ತೇನೆ. ಇಬ್ಬರೂ ಒಂದಿಷ್ಟು—ತಿಂದು ಏಳೋಣ."

ವನಜಮ್ಮ ಒಂದು ನಿಟ್ಟುಸಿರನ್ನು ಹಾಕಿ ಹೇಳಿದರು,

"ಈಗ ಅನ್ನ ತಿಂದರೆ ಹುಚ್ಚು ಸಂಕಟವಾಗುತ್ತೆ ಮಾಲಾ. ಇರು ಒಂದು ಸ್ವಲ್ಪ ಗಂಜಿಯನ್ನು ಮಾಡುತ್ತೇನೆ"

ಒಂದು ಬಟ್ಟಲು ಗಂಜಿಯನ್ನು ಕುಡಿಯುವುದೇ ಕಷ್ಟವಾಯಿತು ಮಾಲತಿಗೆ. ಗಂಟಲು ಊದಿಕೊಂಡು ಒಂದೊಂದು ಗುಟುಕಿಗೂ ಒಂದೊಂದು ನಿಮಿಷ ತ್ರಾಸಕೊಟ್ಟಿತು. ಅದನ್ನು ಕುಡಿದು ಮಾಲತಿ ಜ್ವರ ಬಂದವಳಂತೆ ಮಲಗಿದಳು. ಸ್ವಲ್ಪ ಹೊತ್ತಿನಲ್ಲಿಯೇ ಜೋಂಪು ಹಿಡಿದಂತಾಯಿತು.

ವನಜಮ್ಮ ಮಕ್ಕಳನ್ನು ನಿದ್ರೆ ಮಾಡಿಸುತ್ತ ಅಲ್ಲಿಯೇ ಕುಳಿತಿದ್ದರು. ನಿದ್ರೆಹೋದಂತೆ ಇದ್ದರೂ ನಿಮಿಷಕ್ಕೆ ಒಮ್ಮೆ ಮಾಲತಿ ಬೆಚ್ಚಿಬೀಳು ತಿದ್ದುದ್ದು ಅವರಿಗೆ ಕಾಣಿಸತು. ಕೊನೆಗೆ ಒಂದು ಸಲ ಅವಳನ್ನು ಎಬ್ಬಿಸಿಕೂರಿಸಿದರು.

"ಏಳು ಮಾಲಾ, ಕೈಕಾಲು ಮುಖ ತೊಳೆದುಕೊಂಡು ದೇವರಿಗೆ ಒಂದು ನಮಸ್ಕಾರವನ್ನು ಮಾಡಿ ಬಂದು ಮಲಗು."

ಮಾಲತಿ ಎದ್ದಳು. ತಾಯಿ ಹೇಳಿದಂತೆ ಮಾಡಿ ಬಂದಳು. ಆದರೆ ಮತ್ತೆ ಅವಳಿಗೆ ನಿದ್ದೆ ಬರಲಿಲ್ಲ.

"ನೀನು ಇನ್ನು ಮಲಗಿಕೋಮ್ಮ. ನಾನು ಲಕ್ಷ್ಮಣನನ್ನು ನಿದ್ದೆ ಮಾಡಿಸುತ್ತೇನೆ" ಎಂದಳು.

ವನಜಮ್ಮ ಆಯಾಸದಿಂದ ಕುಸಿದುಹೋಗುವಂತಾಗಿದ್ದರು. ಅದರಿಂದ ಮಗಳ ಮಾತಿಗೆ ಒಪ್ಪಿ ಹಾಗೇ ಹಾಸಿಗೆಯಮೇಲೆ ಮಲಗಿಕೊಂಡರು.

ರಾತ್ರಿ ಒಂದು ಯಾಮದಲ್ಲಿ ಅವರಿಗೆ ಎಚ್ಚರವಾಯಿತು, ನೋಡುತ್ತಾರೆ. ಮಾಲತಿ ಇನ್ನೂ ಕುಳಿತೇ ಇದ್ದಳು.

"ಮಾಲಾ ಇನ್ನೂ ಮಲಗಲಿಲ್ಲವೆ?"

"ನಿದ್ರೆ ಬರುವುದಿಲ್ಲ" ಎಂದಳು ಮಾಲತಿ, "ಅಮ್ಮಾ!"

"ಏನು ಮಾಲಾ?"

"ಅವತ್ತು ನೀನು ಹೇಳಿದೆ, ತಾಯಿಯರಿಗೆ ಮಕ್ಕಳೇ ಸರ್ವಸ್ವವೆಂದು. ಅದು ನಿಜವೇ ಅಮ್ಮಾ?"

"ನಾನು ಹಾಗೇ ತಿಳಿದಿದ್ದೇನೆ ಮಾಲಾ"

"ನೀನು ಸರಿಯಮ್ಮ, ಆದರೆ ನನಗೆ ಆ ಮಾತು ಶುದ್ಧಸುಳ್ಳೆಂದು ತೋರುತ್ತದೆ. ಪೂರ್ತಿ ಸುಳ್ಳು. ಇಂಥದನ್ನೆಲ್ಲಾ ನಂಬಿಕೊಂಡೇ ನಾವು ಹೀಗಾಗಿರುವುದು."

"ಮಾಲಾ, ಅದು ಸುಳ್ಳೇ ಆಗಲಿ, ಚಿಂತೆಯಿಲ್ಲ. ನನಗೆ ಬುದ್ಧಿ ಯಿಲ್ಲವಮ್ಮಾ, ಮಾಲಾ ನಿನ್ನ ತಾಯಿ ತಿಳುವಳಿಕೆ ಇಲ್ಲದ ಹೆಂಗಸು. ಅದು ಹೇಗಾದರೂ ಆಗಲಿ ನೀನು ಇನ್ನು ಸ್ವಲ್ಪ ಮಲಗಿಕೋ ತಾಯಿ. ಇಲ್ಲ ದಿದ್ದರೆ ನಿನ್ನ ಆರೋಗ್ಯ ಮಣ್ಣು ಪಾಲಾಗುತ್ತದೆ...."

ಅನ್ಯಮನಸ್ಕಳಾಗಿ ಮಾಲತಿ ಹೇಳಿದಳು,

"ನಿದ್ರೆ ಬರುವಂತಾದರೆ ಮಲಗೇ ಮಲಗುತ್ತೇನೆ. ಹಸಿವು, ನಿದ್ರೆ ಗಳನ್ನು ಎದುರಿಸುವರು ಯಾರಮ್ಮ? ನೀನು ನಿದ್ರೆಮಾಡು. ನನ್ನ ವಿಷಯವನ್ನು ಚಿಂತಿಸಬೇಡ."

ವನಜಮ್ಮ ಸುಮ್ಮನೆ ಕಣ್ಣುಗಳನ್ನು ಮುಚ್ಚಿಕೊಂಡರು. ಅರ್ಧ ಗಂಟೆಯಾಯಿತು, ಒಂದು ಗಂಟೆಯಾಯಿತು. ಇನ್ನು ಅವರಿಗೆ ತಡೆಯ ಲಾಗಲಿಲ್ಲ.

"ಮಾಲಾ!"

"ಅಮ್ಮಾ" ಬೇಸರದಿಂದ ಮಾರ್ನುಡಿಕೊಟ್ಟಳು ಮಾಲತಿ, "ನಾನೀ ಗಲೇ ಮಲಗುತ್ತೇನಮ್ಮ. ಏತಕ್ಕೆ ನೀನು ಹೀಗಾಡುತ್ತಿದ್ದೀಯೋ!"

"ನಾನು ಹಾಗೆಯೇ" ವನಜಮ್ಮ ಎದ್ದು ಮಗುವನ್ನು ಅವಳ ಮಡಿಲಿನಿಂದ ಎತ್ತಿ ಹಾಸಿಗೆಯ ಮೇಲೆ ಮಲಗಿಸಿದರು, "ಹುಂ ಇನ್ನು...."

ತಾಯಿಯ ಬಲಾತ್ಕಾರಕ್ಕೆ ಮಾಲತಿ ಮಲಗಿದಳು. ಬೆಳಗಿನ ಝಾವದಲ್ಲಿ ಅವಳಿಗೆ ಸಣ್ಣಗೆ ನಿದ್ದೆ ಹತ್ತಿತು.

ಅವಳಿಗೆ ಮತ್ತೆ ಎಚ್ಚರವಾದಾಗ ಬೆಳ್ಳಂಬೆಳಕಾಗಿತ್ತು. ಮನಸ್ಸು ಹೇಗಿದ್ದರೂ ಮನೆಯ ಕೆಲಸ ಸಾಗಬೇಕಲ್ಲ? ಏಳಲಾರದೆ ಹಾಸಿಗೆ ಯಿಂದ ಎದ್ದು ನಿಧಾನವಾಗಿ ಕೆಲಸ ಮಾಡಲು ತೊಡಗಿದಳು

ರಾಮುವಿಗೆ ಸ್ನಾನ ಮಾಡಿಸಿ, ಅವನಿಗೆ ತಿಂಡಿಕೊಟ್ಟು ತನ್ನ ಸ್ನಾನ ಮುಗಿಸುವ ವೇಳೆಗೆ ಬಿಸಿಲೇರುತ್ತ ಬಂದಿತು.

"ಎರಡು ಮೂರು ದಿನಗಳಿಂದ ಬಟ್ಟೆಗಳನ್ನೇ ಒಗೆದಿಲ್ಲ. ಈಗ ಒಂದು ರಾಶಿ ಬಿದ್ದಿದೆ. ಆದರೂ ಅದರ ಕಡೆ ಮನಸ್ಸು ಹೋಗದು" ಎಂದು ತಾಯಿಗೆ ಹೇಳಿದಳು ಮಾಲತಿ.

ಅವರು ಹೇಳಿದರು,

"ಈಗ ಈ ಕೆಲಸ ಬೇಡಮ್ಮ, ಮೈಗೆ ವಿರೋಧವಾದೀತು"

"ಏನು ನೀನು ಹೇಳುತ್ತಿರುವುದು ಅಮ್ಮಾ? ನನಗೆ ಏನಾಗಿದೆ? ಕಡಿದರೆ ನಾಲ್ಕಾಳು ಆಗುವಂತೆ ಇದ್ದೇನೆ" ಎಂದು ಮಾಲತಿ ಒಗೆಯುವ ಬಟ್ಟೆಗಳನ್ನು ಪಂಚಪಾತ್ರೆಗೆ ಹಾಕತೊಡಗಿದಳು.

ಇದ್ದಕ್ಕಿದ್ದಂತೆ ಅವಳ ಕೈ ಹಾಗೇ ನಿಂತಿತು.

"ಅಪ್ಪಾ!" ರಾಮುವಿನ ಸಣ್ಣಧ್ವನಿ ಉತ್ಸಾಹದಿಂದ ತುಂಬಿತ್ತು.

"ಹೋಗು, ಹೋಗು. ನಿನ್ನನ್ನು ಎತ್ತಿಕೊಳ್ಳುವುದಿಲ್ಲ. ಅವತ್ತು ನೀನೇಕೆ ನಾನು ಕರೆದಾಗ ಬರಲಿಲ್ಲ?" ನಾರಾಯಣ ರಾಮುವನ್ನು ಛೇಡಿಸುತ್ತಿದ್ದ.

ವನಜಮ್ಮ ಅಡಿಗೆ ಮನೆಯ ಬಾಗಿಲಿಗೆ ಬಂದರು. ಮಾಲತಿ ಸ್ತಬ್ಧಳಾಗಿ ಎದ್ದು ನಿಂತಳು.

"ಅಳಿಯಂದಿರು ಬಂದಿದ್ದಾರೆ" ವನಜಮ್ಮ ಪಿಸುಗುಟ್ಟಿದರು,

"ಇಲ್ಲ ಅಪ್ಪಾ! ಅಪ್ಪಾ! ಎತ್ತಿಕೋ ಅಪ್ಪ!" ರಾಮು ಚೀರಿದ.

"ಕಳ್ಳ! ಅತ್ತು ಹೆದರಿಸಲು ನೋಡುತ್ತೀಯಾ? ಹೋಗಲಿ ಬಾ" ನಾರಾಯಣ ಕೇಳಿದ, "ಅಮ್ಮ ಎಲ್ಲಿ?"

ಮಾಲತಿ ಮೆಲ್ಲಗೆ ನಡುಮನೆಗೆ ಹೋಗಿ ಬಾಗಿಲಿನಲ್ಲಿ ನಿಂತು ಕೊಂಡಳು. ನಾರಾಯಣ ಅವಳ ಕಡೆ ತಿರುಗಿದ,

"ಮಾಲಾ!"

"ಏನು?" ಮಾಲತಿ ಕೇಳಿದಳು. ಅವಳು ಚಳಿ ಬಂದವಳಂತೆ ಕಂಪಿಸುತ್ತಿದ್ದಳು.

ನಾರಾಯಣ ಅವಳ ಕಡೆಗೆ ನೇರವಾಗಿ ನೋಡಲಾರದೆ, ಸಹಾಸ್ಯ ವಾಗಿ ಮಾತನಾಡಲು ಸರ್ವ ಪ್ರಕಾರದಿಂದಲೂ ಯತ್ನಿಸುತ್ತ ಹೇಳಿದ,

"ಮಾಲಾ, ಮನೆಯ ಯಜಮಾನನನ್ನು ಹೊರಗೆ ಹಾಕುವುದು ಅಷ್ಟು ಸುಲಭವಲ್ಲ."

ಮಾಲತಿಗೆ ತಟ್ಟನೆ ಮೈ ನಡುಕ ನಿಂತಿತು. ಹುಚ್ಚಿಯಂತೆ ಗಟ್ಟಿ ಯಾಗಿ ನಗತೊಡಗಿದಳು,

"ಅಲ್ಲ. ಆದರೆ ಇದು ನಿಮಗೆ ಹೇಗೆ ತಿಳಿಯಿತು?"

ನಾರಾಯಣ ಮಗುವನ್ನು ಕೆಳಗೆ ಇಳಿಸಿ ಅವಳ ಹತ್ತಿರ ಬಂದ.

"ನನ್ನ ಮೇಲೆ ನಿನ್ನ ಪ್ರಭಾವವೆಷ್ಟು ಎಂದು ಇವತ್ತು ನಿನಗೆ ತಿಳಿಯಿತಲ್ಲ, ಮಾಲಾ? ಎಷ್ಟು ನಗು ಬರುತ್ತದೆ ನಿನಗೆ!"

"ನನ್ನ ಪ್ರಭಾವ!" ಕ್ಷಣಾರ್ಧದಲ್ಲಿ ಮಾಲತಿಯ ನಗು ಅಳುವಿನಲ್ಲಿ ಪರ್ಯವಸಾನ ಹೊಂದಿತು, "ಅದಕ್ಕೇ ನೀವು ಇಷ್ಟು ದಿನಗಳೂ ನಾವು ಬದುಕಿದ್ದೇವೆಯೋ ಸತ್ತಿದ್ದೇವೆಯೋ ಎಂದು ಕೂಡ ತಿಳಿಯಲು ಆಸಕ್ತಿ ಇಲ್ಲದೆ ದೂರವಿದ್ದಿರಿ—ಇದಕ್ಕಿಂತ........"

ನಾರಾಯಣ ದಿಗ್ಭ್ರಾಂತನಾದ. ಮಾಲತಿ ಹೀಗೆ ಅಳುವುದು ಅವನ ಊಹೆಗೂ ನಿಲುಕದ ವಿಷಯವಾಗಿತ್ತು.

"ಮಾಲಾ, ಅಳಬೇಡ. ನನ್ನದು ತಪ್ಪಾಯಿತು. ನಾನು ಅಯೋಗ್ಯ ಮಾಲಾ. ಬುದ್ಧಿಯಿಲ್ಲದವನು........" ಎಂದು ವಿಚಿತ್ರ ರೀತಿಯಿಂದ ಸಮಾಧಾನ ಪಡಿಸತೊಡಗಿದ, "ಆದರೆ ಮಾಲಾ, ನನಗೆ ಎಲ್ಲಿ ಹೋದರೂ ನಿನ್ನ ನೆನಪು ಕಾಡುತ್ತಿತ್ತು. ನೀನು ಅಷ್ಟು ಚಿಂತೆಮಾಡುವ ಸ್ವಭಾವ ದವಳಲ್ಲ ಅಂತ ಕಾಗದ ಬರೆಯಲಿಲ್ಲ, ಅಷ್ಟೆ. ಇದರ ಮಧ್ಯ ಬೊಂಬಾಯಿಗೆ ಬೇರೆ ಹೋಗಿದ್ದೆ ಮಾಲಾ. ಅಪ್ಪ ನಮ್ಮನ್ನು ಮನ್ನಿಸಿದ್ದಾರೆ. ಅವರಿಗೆ ತುಂಬಾ ಕಾಹಿಲೆಯಾಗಿತ್ತು. ನಿನ್ನನ್ನೂ ಕರೆದುಕೊಂಡು ಹೋಗ ದುದಕ್ಕೆ ಎಲ್ಲರ ಕೈಯಲ್ಲೂ ಎಷ್ಟು ಬೈಯಿಸಿಕೊಂಡೆ ಗೊತ್ತೆ ಮಾಲಾ? "ತಕ್ಷಣ ಹೋಗಿ ಕರೆದುಕೊಂಡು ಬಾ" ಅಂದರು. ಅದಕ್ಕೇ ಬಂದೆ. ನೀನು ನನ್ನ ಮುಖಕ್ಕೆ ಮಂಗಳಾರತಿ ಮಾಡಿದಿ........"

ಸ್ವಲ್ಪ ನಿಜ, ಸ್ವಲ್ಪ ಸುಳ್ಳು. ಒಟ್ಟಿನಲ್ಲಿ ಅದು ತನ್ನ ಕೆಲಸ ಮಾಡಿತು. ಮಾಲತಿ ಅಳು ನಿಲ್ಲಿಸಿ, ಪ್ರಸನ್ನಳಾಗಿ ಅವನ ಮಾತುಗಳನ್ನು ಕೇಳತೊಡಗಿದಳು. ಬಳಿಕ ತಾನೂ ಹೇಳಿದಳು,

"ಅಯ್ಯೋ, ನನಗೆ ಇದೆಲ್ಲಾ ಗೊತ್ತೇ ಇಲ್ಲ. ಯಾರೋ ಏನೋ ಹೇಳಿದ್ದನ್ನು ನಂಬಿಕೊಂಡು ಹಾಗೆಲ್ಲ ಆಡಿದೆ. ಮಕ್ಕಳಿಗೆ ಈ ಸಿಡುಬು ಬೇರೆ ಬಂದು ನನ್ನ ಇದ್ದಷ್ಟು ಬುದ್ಧಿಯನ್ನೂ ಕದ್ದುಬಿಟ್ಟಿತು....ಎಂದಾದರೂ ನಿಮ್ಮ ತಂದೆ ನಿಮ್ಮನ್ನು ಕ್ಷಮಿಸೇ ಕ್ಷಮಿಸುತ್ತಾರೆ ಯೆಂದು ನನಗೆ ಗೊತ್ತಿತ್ತು........"

ವನಜಮ್ಮ ಒಳಕ್ಕೆ ಬಂದು ರಾಮುವನ್ನು ಎತ್ತಿಕೊಂಡು ಹೋದುದು ಇಬ್ಬರಿಗೂ ಅರಿವಿರಲಿಲ್ಲ. ಅವರು ಅಡಿಗೆಯನ್ನು ಪೂರೈಸಿ, ರಾಮುವಿಗೆ ಊಟಮಾಡಿಸಿ ಮಾಲತಿ ಒಳಕ್ಕೆ ಬಂದಾಳೆಂದು ಕಾದೇ ಕಾದರು. ಹನ್ನೊಂದು ಗಂಟೆ ಹೊಡೆಯುವವರೆಗೂ ನೋಡಿದರು. ಅಲ್ಲಿಗೆ ಅವರ ಸಹನೆಯೂ ಸ್ವಲ್ಪ ಕಡಿಮೆಯಾಯಿತು,

"ಮಾಲಾ!—ಮಾಲಾ!—ಮಾಲಾ!"

ಮೂರನೆಯ ಬಾರಿ ತಾಯಿ ಕೂಗಿದ್ದು ಮಾತ್ರ ಮಾಲತಿಗೆ ಕೇಳಿಸಿತು.

"ಅಮ್ಮ ಕರೆಯುತ್ತಾರೆ" ಎಂದು ಎದ್ದಳು.

"ಇಲ್ಲಿಂದಲೇ ಉತ್ತರ ಕೊಡು, ಮಾಲಾ. ನಾನು ನಿನಗೆ ಹೇಳುವುದು ತುಂಬಾ ಇದೆ" ಎಂದು ನಾರಾಯಣ ಅವಳನ್ನು ಕೂಡಿಸಿದ.

"ಏನಮ್ಮಾ?"

"ಊಟಕ್ಕೆ ಎಲೆ ಹಾಕಲೇ ಮಾಲಾ?"

"ಈಗಲೇ ಊಟಕ್ಕೆ ಏನು ಅವಸರ? ಮಾಡಿದರಾಯ್ತು. ನಿನಗೆ ಹಸಿವಾಗಿದೆಯೇ ಮಾಲಾ?"

ಅವಳು "ಇಲ್ಲ" ಅನ್ನಲಿ ಎಂದು ಕೇಳಿದ. ಆದರೆ ವನಜಮ್ಮ ಒಳಗಡೆಯಿಂದ ಅವನಿಗೆ ಹೇಳಿದರು,

"ಅವಳು ಒಂದು ಅಗಳು ಅನ್ನ ತಿಂದು ಎರಡು ದಿನಗಳಾದು ವಪ್ಪಾ"

"ಎರಡು ದಿನಗಳಿಂದ!...." ನಾರಾಯಣ ಚಕಿತನಾಗಿ ಕೇಳಿದ, "ಉಪವಾಸ ಮಾಡುವುದು ಎಂದಿನಿಂದ ಕಲಿತೆ ಮಾಲಾ? ಏಕೆ ಎರಡು ದಿನಗಳಿಂದ ಊಟ ಮಾಡಲಿಲ್ಲ"

ಮಾಲತಿ ಕ್ಷೀಣವಾಗಿ ನಕ್ಕಳು,

"ನನ್ನ ಪ್ರಭಾವದ ವಿಷಯ ನೀವು ಹೇಳಿದಿರಿ. ಈಗ ನಿಮ್ಮ ಪ್ರಭಾವ ನನ್ನ ಮೇಲೆ ಎಷ್ಟಿದೆಯೆಂದು ತಿಳಿಯಿತೇ?"

"ಮಾಲಾ! ನಿಜವಾಗಿ ಹೇಳು, ನೀನು...." ಎಂದು ನಾರಾಯಣ ಅವಳನ್ನು ಏನೋ ಕೇಳಲು ಹೋಗಿ ಮಧ್ಯೆ ತಡೆದು ಅವಳ ಮುಖವನ್ನು ಒಂದು ಕ್ಷಣ ನಿಟ್ಟಿಸಿ ನೋಡಿದ, ಹಾಗೇ ಅವನಿಗೆ ನಗು ಬಂದಿತು, "ಮಾಲಾ, ನಾವಿಬ್ಬರೂ ಶುದ್ಧ ಗುಗ್ಗುಗಳು,"

ವನಜಮ್ಮ ಮತ್ತೆ ಗಟ್ಟಿಯಾಗಿ ಕೇಳಿದರು,

"ಮಾಲಾ, ಎಲೆ ಹಾಕಲೇನಮ್ಮ?"

"ಹಾಕಮ್ಮ. ಈಗ ಬಂದು ಬಿಡುತ್ತೇವೆ" ಮಾಲತಿ ಹೇಳಿದಳು, "ನೀವಿನ್ನು ನಿಮ್ಮ ಮೋಜಗಳನ್ನು ಬಿಚ್ಚಿ ಏಳಿ. ಎಷ್ಟು ಹೊತ್ತು ಅಮ್ಮನ್ನ ಕಾಯಿಸುವುದು? ಅವರೂ ಎರಡು ದಿನದಿಂದ ಹೆಚ್ಚುಕಡಿಮೆ ಉಪವಾಸ"

ಅವಳು ಹೇಳಿದಂತೆ ಮಾಡುತ್ತ ನಾರಾಯಣ,

"ನಿನ್ನದೇನೋ ಅರ್ಥವಾಯಿತು. ನಿಮ್ಮಮ್ಮ ಏತಕ್ಕೆ ಉಪವಾಸ ವಿದ್ದರು, ಮಾಲಾ?"

"ಅದೆಲ್ಲಾ ಕರುಳಿನ ವಿಷಯ, ನಿಮಗೆ ಗೊತ್ತಾಗುವುದಿಲ್ಲ" ಎಂದು ಮಾಲತಿ ನಕ್ಕಳು.

"ತಾಯಿಯರಿಗೆ ಮಾತ್ರ ಸಂಬಂಧ ಪಟ್ಟದು"

ಊಟಕ್ಕೆ ಕುಳಿತಾಗ ನಾರಾಯಣ ಅತ್ತೆಗೆ ಹೇಳಿದ,

"ನಮ್ಮ ತಂದೆ ತಾಯಿ, ಮಾಲತಿ ಹಾಗೂ ಮಕ್ಕಳನ್ನು ನೋಡ ಬೇಕಂತೆ. ಒಂದು ಒಳ್ಳೆಯ ದಿನವನ್ನು ವಿಚಾರಿಸಿದರೆ ಬೊಂಬಾಯಿಗೆ ಹೊರಟುಬಿಡಬಹುದು"

"ಇನ್ನು ಮೇಲೆ ನೀವು ಬೊಂಬಾಯಿಯಲ್ಲೇ ಇರುವುದು ಎಂದು ಕೊಂಡಿದ್ದೀರೇನು ?" ಎಂದು ಆಕೆ ವಿಹ್ವಲೆಯಾಗಿ ಪ್ರಶ್ನಿಸಿದರು.

"ಅದು ಹೇಗಮ್ಮ, ಕೆಲಸ ಇಲ್ಲಿ ತಾನೇ ಇರುವುದು ?" ಎಂದು ಮಾಲತಿ ನಾರಾಯಣನನ್ನು ಕೇಳಿದಳು, "ಎಷ್ಟು ದಿವಸ ರಜೆ ತೆಗೆದು ಕೊಂಡಿದ್ದೀರಿ ?"

"ಇನ್ನೂ ಹತ್ತಿರಹತ್ತಿರ ಒಂದು ವಾರ ರಜವಿದೆ" ಎಂದ ನಾರಾಯಣ, "ಆದರೆ ನಿನ್ನ ಕೆಲಸ ಇನ್ನು ಹಾರಿಹೋಗುತ್ತದೆ"

ಮಾಲತಿ ಸ್ವಲ್ಪ ಯೋಚಿಸಿ ಹೇಳಿದಳು,

"ನಾವು ಮತ್ತೆ ಬರುವವರೆಗೂ ಹೇಗೂ ಸಮಯವಿದೆಯಲ್ಲ ? ನಿಧಾನವಾಗಿ ಈ ವಿಚಾರವನ್ನು ನಿರ್ಧರಿಸೋಣ"

"ಓ ನನ್ನ ಮಾತಿನಲ್ಲಿ ನಂಬಿಕೆ ಇಲ್ಲ ನಿನಗೆ" ನಾರಾಯಣ ಆಕ್ಷೇಪಿಸಿದ.

"ಹಾಗೆಲ್ಲ ಅರ್ಥಮಾಡಬೇಡಿ ನನ್ನ ಮಾತಿಗೆ. ನಾನು ಹೇಳುವುದು ಯಾವ ವಿಚಾರದಲ್ಲೂ ದುಡುಕಬಾರದು ಎಂದು ಅಷ್ಟೇ."

"ಸ್ವಾತಂತ್ರ್ಯ ಹೋಗಿ ಬಿಡುತ್ತೆ ಅಂತ ಅಲ್ಲವೋ ?"

"ಏನು ಸ್ವಾಂತ್ರ್ಯವಿದೆ ಅದರಲ್ಲಿ ? ಇದೇ ನಿಮಗೆ ಗೊತ್ತಿರುವುದು. ರಜಾ ಬಂದೀತೇ ಎಂದು ಚಾತಕಪಕ್ಷಿಯಂತೆ ಕಾದಿದ್ದೆ ನಾನು. ಮನಸ್ಸಿಗೆ ಸದಾ ಕಿರಿಕಿರಿ, ದೇಹದಲ್ಲಿ ನಿತ್ರಾಣ, ಕೆಲಸಕ್ಕೆ ಹೋಗಬೇಕಾದರೆ ನಿತ್ಯ ನನಗೆ "ಹೋಗಬೇಕಲ್ಲಾ ?" ಎಂದೇ ಅಂದೆನಿಸುತ್ತಿತ್ತು"

"ಮಾಲಾ ! ಈ ನಡುವೆ ನಿನಗೆ ಮಾತೆತ್ತಿದರೆ ಸಿಡುಕುತನ. ಏತಕ್ಕಮ್ಮಾ ?" ವನಜಮ್ಮ ಇನ್ನೊಂದು ಜಗಳವೆಲ್ಲಿ ಪ್ರಾರಂಭವಾಗು ವುದೋ ಎಂದು ಹೆದರಿದರು.

ನಾರಾಯಣ ವಿಸ್ಮಿತನಾದ.

"ಅವಳು ಸಿಟ್ಟುಗೊಳ್ಳುವುದು ಸರಿಯಮ್ಮಾ. ನಾನೇಕೆ ಕೆಣಕಿ ಕೆಣಕಿ ಮಾತನಾಡಬೇಕಾಗಿತ್ತು ?" ಎಂದ.

ಊಟಮಾಡಿ ಮಗಳು ಅಳಿಯ ವಿಶ್ರಮಿಸುತ್ತಿದ್ದಾಗ ವನಜಮ್ಮ ಜೋಯಿಸರ ಮನೆಗೆ ಹೋಗಿ ಬಂದರು.

"ನಾಳೆ, ನಾಡಿದ್ದು ಎರಡು ದಿನಗಳೂ ಪ್ರಶಸ್ತವಾಗಿವೆಯಂತೆ ಪ್ರಯಾಣಕ್ಕೆ"

"ಹಾಗಿದ್ದರೆ, ಮಾಲಾ, ನಾಳೆಯೇ ಹೊರಟುಬಿಡೋಣ" ಎಂದ ನಾರಾಯಣ.

"ಹೊರಡಬಹುದು, ಆದರೆ ಲಕ್ಷ್ಮಣ ಇನ್ನೂ ಸ್ವಲ್ಪ ಚೇತರಿಸಿ ಕೊಂಡಿಲ್ಲ"

"ಲಕ್ಷ್ಮಣನನ್ನು ಈಗ ನೀವು ಕರೆದುಕೊಂಡು ಹೋಗಬೇಡಿ, ಮಾಲಾ. ಅವನು ಇಲ್ಲಿ ಇರಲಿ. ರಾಮುವನ್ನು ಕರೆದುಕೊಂಡು ನೀವು ಹೊರಡಿ" ವನಜಮ್ಮ ಹೇಳಿದರು.

"ನಿಮ್ಮ ತಾಯಿಯವರು ಹೇಳುವ ಮಾತು ಸರಿ, ಮಾಲಾ ಲಕ್ಷ್ಮಣ ಸದ್ಯಕ್ಕೆ ಇಲ್ಲಿರಲಿ" ಎಂದ ನಾರಾಯಣ.

ಸಾಮಾನುಗಳನ್ನು ಕಟ್ಟುತ್ತಿರುವಾಗ ಮಾಲತಿ ಹೇಳಿದಳು,

"ನಾನೆಂದುಕೊಂಡೆ ನೀವು ಮತ್ತೆ ನನ್ನ ಕಡೆಗೆ ತಿರುಗಿ ನೋಡು ವುದು ಸಹ ಇಲ್ಲವೆಂದು" ನಾರಾಯಣ ನಕ್ಕು ನುಡಿದ,

"ನಾನೂ ಹಾಗೇ ಅಂದುಕೊಂಡೆ. ಮಾಲಾ, ನಿನಗೆ ಗೊತ್ತಿಲ್ಲ ನಾನು ಎಷ್ಟು ಹೆದರುತ್ತ ಹೆದರುತ್ತ ಮನೆಯೊಳಗೆ ಬಂದೆನೆಂದು"

"ನಮ್ಮಲ್ಲಿ ಎಷ್ಟು ಕೆಟ್ಟಕೋಪದ ಸ್ವಭಾವವಿದೆ ಎಂಬುದು ನಮಗೇ ಗೊತ್ತಿರುವುದಿಲ್ಲ"

"ಅದಿರಲಿ ಮಾಲಾ, ಒಂದು ಮಾತು ನಡೆಸಿಕೊಡುವಿಯಾ ?"

"ಏನು, ಹೊಸ ತರಹೆಯ ಮಾತನಾಡುತ್ತಿದ್ದೀರಿ ?"

"ಹೊಸದೋ ಹಳೆಯದೋ. ನಡೆಸಿಕೊಡುವೆಯಷ್ಟೆ ?"

"ನೀವು ನಡೆಸಿಕೊಡು ಎಂದರೆ ನಡೆಯಿಸುತ್ತೇನೆ. ಏನು ಅದು ?"

"ನಮ್ಮಲ್ಲಿ ಈ ಒಡಕು ಇತ್ತು ಎಂಬುದನ್ನೇ ನೀನು ಮರೆತುಬಿಡಬೇಕು, ಮಾಲಾ. ಅದೊಂದು ದುಸ್ವಪ್ನವೆಂದು ತಿಳಿಯೋಣ ಆ ವಿಚಾರದ ಮಾತೇ ಬೇಡ"

"ಓ!" ಎಂದಳು ಮಾಲತಿ, "ಅಷ್ಟೇ ತಾನೇ? ಆಗಲಿ ಅದಕ್ಕೇನು? ಇನ್ನು ಆ ಮಾತನ್ನೆತ್ತುವುದಿಲ್ಲ ನಾನು."

ಮರುದಿವಸ ಬೊಂಬಾಯಿಗೆ ಹೊರಟರು ಮೂವರೂ. ಹೊರಡುವ ಮುನ್ನ ನಾರಾಯಣ ಕೇಳಿದ,

"ರೈಲು ಪ್ರಯಾಣ ಬೇಕೋ ಇಲ್ಲವೇ ವಿಮಾನದಲ್ಲಿ ಹೋಗೋಣವೋ?"

ಮಾಲತಿ ಖರ್ಚಿನ ಕಡೆಗೆ ದೃಷ್ಟಿ ಇಟ್ಟು ಹೇಳಿದಳು,

"ರೈಲು ಗಾಡಿಯಲ್ಲೇ ಹೋಗೋಣ. ದಾರಿಯಲ್ಲಿ ಪ್ರಕೃತಿಯ ವೈವಿಧ್ಯಗಳನ್ನೂ ನೋಡಿದಂತಾಗುತ್ತೆ. ಪ್ರಯಾಣ ಮಾಡಿದಂತೆ ಇರುತ್ತೆ"

ನಿಷ್ಕಾರಣವಾಗಿ ನಾರಾಯಣನಿಗೆ ಸಂತೋಷವಾಯಿತು.

"ನಿನ್ನಲ್ಲಿ ಎಲ್ಲೋ ಸ್ವಲ್ಪ ರಸಿಕತೆ ಅಡಗಿದೆ, ಮಾಲಾ. ಯಾವಾಗಲೋ ಒಂದೊಂದು ಬಾರಿ ಅದರ ವಾಸ್ತವತೆಯ ಸೂಚನೆ ಸಿಗುತ್ತದೆ"

"ಹುಂ?" ಎಂದು ನಕ್ಕಳು ಮಾಲಾ.

ಕ್ಷಣ ಕ್ಷಣಗಳು ಕಳೆದಂತೆ ನಾರಾಯಣ ಹೆಚ್ಚು ಹೆಚ್ಚಾಗಿ ಸುಖಿಯಾದ. ಮಾಲತಿಯ ಮುಖದಲ್ಲೂ ತೇಜಸ್ಸು ಹಿಂದಿರುಗಿತು, "ಛೇ ನಾನೆಂತಹ ತಪ್ಪನ್ನು ಮಾಡಿಬಿಡುತ್ತಿದ್ದೆ!" ಎಂದು ಎಷ್ಟು ಸಲ ಇಬ್ಬರೂ ಅಂದುಕೊಂಡರೋ ಅದರ ಲೆಖ್ಖಾಚಾರವೇ ಇರಲಿಲ್ಲ. "ಈಗ ಆ ತಪ್ಪನ್ನು ತಿದ್ದಿಬಿಡಬೇಕು" ಎಂದು ಒಬ್ಬರೊಡನೆ ಒಬ್ಬರು ಎಂದೂ ಇಲ್ಲದ ವಿಶ್ವಾಸದಿಂದ ನಡೆಯುತ್ತಿದ್ದರು. ಪ್ರಯಾಣದ ಒಂದೊಂದು ನಿಮಿಷವೂ ಅವರ ಪಾಲಿಗೆ ಅಮೃತಮಯವಾಗಿತ್ತು.

"ಬೊಂಬಾಯಿಯಲ್ಲಿ ನಿಲ್ದಾಣದಿಂದ ಒಂದು ಟ್ಯಾಕ್ಸಿಯನ್ನು ಮಾಡಿಕೊಂಡು ನೆಟ್ಟಗೆ ಮನೆಗೇ ಹೋದರು.

ನಾರಾಯಣ ಮಗುವನ್ನು ಎತ್ತಿಕೊಂಡು, ಮಾಲತಿಯ ಕೈಹಿಡಿದುಕೊಂಡು ತಂದೆಯ ಕೊಠಡಿಯನ್ನು ಪ್ರವೇಶಿಸಿದ.

"ಅಪ್ಪಾ! ಮಾಲತಿ,—ರಾಮಚಂದ್ರ—ಲಕ್ಷ್ಮಣ ಸ್ವಲ್ಪ ಸುಖ ವಾಗಿಲ್ಲ ಅದಕ್ಕೆ ಅವನನ್ನು ಕರೆದುಕೊಂಡು ಬರಲಿಲ್ಲ"

ನಮಸ್ಕರಿಸಿದ ಸೊಸೆಯ ತಲೆಯನ್ನು ಗೋವಿಂದಪ್ಪ ತಡವಿದರು. ಅವರ ಕಣ್ಣುಗಳಲ್ಲಿ ಆನಂದ ಬಾಷ್ಪ ಬಂದುವು,

"ದೀರ್ಘ ಸುಮಂಗಲಿಯಾಗು ಮಗೂ." ಎಂದು ಆಶೀರ್ವದಿಸಿದರು. ಮುದುಕ ನಾನು, ನಿಮಗೆ ಬಹಳ ಅನ್ಯಾಯ ಮಾಡಿದೆ. ಅದನ್ನೆಲ್ಲ ಕ್ಷಮಿಸು ತಾಯಿ"

"ಅನ್ಯಾಯವೂ ಇಲ್ಲ ಏನೂ ಇಲ್ಲ ಅಪ್ಪಾ. ತಮ್ಮ ಸುಖ ತಾವು ನೋಡಿಕೊಂಡಿದ್ದಾರೆ ಇವರು ನಿಮ್ಮನ್ನು ಲಕ್ಷಿಸದೆ ಸರಿಯಾಗಿ ನೋಡಿದರೆ ಇವರನ್ನು ಜೇಲಿಗೆ ಹಾಕಬೇಕು" ಎಂದು ಹೇಳುತ್ತ ಲಲಿತೆ ಹಿಂದಿನಿಂದ ಬಂದು ಮಾಲತಿಯ ಕುತ್ತಿಗೆಗೆ ಕೈ ಹಾಕಿದಳು.

"ಶ್ಸ್ ಬಿಡು ಲಲಿತ. ನಮ್ಮ ಅತ್ತೆಯವರಿಗೆ ನಮಸ್ಕಾರ ಮಾಡ ಬೇಕು." ಎಂದು ಮಾಲಾ ನಗುತ್ತ ಅವಳಿಂದ ಬಿಡಿಸಿಕೊಂಡು ಯಶೋದ ಮ್ಮನವರಿಗೆ ನಮಸ್ಕಾರ ಮಾಡಿದಳು.

"ಸರಿಯಾಗಿ ನೋಡಿದರೆ, ಲಲಿತ, ನೀನು ಮಾಲತಿಗೆ ನಮಸ್ಕಾರ ಮಾಡಬೇಕು" ಎಂದರು ಗೋವಿಂದಪ್ಪ.

"ನಾನೇಕೆ ಮಾಡಬಾರದು? ಒಳ್ಳೆ ಅತ್ತಿಗೆ! ಮದುವೆಗೆ ಕೂಡ ನನ್ನನ್ನು ಕರೆಯಲಿಲ್ಲ ಇವಳು—ಇವಳಿಗೆ ನಾನು ನಮಸ್ಕಾರ ಮಾಡ ಬೇಕಂತೆ, ಕೇಳಿದೆಯಾ ಪಾಪಚ್ಚಿ?" ಲಲಿತೆ ರಾಮುವಿಗೆ ಹೇಳಿದಳು, "ಇವರೆಲ್ಲ ತುಂಬ ಕೆಟ್ಟವರು ರಾಮು. ನಾವು ಇವರ ಸಂಗಬಿಟ್ಟು ಬಿಡೋಣ. ಇನ್ನು ಮೇಲೆ ನೀನಾಯಿತು, ನಾನಾಯಿತು. ನೀನು ನಿಮ್ಮಮ್ಮ ಮಾಡಿದ ಹಾಗೆ ನನ್ನನ್ನು ಬಿಟ್ಟು ಯಾರೊಡನೆಯೂ ಹೋಗು ವುದಿಲ್ಲ ತಾನೇ?"

ಅವಳ ಸ್ನೇಹಭರಿತ ವಿಶ್ವಾಸದಿಂದ ರಾಮು ಮಾರುಹೋದ.

"ಇಲ್ಲ".

ಒಂದೇ ದಿನದಲ್ಲಿ ವರ್ಷಗಟ್ಟಲೆಯ ಅಗಲಿಕೆ ಮರೆತುಹೋಯಿತು. ಗೋವಿಂದಪ್ಪನವರು ಮಗನಿಗಾಗಿ ದೊಡ್ಡ ಕಾರ್ಯಕ್ರಮವನ್ನು ಹಾಕಿದ್ದರು.

"ನೀನು, ಮಾಲತಿ ಇಬ್ಬರೂ ಮುಂದಿನ ವರ್ಷ ಅಮೆರಿಕಾಗೆ ಹೋಗಿ ಬರುವಿರಂತೆ. ಈ ಸಣ್ಣ ನೌಕರಿಗಳಿಗೆ ಸೇರುವುದು ಹುಚ್ಚುತನ. ಅದಕ್ಕೆ ಮೊದಲು ನೀನು ಲಲಿತೆಗೊಂದು ಒಳ್ಳೆಯ ವರ ನಿಷ್ಕರ್ಷೆ ಮಾಡಬೇಕು. ನಾನು ನಾಲ್ಕಾರು ಕಡೆ ನೋಡಿದ್ದೇನೆ. ಅವುಗಳಲ್ಲಿ ಯಾವುದಾದರೂ...."

ಮಾಲತಿ ಕೆಲಸಕ್ಕೆ ಸೇರಿದ ಸಮಾಚಾರ ಕೇಳಿ ಅವರಿಗೆ ವ್ಯಥೆಯೇ ಆಯಿತು.

"ಮನೆಯಲ್ಲಿ ಆರಾಮದಿಂದ ಇರಬೇಕಾದ ಹೆಣ್ಣುಮಕ್ಕಳು ಸಂಪಾದನೆಗೆ ಹೊರಡಬಾರದಮ್ಮ. ಮಕ್ಕಳಿಗೆ ಸದಾ ತಾಯಿಯ ನೇತೃತ್ವ ಬೇಕು. ಇಲ್ಲಿಂದಲೇ ನಿನ್ನ ಕೆಲಸಕ್ಕೆ ಒಂದು ರಾಜೀನಾಮೆ ಪತ್ರಹಾಕು" ಎಂದರು.

ಮಾಲತಿ ಅವರು ಹೇಳಿದ ಕೂಡಲೇ, ರಾಜೀನಾಮೆಯ ಪತ್ರವನ್ನು ಬರೆದು ಹಾಕಿಬಿಟ್ಟಳು,

ನಾರಾಯಣ ಅದನ್ನು ನೋಡಿ ಗೊಣಗಿಕೊಂಡ,

"ನಾನು ಹೇಳಿದಾಗ ಮಾಡಿದ್ದರೆ ಏನಾಗುತ್ತಿತ್ತೋ!"

ಎರಡು ಮೂರು ದಿನಗಳು ಕಳೆದ ಮೇಲೆ ಒಂದು ದಿವಸ ಗೋವಿಂದಪ್ಪನವರ ಕೊಠಡಿಯಲ್ಲಿ ವಿಶ್ವಂಭರಯ್ಯನವರ ಮಾತು ಬಂಧಿತು.

"ಈಗ್ಗೆ ಹತ್ತಿರ ಹತ್ತಿರ ಮೂರು ತಿಂಗಳ ಹಿಂದೆ ವಿಶ್ವಂಭರಯ್ಯ ನನಗೆ ಕಾಗದ ಬರೆದಿದ್ದು" ಎಂದ ನಾರಾಯಣ.

"ಅವರ ಅಳಿಯಂದಿರ ಮನೆಗೆ ನಮ್ಮನ್ನು ಊಟಕ್ಕೆ ಕರೆದಿದ್ದರು" ಎಂದು ಮಾಲತಿ ಹೇಳಿದಳು.

"ವಿಶ್ವಂಭರನೇ ಕಾಗದ ಬರೆದಿದ್ದುದು ? ಕೇಳಿದೆಯಾ ಯಶೋದ ? 'ನಿಮ್ಮ ಹುಡುಗ ಬೆಂಗಳೂರಿನಲ್ಲಿ ಇಲ್ಲ ಅಂತ ಕೇಳಿದೆ' ಅಂತ ಇಲ್ಲಿ ಹೇಳಿದ." ಗೋವಿಂದಪ್ಪ ಹೇಳಿದರು.

"ಬೇಕು ಅಂತ ಸುಳ್ಳು ಹೇಳಿದ್ದಾನೆ. ಏಕೆ ಹಾಗೆ ಮಾಡಿದನೋ? ಅವನ ಮಗ ವಿಶ್ವನಾಥನಿಗೆ ಲಲಿತೆಯನ್ನು ಕೊಡುವುದಿಲ್ಲ ಎಂತಲೋ ಏನೋ"

"ಆವಾಗ ಆ ಮಾತೆಲ್ಲಿ ಬಂದಿತ್ತು ಯಶೋದ?"

"ಅಪ್ಪ ನೀವು ಹೇಳುವುದು ನನಗೆ ಅರ್ಥವಾಗಲಿಲ್ಲ. ವಿಶ್ವಂಭರಯ್ಯನವರಿಗೆ ಈಗ ಮೂರು ನಾಲ್ಕು ತಿಂಗಳಿಂದ ನನ್ನ ವಿಳಾಸ ಗೊತ್ತೇ ಇದೆ. ಅವರು ಯಾವಾಗ ನಿಮಗೆ ನಾನು "ಬೆಂಗಳೂರಿನಲ್ಲಿ ಇಲ್ಲ ಅಂತ ಹೇಳಿದ್ದು ? ನಾನು ಕೊಂಚ ದಿನ ನೀಲಗಿರಿಗೆ ಹೋಗಿದ್ದೆ. ಆದರೆ ಆ ವಿಳಾಸವೂ ಅವರ ಅಳಿಯಂದಿರಿಗೆ ಗೊತ್ತಿತ್ತು''

ಯಶೋದಮ್ಮ ಹೇಳಿದರು,

"ನಾರಾಯಣ ಅದೇನೋ ಮಾಡಬೇಕು ಅಂತ ಅವನು ಹೊಂಚು ಹಾಕಿದ್ದ ಅಂತ ತೋರುತ್ತೆ........''

"ತೋರುತ್ತದೆಯಂತೆ! ನಾರಾಯಣ, ಈ ಊರಿಗೆ ನಾವು ಬಂದ ಲಾಗಾಯ್ತು, ಅವನೇನು ಮಾಡುತ್ತಿದ್ದ ಗೊತ್ತೇ ? ನಿತ್ಯ ಬರುವುದು ಮನೆಗೆ, ನಿನ್ನ ವಿಚಾರವಾಗಿ ಏನೇನೋ ಮಾತನಾಡಿ ನನ್ನನ್ನು ರೇಗಿಸುವುದು. ಬಹಳ ಚಾಲೂಕು ಮಾತಿನ ಮನುಷ್ಯ ಅವನು. ನಿನ್ನ ಹೆಸರನ್ನು ಹೇಳಿದರೆ ನಾನು ಉರಿದುಬೀಳಬೇಕು ಹಾಗೆ ಮಾಡಿದ ಕೆಲವು ದಿನ.''

"ಬಳಿಕ ಸಮಯ ಸಾಧಿಸಿ ಸೂಚಿಸಿದ, ನಮ್ಮ ಲಲಿತೆಯನ್ನು ತನ್ನ ಮಗನಿಗೆ ತಂದುಕೊಳ್ಳುವುದಕ್ಕೆ ಸಿದ್ಧನಿದ್ದೇನೆ ಅಂತ.'' ಯಶೋದಮ್ಮ ಹೇಳಿದರು.

"ಅವನು ಹೇಳಿದ ರೀತಿ ನೆನಪಿದೆ ತಾನೇ ಯಶೋದ ? 'ಅಣ್ಣ ಹೀಗೆಲ್ಲಾ ಆಡು ಮನೆಯಿಂದ ದೂರವಿದ್ದಾನೆ ಎಂದರೆ ತಂಗಿಯ ಸ್ವಭಾವ

ಇನ್ನು ಹೇಗೋ ಎಂದು ಜನ ಸಂಶಯಪಡುತ್ತಾರೆ. ಒಳ್ಳೆಯ ವರ ಸಿಗುವುದಿಲ್ಲ. ನಾನು ನಿಮಗಾಗಿ ಇದಕ್ಕೆ ಒಪ್ಪುತ್ತೇನೆ....' ಇತ್ಯಾದಿ ಪುರಾಣ ಹೇಳಿದ. ನಾವು ಎಂಥ ದಡ್ಡರು! ಅವನು ಹೇಳಿದ್ದನ್ನೆಲ್ಲಾ ನಂಬಿದೆವು....''

"ಲಲಿತೆಗೆ ಮಾತ್ರ ಅವರನ್ನು ಕಂಡರೆ ಆಗುತ್ತಿರಲಿಲ್ಲ''

"ಆಮೇಲೆ ಏನು ಮಾಡಿದ ವಿಶ್ವಂಭರ? ಒಂದು ದಿನ ನನಗೆ ಹೇಳುತ್ತಾನೆ, 'ಈಗಿನ ಕಾಲದ ಮಕ್ಕಳು. ನೆಚ್ಚುವುದಕ್ಕಾಗುವುದಿಲ್ಲ ಅವರನ್ನು. ನಾರಾಯಣ ಮತ್ತೆ ಬಂದು ನಿಮ್ಮನ್ನು ಗೋಳು ಹುಯ್ಕೋ ಬಹುದು. ಹಾಗಾಗದಂತೆ ಅವನಿಗೆ ಮೂರು ಕಾಸನ್ನೂ ಕೊಡದೆ ಆಸ್ತಿ ಯನ್ನೆಲ್ಲ ಲಲಿತೆಯ ಹೆಸರಿಗೆ ಬರೆದುಬಿಡಿ ಅಂತ. ಆಗ ನನಗೆ ಅನುಮಾನ ಶುರುವಾಯಿತು, ಇವನು ದುಡ್ಡಿಗೇ ಇಷ್ಟು ನಮ್ಮನ್ನು ಆಶ್ರಯಿಸುತ್ತಿರುವುದು ಅಂತ. ಅವನು ಹೀಗೆ ಮಾತನಾಡಲು ಪ್ರಾರಂಭ ಮಾಡುವ ವೇಳೆಗೆ ನನಗೆ ನಿನ್ನ ಮೇಲೆ ಕೋಪ ಇಳಿಮುಖವಾಗಿತ್ತು, "ಹೀಗೆ ಬೇಡ, ನಾರಾಯಣನ ವಿಷಯ ತಿಳಿದರೆ ಅವನಿಗೆ ಸ್ವಲ್ಪ ಕೊಟ್ಟು ಉಳಿದುದನ್ನು ಲಲಿತೆಗೆ ಕೊಡಬಹುದು'' ಎಂದೆ. "ಹಾಗಾದರೆ ನಾನು ಅವನನ್ನು ಹುಡುಕಿಸುತ್ತೇನೆ''ಎಂದ. ನಾವು ಅನಂತರ ನಮ್ಮ ವಿಳಾಸ, ವನಜಮ್ಮನವರ ಮನೆಯವರ ವಿಳಾಸವೆರಡನ್ನೂ ಕೊಟ್ಟೆವು. ಕೆಲವು ದಿನಗಳಾದಮೇಲೆ ಬಂದು ಹೇಳಿದ, ನೀನು ಬೆಂಗಳೂರಲ್ಲಿ ಇಲ್ಲವೇ ಇಲ್ಲ ಅಂತ. ದಿನಕ್ಕೊಂದು ಕಥೆ ತರುತ್ತಿದ್ದ, "ಅವರು ಹೀಗೆ ಹೇಳಿದರು, ಇವರು ಹಾಗೆ ಹೇಳಿದರು" ಅಂತ. ಅದೆಂತಹ ಕಥೆಗಳು! ಎಷ್ಟು ವಾತ್ಸಲ್ಯವಿದ್ದರೂ ದ್ವೇಷ ಹುಟ್ಟಬೇಕು ಅಂತಹವು."

"ಆದರೆ'' ಯಶೋದಮ್ಮ ನಗುತ್ತ ಹೇಳಿದರು, "ಅವುಗಳ ಪರಿಣಾಮ ಇವರ ಮೇಲೆ ಬೇರೆ ವಿಧದಲ್ಲಿ ಆಯಿತು. "ನನ್ನಿಂದ ನನ್ನ ಮಗ ಕೆಟ್ಟು ಹೋದ'' ಎಂದುಕೊಂಡರಂತೆ. ಇನ್ನು ನಿನ್ನ ಮೇಲೆ ಹೇಗೆ ಕೋಪವಿರುತ್ತದೆ? ಎಂದೋ ಕೋಪ ಪುನಃ ವಾತ್ಸಲ್ಯಕ್ಕೆ ಎಡೆ ಕೊಟ್ಟಿತ್ತು. ಆದರೆ ಮೇಲೆ ಮೇಲೆ ಬಿಗುಮಾನ. ಅದೊಂದಿಲ್ಲದಿದ್ದರೆ ನಾನೇ ಅನಂತನಿಗೆ ಬರೆದು ನಿನ್ನನ್ನು ಕರೆಯಿಸುತ್ತಿದ್ದೆ."

“ಸ್ವಲ್ಪ ತಡೆ ಯಶೋದ, ಅವನಿಗೆ ಪೂರ್ತಿ ಕಥೆ ಹೇಳೋಣ’’ ಎಂದರು ಗೋವಿಂದಪ್ಪ, “ಆಮೇಲೆ ಇವನು ದಿನವಹಿ ನನಗೆ ಲಲಿತೆಯ ಹೆಸರಿಗೆ ಆಸ್ತಿ ಬರೆಯಬೇಕೆಂದು ಒತ್ತಾಯ ಮಾಡತೊಡಗಿದ. ಆದಷ್ಟು ಬೇಗ ಲಲಿತೆಯನ್ನು ವಿಶ್ವನಾಥನಿಗೆ ಕೊಟ್ಟು ಮದುವೆಯನ್ನೂ ಮಾಡಿಸಬೇಕೆಂದು ಅವನ ಇಚ್ಛೆ. ಆದರೆ ನನಗೆ ಒಂದು ಕಡೆ ಇವನು ಆಸ್ತಿಯ ಮಾತನ್ನಾಡುವುದು ಇಷ್ಟವಾಗುತ್ತಿರಲಿಲ್ಲ. ಜೊತೆಗೆ ಲಲಿತೆಗೆ ಅವನನ್ನು ಕಂಡರೆ ಆಗುವುದಿಲ್ಲವೆಂದೂ ತಿಳಿಯಬಂದಿತು. ಅದಕ್ಕೆ ಒಂದು ದಿನ ಸುಮ್ಮನೆ ಹೇಳಿದೆ, “ಪಿತ್ರಾರ್ಜಿತ ಆಸ್ತಿ ನನ್ನದು ವಿಶ್ವಂಭರ. ಲಲಿತೆಗೆ ಅದರಲ್ಲಿ ಏನೂ ಬರುವುದಿಲ್ಲ’’ ಅಂತ. ಮಾರನೇ ದಿನದಿಂದ ಇತ್ತ ಕಡೆ ಅವನು ತಲೆ ಹಾಕಿದ್ದರೆ ಕೇಳು’’

“ನೀವು ಅಷ್ಟೇ ಅಂದಿರಾ? ‘‘ಆಸ್ತಿಯ ಆಶೆ ಬಿಡು ವಿಶ್ವಂಭರ.’’ ಎಂದಿರಿ. ಅವನು ಅದಕ್ಕೆ ಹೇಳಿದ, ‘‘ಒಳ್ಳೆಯದು, ನೋಡುತ್ತಿರಿ. ಈ ಆಸ್ತಿಯ ಉಪಭೋಗ ನನ್ನ ವಂಶಜರಿಗೆ ದೊರೆಯುವಂತೆ ಮಾಡದಿದ್ದರೆ ನನ್ನ ಹೆಸರು ವಿಶ್ವಂಭರನಲ್ಲ” ಎಂದು ನಕ್ಕರು ಯಶೋದಮ್ಮ “ಒಳ್ಳೆ ಜಗಳಗಂಟ ಗಂಡಸರು.’’ ಎಂದು

ನಾರಾಯಣನಿಗೆ ಆ ನಿಮಿಷದಲ್ಲಿ ಎಲ್ಲ ಅರ್ಥವಾಯಿತು. ಮಾಲತಿಯ ಕಡೆಗೆ ನೋಡಿದ. ಅವಳೂ ಗಂಭೀರಳಾಗಿದ್ದಳು.

ರಾತ್ರಿ, ನಾರಾಯಣ ಮಾಲತಿಗೆ ಬೇಗ ನಿದ್ರೆ ಬರಲಿಲ್ಲ. ಸ್ವಲ್ಪ ಹೊತ್ತು ಮಾತನಾಡುತ್ತಿದ್ದರು. ಬಳಿಕ ನಾರಾಯಣ ಅವಳಿಗೆ ಹೇಳಿದ,

“ಮಾಲಾ, ವಿಶ್ವಂಭರಯ್ಯ ಬಹಳ ಬುದ್ಧಿಯನ್ನು ಉಪಯೋಗಿಸಿದ್ದರು. ನಾನು ಹೆಚ್ಚು ಕಡಿಮೆ ಅವರ ಬಲೆಗೊಳಗೆ ಸಿಕ್ಕಿದ್ದೆ. ನಿನಗೆ ಆ ವಿಷಯವನ್ನೆಲ್ಲಾ ಹೇಳದಿದ್ದರೆ ನನಗೆ ಮನಸ್ಸು ಹಗುರವಾಗುವುದಿಲ್ಲ....”

ಮಧ್ಯೆ ಬಾಯಿ ಹಾಕಿ ಮಾಲತಿ ಕೇಳಿದಳು

“ನನ್ನದೊಂದು ಮಾತನ್ನು ನಡೆಯಿಸಿಕೊಡುತ್ತೀರಾ?”

"ಏನು ಹೇಳು ಮಾಲಾ. ಖಂಡಿತ ನಡೆಯಿಸುತ್ತೇನೆ"

ಮಾಲತಿ ಗಂಭೀರವಾಗಿ ನಸುನಗುತ್ತ ಹೇಳಿದಳು,

"ಈ ವಿಷಯ ನನಗೆ ಸುಮಾರಾಗಿ ಗೊತ್ತು. ಹೆಚ್ಚಾಗಿ ಅದನ್ನು ತಿಳಿದುಕೊಳ್ಳುವುದು ಬೇಡವೆನ್ನಿಸುತ್ತದೆ. ನೀವು ದಯೆಯಿಟ್ಟು ನನಗೆ ಏನನ್ನೂ ಹೇಳಬೇಡಿ"

"ಈ ವಿಷಯ ಗೊತ್ತೇ ನಿನಗೆ ಮಾಲಾ? ಅದಕ್ಕೆ ಅವತ್ತು ಕಾಳಿಯ ಅವತಾರ ತಾಳಿದ್ದು!" ಎಂದು ವಿಸ್ಮಿತನಾಗಿ ಕೇಳಿದ ನಾರಾಯಣ, "ಅಷ್ಟು ದೊಡ್ಡ ಅಪರಾಧಕ್ಕೆ ನಿನ್ನ ಕೋಪ ಬಹಳ ಚಿಕ್ಕ ಶಿಕ್ಷೆ, ಮಾಲಾ. ಏನೇನೂ ಸಾಲದು"

"ನಿಮ್ಮ ಅಪರಾಧವೇನೋ ದೊಡ್ಡದು" ಯೋಚಿಸುತ್ತ ನುಡಿದಳು ಮಾಲತಿ.

"ನಿಜ. ಅದಕ್ಕೆ ನೀನು ನನಗೆ ಏನು ಶಿಕ್ಷೆಯನ್ನು ಬೇಕಾದರೂ ಕೊಡು, ಸಂತೋಷದಿಂದ ಅನುಭವಿಸುತ್ತೇನೆ"

ಮಾಲತಿ ನಕ್ಕಳು. ನಾರಾಯಣ ಕೊಂಚ ಹೊತ್ತು ಯೋಚಿಸುತ್ತ ಇದ್ದು ಅನಂತರದಲ್ಲಿ ಮತ್ತೆ ಮೃದುವಾಗಿ ಕೇಳಿದ.

"ನನಗೆ ಏನು ಶಿಕ್ಷೆಯನ್ನೂ ಕೊಡುವುದಿಲ್ಲವೆ, ಮಾಲಾ?"

ಮಾಲತಿ ಉತ್ತರ ಕೊಡಲಿಲ್ಲ.

"ಮಾಲಾ! ಮಾಲಾ!"

"ಓ!" ನಿದ್ರೆಯಿಂದ ಜಡವಾದ ಸ್ವರದಲ್ಲಿ ಮಾಲತಿ ಉತ್ತರ ಕೊಟ್ಟು ಪಕ್ಕಕ್ಕೆ ತಿರುಗಿದಳು. ನಾರಾಯಣ ದೀಪಹಾಕಿ ನೋಡಿದ. ಮಾಲತಿ ಶಾಂತಳಾಗಿ ನಿದ್ರಿಸುತ್ತಿದ್ದಳು. ವಿಸ್ಮಿತನಾಗಿ ಸ್ವಲ್ಪ ಹೊತ್ತು ಹಾಗೇ ಅವಳ ನಿದ್ರಾಸಕ್ತ ಪ್ರಸನ್ನ ಮುಖವನ್ನು ಅವನು ನೋಡಿದ. ನೋಡ ನೋಡುತ್ತ ಅವನಿಗೆ ನಗು ಬಂದಿತು. ಸಣ್ಣಗೆ ತನ್ನಲ್ಲಿ ತಾನೇ ನಗುತ್ತ ದೀಪವಾರಿಸಿ ಹಾಸಿಗೆಯ ಮೇಲೆ ಉರುಳಿಕೊಂಡು ಕಣ್ಣುಗಳನ್ನು ಮುಚ್ಚಿದ. ಕ್ಷಣಾರ್ಧದಲ್ಲಿ ಅವನಿಗೂ ಜೋಂಪು ಹತ್ತಿತು.

---